# ಸಮಗ್ರ ದಾಸ ಸಾಹಿತ್ಯ

ಸಂಪುಟ : ೬ - ಭಾಗ ೧



## ಕಾಖಂಡಕಿ ಶ್ರೀ ಮಹಿಪತಿರಾಯರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ
ಸಂಪುಟ : ೬–ಭಾಗ ೧

# ಕಾಖಂಡಕಿ ಶ್ರೀ ಮಹಿಪತಿರಾಯರ ಕೀರ್ತನೆಗಳು

## (ಭಾಗ–೧)

*ಸಂಪಾದಕರು*
ಡಾ. ಕೃಷ್ಣ ಕೊಲ್ಹಾರಕುಲಕರ್ಣಿ

ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA VOLUME - 6 Part 1** :
*Kakandaki Shri Mahipathidasara Keerthanegalu,* Edited by Dr. Krishna Kolharakulakarni and Published by Sri. Y. K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 63+೩೨೨


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

**ಮುದ್ರಣ ನಿರ್ವಹಣೆ :**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

**ಮುದ್ರಕರು :**

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩.

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ ಸಾಹಿತ್ಯ-ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ - ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ

ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು ; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿಡಿ ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯು ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ, ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿಡಿ ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮುವ್ವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು), ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ.ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ಸುಬ್ರಮಣ್ಯಂ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ ಪಾಮರರನ್ನು ಏಕ ಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಓದಲಾರದ ಕನ್ನಡ ಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ), ನಾಲ್ಕುನೂರಕ್ಕೂ ಮಿಕ್ಕಿದ ದಾಸರ ಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' - ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ

ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ–ಪೀಳಿಗೆ' ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯವು ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ–ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿದ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾ ನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರ ಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದು ಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದ ವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದು, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದು ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು*, ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿ ಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು ಕೆಳಗೆ ' ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿ ಕೊಡಬೇಕು – ಎಂಬುದಾಗಿ ನಿರ್ಧರಿಸಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ ಎಂದು ಘೋಷಿಸಿದರು. ಅದರಂತೆ ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಶ್ರೀ ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿದೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

ಮಹಿಪತಿರಾಯರು ವಿಜಾಪುರ ಜಿಲ್ಲೆಯ ಕಾಖಂಡಕಿ ಗ್ರಾಮದಲ್ಲಿ ನೆಲೆಸಿದವರು. ಮಧ್ಯಯುಗೀನ ಕಾಲದ ಮುಸಲ್ಮಾನರ ಅರಸೊತ್ತಿಗೆಯಲ್ಲಿ ಬಾಳಿದವರು.

೧೪ನೇಯ ಶತಮಾನದ ಪ್ರಾರಂಭದಲ್ಲಿ ದೇವಗಿರಿ ಯಾದವರ ತರ್ದವಾಡಿ-೧೦೦೦ದ ಭಾಗವಾಗಿದ್ದ ವಿಜಾಪುರವು ಅನಂತರ ಮುಸ್ಲಿಮರಿಗೆ ಸೇರಿ ೧೫ನೆಯ ಶತಮಾನದ ಉತ್ತರಾರ್ಧದಲ್ಲಿ ಬೀದರದಿಂದ ನಡೆಯುತ್ತಿದ್ದ ಬಹಮನಿ ರಾಜ್ಯದಲ್ಲಿಯ ಒಂದು ಸುಭೆಯಾಗಿತ್ತು. ಕ್ರಿ. ಶ. ೧೪೭೧ ರಲ್ಲಿ ಬಹಮನಿ ರಾಜ್ಯದ ಪ್ರಧಾನ ಮಂತ್ರಿ ಮಹಮೂದ ಗವಾನನ ವಧೆಯಾದಾಗ ರಾಜ್ಯದಲ್ಲಿ ತುಂಬ ಗಲಭೆಯಾಯಿತು. ಅದು ವಿಕೋಪಕ್ಕೆ ಹೋಗಿ ಅಹ್ಮದನಗರದ ಭೈರಿ ನಿಜಾಮುಶಹನು ಬಂಡೆದ್ದು ಬಹಮನಿ ರಾಜ್ಯದಿಂದ ಹೊರಬಿದ್ದನು. ಅಹ್ಮದನಗರವನ್ನು ರಾಜಧಾನಿಯಾಗಿ ಮಾಡಿಕೊಂಡು ತನ್ನ ಸ್ವಾತಂತ್ರ್ಯವನ್ನು ಸಾರಿದನು. ಅಂದು ವಿಜಾಪುರದಲ್ಲಿ ರಾಜ್ಯಪಾಲನಾಗಿದ್ದ ತುರ್ಕ ವಂಶದ ಯುಸುಫಖಾನನು ಕೂಡ ನಿಜಾಮಶಾಹನ ದಾರಿಯಲ್ಲಿ ನಡೆದು ಕ್ರಿ.ಶ ೧೪೮೯ರಲ್ಲಿ ತನ್ನ ಸ್ವಾತಂತ್ರ್ಯವನ್ನು ಸಾರಿ ವಿಜಾಪುರದಲ್ಲಿ ಹೊಸ 'ಆದಿಲಶಾಹಿ' ರಾಜ್ಯವನ್ನು ಪ್ರಾರಂಭಿಸಿದನು.

ಯುಸುಫಖಾನನು (ಕ್ರಿ.ಶ.೧೪೮೯-೧೫೧೦) ವಿಜಾಪುರದಲ್ಲಿ ತನ್ನ ರಾಜ್ಯವನ್ನು ಪ್ರಾರಂಭಿಸಿದ ಮೇಲೆ, ಸಹ್ಯಾದ್ರಿ ಪರ್ವತದ ಒಂದು ಕೋಟೆಯಲ್ಲಿ ಸ್ವತಂತ್ರವಾಗಿ ರಾಜ್ಯ ನಿರ್ವಹಿಸುತ್ತಿದ್ದ ಮುಕುಂದರಾವ್ ಎಂಬ ಮರಾಠಾ ಸರದಾರನನ್ನು ಸೋಲಿಸಿ ಅವನ ತಂಗಿಯನ್ನು ಮದುವೆಯಾದನು. ಅವಳಿಗೆ

'ಬೂಬೂಜಿ ಖಾನಮ್' ಎಂದು ಹೆಸರನ್ನು ಇಟ್ಟಿದ್ದನು. ಇವರಿಬ್ಬರ ಸಂತತಿಯೇ ಮುಂದಿನ ದಿನಗಳಲ್ಲಿ ವಿಜಾಪುರ ರಾಜಧಾನಿಯಿಂದ ಆದಿಲಶಾಹಿ ರಾಜ್ಯವನ್ನು ಆಳಿತು.

ಕ್ರಿ.ಶ ೧೪೮೯ ರಿಂದ ೧೬೮೬ ರ ವರೆಗೆ ಸುಮಾರು ಎರಡು ಶತಕಗಳ ಕಾಲ ಬಾಳಿದ ಆದಿಲಶಾಹಿ ರಾಜಮನೆತನದಲ್ಲಿ ಎಂಟು ಬಾದಶಹರಾದರು. ಅವರಲ್ಲಿಯ ಕೊನೆಯ ಎರಡನೆಯ ಅಲಿ ಆದಿಲಶಹ (ಕ್ರಿ.ಶ ೧೬೫೬–೧೬೭೨) ಹಾಗೂ ಸಿಕಂದರ (ಕ್ರಿ.ಶ ೧೬೭೨–೧೬೮೬) ಆದಿಲಶಹನ ಕಾಲದಲ್ಲಿ ಬದುಕಿ ಬಾಳಿದವರು ಮಹಿಪತಿರಾಯರು.

ಯುಸುಫಖಾನನು ವಿಜಾಪುರದಲ್ಲಿ ತನ್ನ ಸ್ವತಂತ್ರ ರಾಜ್ಯವನ್ನು ಪ್ರಾರಂಭಿಸುವ ಹೊತ್ತಿಗೆ ತುಂಗಭದ್ರೆಯ ದಡದಲ್ಲಿಯ ವಿಜಯನಗರ ಸಾಮ್ರಾಜ್ಯವು ತನ್ನ ಉಚ್ಛ್ರಾಯ ಸ್ಥಿತಿಯಲ್ಲಿ ಇದ್ದಿತು. ರಾಜಕೀಯ, ಸಾಮಾಜಿಕ, ಧಾರ್ಮಿಕ ರಂಗಗಳಲ್ಲಿ ತನ್ನದೇ ಆದ ವೈಶಿಷ್ಟ್ಯಗಳೊಂದಿಗೆ ಮೆರೆಯುತ್ತಿತ್ತು. ಸಾಹಿತ್ಯ, ಸಂಗೀತ ಶಿಲ್ಪಕಲೆಗಳು ಕೂಡ ಅಭಿವೃದ್ಧಿ ಹೊಂದಿದ್ದವು. ಅದರ ಪ್ರಭಾವ ಚಿಕ್ಕದಾಗಿದ್ದರೂ ವಿಜಾಪುರ ಆದಿಲಶಾಹಿ ರಾಜ್ಯದಲ್ಲಿ ಗಾಢವಾಗಿದ್ದಿತು.

ಹೆಂಡತಿ ಹಿಂದುವಾಗಿದ್ದರಿಂದ ಅವಳು ಮತಾಂತರಗೊಂಡಿದ್ದರೂ ಆಡಳಿತದಲ್ಲಿ ಹಿಂದುಗಳ ವಿಶೇಷತಃ ಮರಾಠಿ ಸರದಾರರು ಸ್ವ–ಇಚ್ಛೆಯಿಂದ ಪಾಲುಗೊಳ್ಳಲು ಸಾಧ್ಯವಾಯಿತು. ಹೀಗೆ ರಾಜ್ಯದ ಆಡಳಿತ ವಿಶೇಷವಾಗಿ ಸೈನ್ಯದಲ್ಲಿ ಒಂದೆಡೆ ಮರಾಠಿ ಸರದಾರರು ಸಹಾಯಕರಾಗಿದ್ದರೆ, ಸ್ಥಳೀಯ ಆಡಳಿತದಲ್ಲಿ ಕನ್ನಡ, ಮರಾಠಿ ಹಾಗು ತೆಲುಗು ಭಾಷೆಯ ಹಿಂದುಗಳು ಬಹು ಮುಖ್ಯ ಪಾತ್ರಗಳನ್ನು ವಹಿಸಿದ್ದರು. ಗ್ರಾಮಾಂತರ ಜನತೆಯ ಸಂಪರ್ಕ ಹೊಂದಲು ಸಳೀಯ ಭಾಷೆಯ ಜನರ ಸಂಪರ್ಕ ಹಾಗೂ ಸಹಕಾರ ಆಳುವವರಿಗೆ ಅವಶ್ಯವಾಗಿದ್ದುದು ಸಹಜವಾಗಿತ್ತು. ರಾಜ್ಯ ನಿರ್ವಹಣೆಗೆ ಕಂದಾಯ ವಸೂಲಿ ಬಹು ಮಹತ್ವದ್ದಾಗಿತ್ತು. ಅದನ್ನು ನಿರ್ವಹಿಸಲು ಬಹುತೇಕ ಜನ ಹಿಂದು

ಬ್ರಾಹ್ಮಣರಿದ್ದರು. ಕಾರುಕೂನ ಕುಲಕರ್ಣಿಗಳಾಗಿದ್ದ ಅವರು ಕಂದಾಯ ವಸೂಲಿಯಲ್ಲಿ ಸಹಾಯಕರಾಗಿದ್ದರು. ಇವರುಗಳಲ್ಲಿ ಜಾಣರಾದವರು ರಾಜಧಾನಿಗೆ ಬಂದು ವಕೀಲರಾಗಿಯೋ, ಇಲ್ಲವೆ ರಾಯಭಾರಿಗಳಾಗಿಯೋ ಕಾರ್ಯನಿರ್ವಹಿಸುತ್ತಿದ್ದರು. ವಿಶೇಷತಃ ವಸೂಲಿಯ ಲೆಕ್ಕ ಪತ್ರಗಳನ್ನು ಇಡುವಲ್ಲಿ ಹಾಗು ತಪಶೀಲುಗಳನ್ನು ಬರೆದಿಡುವಲ್ಲಿ ನುರಿತವರಾದದ್ದರಿಂದ ಇವರಲ್ಲಿಯ ಅನೇಕ ಜನರು ರಾಜ್ಯ, ಪ್ರಾಂತ, ವಿಭಾಗ ಮಟ್ಟದ ಖಜಾನೆಗಳಲ್ಲಿ ಹಾಗು ಕಂದಾಯ ಇಲಾಖೆಗಳಲ್ಲಿ ಮೇಲಿನ ಸ್ಥಾನವನ್ನು ಹೊಂದಿದವರಾಗಿದ್ದರು. ಇಂಥ ಉನ್ನತ ಮಟ್ಟದ ಸ್ಥಾನವನ್ನು ಪಡೆದವರಲ್ಲಿ, ಮೂಲತಃ ಐಗಳಿಯ ಕುಲಕರ್ಣಿಗಳಾದ ಮಹಿಪತಿರಾಯರು ಖಜಾನೆಯ ಅಧಿಕಾರಿಗಳಾಗಿದ್ದರೆಂದೂ ನಂಬಲಾಗಿದೆ. ಅವರೆ ಮುಂದೆ ಕಾಖಂಡಕಿಯಲ್ಲಿ ನೆಲೆಸಿ 'ಕಾಖಂಡಕಿ ಮಹಿಪತಿರಾಯ' ರೆಂದು ಪ್ರಸಿದ್ಧರಾದರು.

ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯನ್ನು ಗಮನಿಸಿದರೆ ಆದಿಲಶಾಹಿ ರಾಜ್ಯದ ಆಡಳಿತದಲ್ಲಿ ಕೇವಲ ಮುಸಲ್ಮಾನರ ಕೈವಾಡವಿರಲಿಲ್ಲ ಎಂಬುದು ಗೊತ್ತಾಗುತ್ತದೆ. ಹಿಂದುಗಳು ಕೂಡ ಪ್ರಭಾವಯುತರಾಗಿದ್ದರು. ಆದ್ದರಿಂದ ಆಳುವ ಸುಲ್ತಾನರಿಗೆ ಮತ್ತು ಮುಸಲ್ಮಾನ ಅಧಿಕಾರಿಗಳಿಗೆ ತಮ್ಮ ಜಾತ್ಯಂಧತೆಯನ್ನಾಗಲಿ, ಧಾರ್ಮಿಕ ಅಸಹಿಷ್ಣುತೆಯನ್ನಾಗಲಿ ನೇರವಾಗಿ ತೋರಿಸಲು ಅವಕಾಶಗಳು ಕಡಿಮೆಯಾಗಿದ್ದವು. ಹಿಂದುಗಳು ಹಾಗು ಹಿಂದು ಧರ್ಮದ ಕುರಿತು ಸಹಾನುಭೂತಿಯುಳ್ಳವರಾಗಿದ್ದರು ಎನ್ನಬಹುದು. ಆದಿಲಶಾಹಿ ರಾಜ್ಯದಲ್ಲಿಯ ಅನೇಕ ಹಿಂದು ಗುಡಿಗುಂಡಾರಗಳಿಗೆ ಬಾದಶಹರು, ಇತರ ಉನ್ನತ ಅಧಿಕಾರಿಗಳು ನೀಡಿದ ದತ್ತಿಗಳ ನಿದರ್ಶನಗಳು ಇಂದಿಗೂ ಹೇರಳವಾಗಿ ದೊರೆಯುತ್ತವೆ. ಆದಾಗ್ಯೂ ಇಲ್ಲಿಯ ಹಿಂದುಗಳಿಗೆ ಧಾರ್ಮಿಕವಾಗಿ ಬಹು ಸೂಕ್ಷ್ಮಪರಿಸ್ಥಿತಿ ಇತ್ತು ಎಂಬುದರಲ್ಲಿ ಸಂದೇಹವಿಲ್ಲ. ಇಂಥ ಪರಿಸ್ಥಿತಿಯಲ್ಲಿ ಕೂಡ ಹಿಂದು ಸಾಧು-ಸಂತರು, ದಾಸರು, ಯೋಗಿಗಳು ತಾವು ಬದುಕಿ ಉಳಿದು ಹಿಂದು ಧರ್ಮವನ್ನು ಜೀವಂತವಾಗಿ ಇಡುವಲ್ಲಿ ಸಫಲರಾಗಿದ್ದರು-

ಎಂಬುದು ಗಮನಿಸಬೇಕಾದ ಅಂಶವಾಗಿದೆ. ಜೊತೆಗೆ ಮುಸ್ಲಿಮರನ್ನೂ ತಮ್ಮತ್ತ ಆಕರ್ಷಿಸುವಲ್ಲಿ ಆಗೀಗ ಯಶಸ್ಸನ್ನು ಕಂಡಿದ್ದಾರೆ ಎಂಬುದೂ ಗಮನಾರ್ಹವಾಗಿದೆ. ಧಾರ್ಮಿಕ ರಂಗದಲ್ಲಿ ಕ್ರಾಂತಿಯಾಗಿರದಿದ್ದರೂ ಈ ವಲಯವನ್ನು ಒಂದು ರೀತಿಯಲ್ಲಿ ಸಮತೋಲವಾಗಿ ಇಡುವಲ್ಲಿ ಸಫಲರಾಗಿದ್ದಾರೆ. ಅದಕ್ಕಾಗಿ ಅವರು ಬಳಸಿದ ದಾರಿ ಈ ಮೊದಲೆ ಕರ್ನಾಟಕದಲ್ಲಿ ರೂಪುಗೊಂಡು ಬಳಕೆಯಲ್ಲಿದ್ದ ಭಕ್ತಿ ಮಾರ್ಗವೇ ಆಗಿತ್ತು. ಹಿಂದಿನ ಶರಣರ ದಾಸರ ಪರಂಪರೆಯನ್ನು ಕಾಯ್ದುಕೊಂಡು ಅದು ಮುಂದುವರೆಯುವಲ್ಲಿ ವಿಜಾಪುರದ ರುಕ್ಮಾಂಗದ ಪಂಡಿತರು, ಸಿಂದಗಿಯ ಭೀಮಾಶಂಕರರು ಮತ್ತು ಮಕ್ಕಳು, ಕಾಖಂಡಕಿಯ ಮಹಿಪತಿರಾಯರು ಮತ್ತು ಅವರ ಮಕ್ಕಳು, ಅಗರಖೇಡದ ಆದ್ಯರು, ಗಲಗಲಿ ಅವ್ವನವರು ಮತ್ತು ಪ್ರಯಾಗಾಬಾಯಿ ಮೊದಲಾದ ಸ್ತ್ರೀ ಪುರುಷರೆಲ್ಲ ಕಾರಣರಾಗಿದ್ದಾರೆ. ಈ ಒಬ್ಬೊಬ್ಬರೂ ವೈಯಕ್ತಿಕವಾಗಿ ತಮ್ಮ ಸಾಧನೆಯನ್ನು ಮುಂದುವರೆಸಿಕೊಂಡು ಜನಸಾಮಾನ್ಯರಲ್ಲಿ ಧರ್ಮ ಜಾಗೃತಿಯನ್ನು ಉಂಟು ಮಾಡಿದರು.

## ಮಹಿಪತಿರಾಯರ ಚರಿತ್ರೆ

ಬೆಳಗಾವಿ ಜಿಲ್ಲೆಯ ಆಥಣಿ ತಾಲೂಕಿನ ಐಗಳಿ ಎಂಬ ಗ್ರಾಮದಲ್ಲಿ ೧೭ನೆಯ ಶತಮಾನದ ಮಧ್ಯದಲ್ಲಿ ಮೌನಭಾರ್ಗವ ಗೋತ್ರದ ಕೋನೇರಿರಾಯನೆಂಬ ವೈಷ್ಣವ ಬ್ರಾಹ್ಮಣನಿದ್ದನು. ಅವನಿಗೆ ಇಬ್ಬರು ಗಂಡು ಮಕ್ಕಳು. ಹಿರಿಯವನಿಗೆ ವೆಂಕಟೇಶನೆಂದೂ ಕಿರಿಯವನಿಗೆ ಗುರುರಾಯನೆಂದೂ ಹೆಸರನ್ನಿಟ್ಟಿದ್ದರು. ಗಂಡ–ಹೆಂಡತಿ, ಇಬ್ಬರು ಮಕ್ಕಳ ಉದರ ನಿರ್ವಹಣೆ ಹಾಗು ಮಕ್ಕಳ ಮುಂದಿನ ಶಿಕ್ಷಣಕ್ಕಾಗಿ ಅವರು ಊರು ಬಿಟ್ಟು ಹತ್ತಿರದಲ್ಲಿಯ ಆದಿಲಶಾಹಿ ಅರಸರ ರಾಜಧಾನಿ ವಿಜಾಪುರ ನಗರಕ್ಕೆ ಬಂದು ನೆಲೆಸಿದರು. ಸಮಕಾಲೀನ ವಿಶ್ವದ ದೊಡ್ಡನಗರ ವಿಜಾಪುರವು ವಿದ್ಯಾಪುರವೆಂದು ಹೆಸರಾಗಿತ್ತು. ಆಗ ವಿಜಾಪುರದಲ್ಲಿ ಮಹ್ಮದ ಆದಿಲಶಹನು (ಕ್ರಿ.ಶ ೧೬೨೬–೧೬೫೬) ರಾಜ್ಯವಾಳುತ್ತಿದ್ದನು. ಬಾದಶಹನ

ಆಸ್ಥಾನದಲ್ಲಿ ಮುರಾರಿಪಂತ, ಶಹಾಜಿ ಭೋಸಲೆ ಮೊದಲಾದ ಹಿಂದುಗಳು ಪ್ರಭಾವಯುತರಾಗಿದ್ದರು. ಕೋನೇರಿರಾಯ ತನ್ನ ಪೌರಾಣಿಕ ವೃತ್ತಿಯಿಂದ ಈ ಜನರ ಒಲವನ್ನು ಗಳಿಸಿ ಕುಟುಂಬದ ಪಾಲನೆ-ಪೋಷಣೆಯ ಭಾರವನ್ನು ಹಗುರು ಮಾಡಿಕೊಂಡಿದ್ದನು.

ಮಕ್ಕಳಿಬ್ಬರೂ ತಂದೆಯ ಕಣ್ಣರಿಕೆಯಲ್ಲಿ ಬೆಳೆದು ವಿದ್ಯಾಭ್ಯಾಸವನ್ನು ಪಡೆದರು. ಹಿರಿಯಮಗ ವೆಂಕಟೇಶನು ಕುಲದ ಕರ್ಣಿಕ ವೃತ್ತಿಯನ್ನು ಹಾಗು ಅಲ್ಲಿಯ ವೆಂಕಟೇಶ ದೇವರ ಅರ್ಚಕ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗಲು ಐಗಳಿಗೆ ಬಂದು ನೆಲೆಸಿದನು. ಈ ಕುಲಕರ್ಣಿಗಳ ಮನೆತನ ಇಂದಿಗೂ ಐಗಳಿಯಲ್ಲಿ ಮುಂದುವರಿದಿದೆ. ಕಿರಿಯ ಮಗ ಗುರುರಾಯನು ತಂದೆ-ತಾಯಿಗಳೊಂದಿಗೆ ವಿಜಾಪುರದಲ್ಲಿಯೇ ಉಳಿದನು. ರಾಮಾಯಣ, ಮಹಾಭಾರತ, ಭಾಗವತ ಗ್ರಂಥಗಳ ಅಭ್ಯಾಸದ ಜೊತೆಗೆ ಸಾಹಿತ್ಯದಲ್ಲಿಯೂ ಗುರುರಾಯನಿಗೆ ಆಸಕ್ತಿ ಇದ್ದಿತು. ಮಧುರ ಕಂಠ, ನಿರರ್ಗಳ ವಾಕ್ ಸರಣಿ, ಗುರುರಾಯನು ಹೇಳುತ್ತಲಿದ್ದರೆ ಕೇಳುಗರು ಮಂತ್ರಮುಗ್ಧರಾಗಿ ಕುಳಿತು ಕೊಳ್ಳುತ್ತಿದ್ದರು. ಹರಿಕಥೆ ಆತನ ಮೆಚ್ಚಿಗೆಯ ವಿಷಯವಾಗಿತ್ತು. ಸುಶ್ರಾವ್ಯ ಹರಿಕಥೆಯಿಂದಾಗಿ ಆತ ಬಹುಬೇಗ ಜನಪ್ರಿಯನಾದನು.

ಕೋನೇರಿರಾಯನ ಪರಿಚಿತ ಹಿಂದು ಸರದಾರನೊಬ್ಬನ ಮುಖಾಂತರ ಗುರುರಾಯನು ಪ್ರಾರಂಭದಲ್ಲಿ ಖವಾಸಖಾನ ಎಂಬ ಹಬಶೀ ಸರದಾರನ ಹತ್ತಿರ ಕರ್ಣಿಕ ವೃತ್ತಿಯನ್ನು ಕೈಗೊಂಡನು. ಅಂದಿನ ರಾಜ್ಯದಲ್ಲಿ ಖವಾಸಖಾನನು ದಖಣೀ ಸರದಾರರ ಮುಖ್ಯಸ್ಥನಾಗಿದ್ದನಲ್ಲದೆ ರಾಜ್ಯದಲ್ಲಿ ತುಂಬ ಪ್ರಭಾವಶಾಲಿ ವ್ಯಕ್ತಿಯಾಗಿದ್ದನು. ಅದಾಗಿ ಮಹ್ಮದ ಆದಿಲಶಹನ ಅಂತ್ಯವಾಗಿ ಅವನ ಮಗ ಎರಡನೆಯ ಅಲಿ ಆದಿಲಶಹನು ರಾಜ್ಯವಾಳುತ್ತಿದ್ದನು. ಗುರುರಾಯನ ಕೆಲಸದಲ್ಲಿಯ ಚಾಕಚಕ್ಯತೆ ಜಾಣತನ ಖವಾಸಖಾನನಿಗೆ ತುಂಬ ಪ್ರಿಯವಾಗಿತ್ತು. ಕೆಲವೇ ದಿನಗಳಲ್ಲಿ ಆತ ಖವಾಸಖಾನನ ಆಪ್ತ ಸಹಾಯಕರಲ್ಲಿ ಒಬ್ಬನಾದನು.

ಗುರುರಾಯನಿಗೆ ಚಿಕ್ಕಂದಿನಿಂದ ಆಧ್ಯಾತ್ಮದ ಕಡೆಗೆ ಒಲವು ಹೆಚ್ಚು. ಮಾಧ್ವ ಸಂಪ್ರದಾಯದ ಮನೆಯಾದ್ದರಿಂದ ಮನೆಯಲ್ಲಿ ನಿತ್ಯ ನೇಮಗಳನ್ನು ತೀರಿಸಿಕೊಂಡು, ಪಾರಾಯಣ, ಜಪ, ತಪಗಳನ್ನು ತಪ್ಪದೆ ಮಾಡುತ್ತಿದ್ದನು. ಮದುವೆಯಾಯಿತು. ಹೊನವಾಡದ ದೇಶಪಾಂಡೆ ಅವರ ಮನೆತನದ ಕನ್ಯೆ ಹೆಸರು ತಿರುಮಲಾಬಾಯಿ, ತಿಮ್ಮವ್ವ ಎಂದು ಕರೆಯುತ್ತಿದ್ದರು. ಗಂಡನ ದಿನ ನಿತ್ಯದ ಧ್ಯಾನ, ಜಪ–ತಪ, ಅಭ್ಯಾಸ, ರಾಜಕಾರಣ, ಅನ್ನಸಂತರ್ಪಣೆ, ಕೀರ್ತನೆ, ಪ್ರವಚನ ಎಲ್ಲದರಲ್ಲೂ ಸಹಾಯ ನೀಡಿದಳು. ತಾನೂ ಉಪಾಸನೆಯಲ್ಲಿ ನಿರತಳಾದಳು. ಅವಳ ಉಪಾಸನೆಯ ಫಲವೆಂಬಂತೆ ಗಂಡನ ಅಂತಸ್ತು ಮರ್ಯಾದೆ ದಿನದಿಂದ ದಿನಕ್ಕೆ ಪ್ರವರ್ಧಮಾನವಾಗತೊಡಗಿತು. ಖವಾಸಖಾನನ ಮುಖಾಂತರ ಬಾದಶಹನ ಪರಿಚಯವಾಗಿ ಗಂಡನ ಸೇವೆ ರಾಜದರಬಾರದಲ್ಲಿ ಪ್ರಾರಂಭವಾಯಿತು. ಕರ್ಣಿಕ ಗುರುರಾಯ 'ಅಖ್ತಿಯಾರ್' ಗುರುರಾವ್ ಆದರು.

ದಿನದಂತೆ ಅಂದು ರಾಯರು ಮನೆಯಿಂದ ರಾಜದರಬಾರಕ್ಕೆ ಬರುತ್ತಿದ್ದರು. ದಾರಿಯಲ್ಲಿ ಒಬ್ಬ ಬತ್ತಲೆ ಫಕೀರ ಅವರನ್ನು ಕಂಡು ಹತ್ತಿರ ಕರೆದನು. ಅವನ ಹೆಸರು 'ನಂಗಾಶಾಹ', ಆತ ಸೂಫಿ ಪಂಥದ ಫಕೀರನಾಗಿದ್ದನು. ಬಹುತೇಕ ಸಮಯ ಸಮಾಧಿ ಸ್ಥಿತಿಯಲ್ಲಿ ಇರುತ್ತಿದ್ದನು. ಬೆತ್ತಲೆಯಾಗಿ ತಿರುಗುತ್ತಿದ್ದನು. ಅವನು ರಾಯರನ್ನು ಹತ್ತಿರ ಕರೆದು ಒಂದು ಗಳಿಗೆ ಕುಳಿತುಕೊಳ್ಳಲು ಹೇಳಿದನು. ರಾಯರಿಗೆ ಉಭಯ ಸಂಕಟಕ್ಕಿದ್ದುಕೊಂಡಿತು. ಆತನನ್ನು ತಿರಸ್ಕರಿಸಿ ಮುಂದೆಯೂ ಹೋಗರು. ನಿಂತರೆ ಏನು ರಾದ್ಧಾಂತವೋ? ಆತನಿಗೆ ವಾಕ್ ಸಿದ್ಧಿ ಇತ್ತೆಂದು ಕೇಳಿದ್ದರು. ಏನಾದರೂ ಅಂದು ಬಿಟ್ಟರೆ ? ಎಂದೆಲ್ಲ ಮನದಲ್ಲಿ ವಿಚಾರಿಸುತ್ತಿದ್ದಂತೆ ಮತ್ತೆ ಆ ಫಕೀರ ಬಾರಲ್ಲ, ಅಷ್ಟ್ಯಾಕೆ ಚಿಂತೆ? ಎಂದ. ಅನಿವಾರ್ಯವಾಗಿ ಹತ್ತಿರ ಹೋಗಿ ಕುಳಿತರು. ನಂಗಾಶಾಹ ರಾಯರನ್ನು ಒಂದು ಕ್ಷಣ ರತ್ನ ಪರೀಕ್ಷಕನಂತೆ ದಿಟ್ಟಿಸಿ ನೋಡಿದ ಅವರ ಬೆರಳಿನಲ್ಲಿದ್ದ ಪವಿತ್ರದ ಉಂಗುರವನ್ನು ದಿಟ್ಟಿಸಿ ತನ್ನ ಕೈಯಿಂದ ಅದನು ಕಿತ್ತು ತೆಗೆದುಕೊಂಡನು. ರಾಯರು ಮೌನ ವಿಸ್ಮಿತರಾಗಿ ಫಕೀರನನ್ನು ನೋಡುತ್ತ ಕುಳಿತುಕೊಂಡರು.

ಕೈಯಲ್ಲಿ ತೆಗೆದುಕೊಂಡು ಪವಿತ್ರದ ಉಂಗುರವನ್ನು ಮೇಲೆ ಕೆಳಗೆ ಒಂದೆರಡು ಬಾರಿ ತಿರುಗಿಸಿ ನೋಡುತ್ತ ತುಸು ಹೊತ್ತು ಫಕೀರ ಸುಮ್ಮನೆ ಕುಳಿತನು. ಮತ್ತೆ ಒಮ್ಮೆಲೆ, ಇದು "ವಿಷಯ ಸೂತ್ರ" ಎನ್ನುತ್ತ ಎದ್ದು ನಿಂತು ಎದುರಿನ ಕಂದಕದಲ್ಲಿ ಆ ಉಂಗುರವನ್ನು ಒಗೆದು ಬಿಟ್ಟನು. ವಾಸ್ತವದಲ್ಲಿ ಅದು ಪವಿತ್ರದ ಉಂಗುರವಾಗಿರದೆ ರಾಜ ಮೋಹರಿನ ಉಂಗುರವಾಗಿತ್ತು. ಆರ್ಶ್ಚಯದಿಂದ ಫಕೀರನ ಮುಖವನ್ನು ಕಕ-ಮಕ ನೋಡುತ್ತ ನಿಂತು ಬಿಟ್ಟರು. ರಾಜಮೊಹರನ್ನು ಬಿಟ್ಟು ದರಬಾರಿಗೆ ಹೋಗುವ ಬಗೆ ಹೇಗೆ? ದೈನ್ಯದಿಂದ ಒಂದು ಸಲ ಫಕೀರನ ಕಡೆಗೆ ನೋಡಿದರು. ಆತ ಇವರನ್ನು ನೋಡಿ ಬಿದ್ದು-ಬಿದ್ದು ನಗಹತ್ತಿದನು. ರಾಯರು ಹುಚ್ಚನಂತೆ ಅವನನ್ನು ನೋಡುತ್ತ ನಿಂತರು. ನಗು-ನಗುತ್ತಲಿದ್ದ ನಂಗಾಶಾಹ ಒಮ್ಮೆಲೇ ಗಂಭೀರನಾಗಿ 'ಇನ್ನೂ ನಿನಗೆ ಆ ಉಂಗುರದ ಮೋಹವೆ?' ಎಂದು ಕೇಳುತ್ತ ಮತ್ತೆ 'ಸರಿ-ನಿಲ್ಲು ತಂದು ಕೊಡುತ್ತೇನೆ' ಎನ್ನುತ್ತ ಎದುರಿನ ಕಂದಕದಲ್ಲಿ ಟಣ್ಣನೆ ಜಿಗಿದು ಬಿಟ್ಟನು. ಒಂದು ಮುಳುಗು ಹಾಕಿ, ಮುಷ್ಟಿತುಂಬ ಉಂಗುರಗಳನ್ನು ತಂದು ರಾಯರ ಎದುರಿಗೆ ಮುಷ್ಟಿ ಬಿಚ್ಚಿ ನಿಂತು 'ತೆಗೆದುಕೊ ನಿನ್ನ ಉಂಗುರವನ್ನು' ಎಂದನು ರಾಯರಿಗೆ ಆಶ್ಚರ್ಯವಾಯಿತು. ಒಂದೇ ತರದ ಉಂಗುರಗಳು ಎಲ್ಲವು ರಾಜ ಮೊಹರಗಳೇ ! ಒಮ್ಮೆ ಫಕೀರನ ಮುಖವನ್ನು ಇನ್ನೊಮ್ಮೆ ಅವನ ಕೈಯಲ್ಲಿದ್ದ ಉಂಗುರಗಳ ಕಡೆಗೆ ನೋಡಹತ್ತಿದರು. 'ತಕ್ಕೊಳ್ಳಯ್ಯ ಹಾಗೇನು ಮುಖ ನೋಡ್ತಿ' ಎಂದು ಫಕೀರ ಗದರಿಸಿದಾಗ ಒಂದು ಕ್ಷಣ ರಾಯರ ಮೈ ರೋಮಾಂಚನಗೊಂಡಿತು. ತಮ್ಮ ಉಂಗುರವನ್ನು ಗುರುತಿಸುವುದು ಸಾಧ್ಯವಾಗಲೊಲ್ಲದು. ದೇಹ ಸ್ಮೃತಿ ತಪ್ಪುತ್ತಿದೆ ಎಂದು ಭಾಸವಾಗ ಹತ್ತಿತು, ಸಾವರಿಸಿಕೊಂಡು ಮರುಕ್ಷಣದ ರಾಯರೇ ಬೇರೆಯಾದರು. ಸತ್, ಚಿತ್, ಆನಂದ ಎಂಬ ಮೂರು ಶಬ್ದಗಳು ಬೇರೆಯಾಗಿದ್ದರೂ 'ಸಚ್ಚಿದಾನಂದ' ಎಂಬ ಪದ ಒಂದೇ ಎಂಬ ಅಖಂಡತ್ವದ ಅರಿವಾಯಿತು. ರಾಯರ ಅಜ್ಞಾನದ ಸೂತ್ರ ಹರಿದು ಹೋಯಿತು. ಹೃದಯದಲ್ಲಿ ಜ್ಞಾನದ ಮೊಳಕೆ ಒಡೆಯಿತು. ದಿಗ್ಗನೆ ಬಂದು ನಂಗಾಶಾಹನ ಕಾಲುಗಳನ್ನು ಹಿಡಿದುಕೊಳ್ಳಲು ಮುಂದೆ ಬಂದರು. ಆದರೆ ಫಕೀರ ಅದಕ್ಕೆ ಆಸ್ಪದವನ್ನೆ ಕೊಡಲಿಲ್ಲ. ಹಿಂದೆ ಸರಿದು ಹೇಳಿದನು.

'ಛೀ ನನ್ನ ಕಾಲು ಹಿಡಿಯಬೇಡ, ನಾನು ಯವನ, ನೀನು ಶುದ್ಧ ಬ್ರಾಹ್ಮಣ, ನಿನ್ನಿಂದ ನಮಸ್ಕಾರ ಮಾಡಿಸಿ ಕೊಳ್ಳುವುದು ನನಗೆ ಯೋಗ್ಯವಲ್ಲ, ನಿನ್ನ ಮನದ ಬಾಗಿಲು ತೆರೆದಿದೆ, ನಿನಗೊಬ್ಬ ಯೋಗ್ಯ ಗುರುವಿನ ಅವಶ್ಯಕತೆ ಇದೆ, ಸಾರವಾಡಕ್ಕೆ ಹೋಗು ಅಲ್ಲಿ ಭಾಸ್ಕರ ಸ್ವಾಮಿಗಳಿದ್ದಾರೆ ಅವರು ನಿನಗೆ ಯೋಗ್ಯ ಗುರು ಎಂದು ಹೇಳಿದನು.'

ಅವನ ಮಾತು ಕೇಳಿ ರಾಯರು ಮ್ಲಾನವದನರಾಗಿ ಮನೆಯ ದಾರಿ ಹಿಡಿದರು. ಮನೆಗೆ ಬಂದಾಗ ಹೆಂಡತಿ ಮನೆಯಲ್ಲಿಲ್ಲ. ಕೇಳಿದರೆ ಮಂದಿರಕ್ಕೆ ಹೋಗಿರುವುದಾಗಿ ತಿಳಿಯಿತು. ಸಾಯಂಕಾಲ ತಿಮ್ಮವ್ವ ಮನೆಗೆ ಬಂದಾಗ ಗಂಡ ಮನೆಯಲ್ಲಿದ್ದುದನ್ನು ಕಂಡು ಹೆದರಿದಳು. ತನ್ನ ಹುಳುಕು ಹೊರಬಿತ್ತೆಂಬ ಅಂಜಿಕೆ ಅವಳದು. ರಾಯರಿಗೆ ಅದರ ಪರಿವೆ ಇರಲಿಲ್ಲ. 'ಅದೇನು ಅಂಥ ಮಂದಿರ, ಸಾಯಂಕಾಲದವರೆಗೆ? ಬೆಳಿಗ್ಗೆ ಹೋದವಳು ಈಗ ಬರುವುದೆ? ಎಂದು ಕೇಳಿದಾಗ ತನ್ನ ಗಂಡ ಇಂದು ದರಬಾರದ ಕೆಲಸಕ್ಕೆ ಹೋಗಿರಲಿಲ್ಲ ವೆಂಬುದು ತಿಳಿದು ಇನ್ನಷ್ಟು ಗಾಬರಿಯಾದಳು. ಹೆಂಡತಿಗೆ ತಮ್ಮ ಅಂದಿನ ಅನುಭವ ಹೇಳುವ ತವಕ ರಾಯರಿಗೆ, ಅದನ್ನು ಕೇಳುತ್ತಿದ್ದಂತೆ ತಿಮ್ಮವ್ವನಿಗೆ ಆಶ್ಚರ್ಯ, ಸಂತೋಷ, ಉದ್ವೇಗ ಎಲ್ಲವೂ ಒಮ್ಮೆಲೆ ಆದಂತಾಗಿ ಏನು ಹೇಳಬೇಕೆಂದು ತಿಳಿಯದೆ ಕ್ಷಣಹೊತ್ತು ಸುಮ್ಮನೆ ನಿಂತಳು.

ವಾಸ್ತವದಲ್ಲಿ ತಿಮ್ಮವ್ವ ಸಾರವಾಡದ ಭಾಸ್ಕರ ಸ್ವಾಮಿಗಳ ಹತ್ತಿರ ಹೋಗ ಹತ್ತಿ ಆರು ತಿಂಗಳುಗಳಾಗಿದ್ದುವು. ಹಲವು ದೇವರ ಹರಕೆ ಹೊತ್ತರೂ ಮಕ್ಕಳಾಗದಿದ್ದಾಗ ಯಾರದೋ ಮಾತು ಕೇಳಿ, ಭಾಸ್ಕರ ಸ್ವಾಮಿಗಳು ದೊಡ್ಡ ಯೋಗಿಗಳು, ಅವರ ಆಶೀರ್ವಾದದಿಂದ, ಸಂತಾನ ಭಾಗ್ಯವಾದೀತೆಂಬ ಆಶೆಯಿಂದ ಅವಳು ಸಾರವಾಡಕ್ಕೆ ಹೋಗುತ್ತಿದ್ದಳು. ಆದರೆ ಗುರುಗಳ ದರ್ಶನವಾಗಿರಲಿಲ್ಲ. ಅಂದೇ ಗುರುಗಳ ದರ್ಶನವಾಗಿ 'ಸತಿ-ಪತಿ' ಸಹಿತವಾಗಿ ಬನ್ನಿ ಎಂದು ಹೇಳಿದ್ದರು. ಗಂಡನಿಗೆ ಹೇಳಿ ಮರುದಿನ ಅವರನ್ನೂ ಕರೆದುಕೊಂಡು ಹೋಗಬೇಕೆಂಬ ವಿಚಾರದೊಂದಿಗೆ ಮನೆಗೆ ಬಂದಾಗ ಗಂಡ ತಾನೆಯೇ

ಮರುದಿನ ಸಾರವಾಡಕ್ಕೆ ಹೋಗಬೇಕೆಂಬ ವಿಷಯ ತಿಳಿಸಿದಾಗ ಅವಳ ಆನಂದಕ್ಕೆ ಮಿತಿ ಇರಲಿಲ್ಲ.

ಅವರ ಚರಿತ್ರೆಯಲ್ಲಿ ಬರುವಂತೆ ನಂಗಾಶಾಹನ ಭೇಟಿ, ಉಂಗುರದ ಸಂಗತಿ, ಅಂದೇ ತಿಮ್ಮವ್ವನಿಗೆ ಭಾಸ್ಕರಸ್ವಾಮಿಗಳ ದರ್ಶನ, ನಂಗಾಶಾಹನೂ ಭಾಸ್ಕರ ಸ್ವಾಮಿಗಳ ಹತ್ತಿರ ಹೋಗು ಎಂದು ರಾಯರಿಗೆ ಹೇಳಿದ್ದು, ಇವುಗಳೆಲ್ಲ ಒಂದು ರೀತಿ ಪವಾಡದಂತೆ ಎನಿಸಿದರೂ ಇಂಥ ಯಾವುದೋ ಒಂದು ಸನ್ನಿವೇಶದಲ್ಲಿ ರಾಯರ ಮನಸ್ಸು ಪರಿವರ್ತಿತವಾಗಿ ಅವರು ಸಾರವಾಡದ ಭಾಸ್ಕರ ಸ್ವಾಮಿಗಳ ಹತ್ತಿರ ಹೋದರು. ಅಥವಾ ಯಾವುದೋ ಒಂದು ಸಂದರ್ಭದಲ್ಲಿ ಭಾಸ್ಕರ ಸ್ವಾಮಿಗಳಿಗೂ, ರಾಯರಿಗೂ ಮುಖಾ-ಮುಖಿ ಭೆಟ್ಟಿಯಾದಾಗ ರಾಯರು ಭಾಸ್ಕರ ಸ್ವಾಮಿಗಳಿಂದ ಆಕರ್ಷಿತರಾಗಿ ಅವರ ಸಂಪರ್ಕವನ್ನು ಪಡೆದಿರಬೇಕು.

ಭಾಸ್ಕರ ಸ್ವಾಮಿಗಳ ಕುರಿತು ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಅವರು ಇಂದಿನ ಮುಧೋಳ ತಾಲೂಕಿನ ಲೋಕಾಪುರದಲ್ಲಿ ಇದ್ದರು. ಅಲ್ಲಿಂದ ಸಾರವಾಡಕ್ಕೆ ಸ್ವ-ಇಚ್ಛೆಯಿಂದ ಬಂದು ನೆಲೆಸಿದರು ಎಂಬುದಾಗಿ ರಾಯರ ಕುರಿತಾದ ಒಂದು ಅಪೂರ್ಣ ಮರಾಠಿ ಓವಿ ಬದ್ಧ ಕಾವ್ಯ ಹೇಳುತ್ತದೆ. ಅವರ ಮೂಲ ಸ್ಥಳ, ಗುರುಪರಂಪರೆ ಮತ, ಪಂಥ, ಸಾಧನೆ, ಸಿದ್ಧಿ ಇವುಗಳ ಕುರಿತು ಏನನ್ನೂ ತಿಳಿಯುವುದು ಸಾಧ್ಯವಾಗಿಲ್ಲ. ಹೀಗಾಗಿ ಮಹಿಪತಿರಾಯರ ಗುರುಪರಂಪರೆಯನ್ನೂ ಭಾಸ್ಕರ ಸ್ವಾಮಿಗಳಿಂದಲೇ ಪ್ರಾರಂಭಿಸಬೇಕಾಗುತ್ತದೆ.

ಮರುದಿನ ರಾಯರು ಬಾದಶಹನ ಅಪ್ಪಣೆ ಪಡೆದು ಸಕುಟುಂಬರಾಗಿ ಸಾರವಾಡಕ್ಕೆ ಹೋದರು. ಅವರು ಸ್ವಾಮಿಗಳ ಆಶ್ರಮಕ್ಕೆ ಹೋದಾಗ ಸ್ವಾಮಿಗಳು ಸಮಾಧಿ ಸ್ಥಿತಿಯಲ್ಲಿದ್ದರು. ಸ್ವಾಮಿಗಳ ದರ್ಶನಕ್ಕಾಗಿ ಕಾಯುತ್ತ ತುಸು ಹೊತ್ತು ಹೊರಗೆಯೇ ನಿಂತರು. ಭಾಸ್ಕರ ಸ್ವಾಮಿಗಳು ಸಹಜ ಸ್ಥಿತಿಗೆ ಬಂದನಂತರ, ರಾಯರು ಸಕುಟುಂಬರಾಗಿ ದರ್ಶನಾಪೇಕ್ಷಿಗಳಾಗಿ ಬಂದ ವಿಷಯವನ್ನು ಸೇವಕರು ಹೇಳಿದರು. ಅವರನ್ನು ಒಳಗೆ ಕರೆದುಕೊಂಡು ಬರಲು ಸ್ವಾಮಿಗಳು ಅಪ್ಪಣೆ

ಕೊಡಿಸಿದರು. ರಾಯರು ಹಾಗೂ ಅವರ ಹೆಂಡತಿ ಇಬ್ಬರೂ ಒಳಗೆ ಬಂದು ಸ್ವಾಮಿಗಳಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿದರು. ಸ್ವಾಮಿಗಳು ಸಸ್ಮಿತವದನರಾಗಿ ರಾಯರನ್ನು ಎಬ್ಬಿಸುತ್ತ,

'ನಾವು ಬಂದು ಆರು ತಿಂಗಳುಗಳ ಮೇಲಾಯಿತು ! ನಿಮಗೆ ಬರುವುದಾಗಲಿಲ್ಲವಲ್ಲ ! ಇಂದು ಅಕಸ್ಮಾತ್ತಾಗಿ ನಂಗಾಶಾಹನಿಂದಾಗಿ ಆ ಗಳಿಗೆ ಬಂದಿತಲ್ಲವೆ ?', ಎಂದು ಕೇಳಿದಾಗ ರಾಯರ ಮೈ ಜುಮ್ ಎಂದಿತು. ರಾಯರು ಮತ್ತೆ ಅಡ್ಡ ಬಿದ್ದು 'ಸ್ವಾಮಿ ನಾನು ಅಪರಾಧಿ ಪಾಮರನು, ನೀವು ಕರುಣಿಸಿ ನನ್ನನ್ನು ಉದ್ಧರಿಸಬೇಕು' ಎಂದು ಅನನ್ಯವಾಗಿ ಭಾಸ್ಕರ ಸ್ವಾಮಿಗಳನ್ನು ಪ್ರಾರ್ಥಿಸಲು ಅವರು ರಾಯರನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡರು. ಪ್ರಸನ್ನರಾದ ಗುರುಗಳು ರಾಯರ ಮಸ್ತಕದ ಮೇಲೆ ಕ್ಷಣ ಹೊತ್ತು ತಮ್ಮ ಹಸ್ತವನ್ನಿಟ್ಟರು. ಅದಾಗಲೇ ನಂಗಾಶಾಹನಿಂದ ಹೊತ್ತಿದ್ದ ಜ್ಞಾನದ ಕಿಡಿಯು ಜ್ವಾಲೆಯಾಗಿ– ಕೋಟಿಸೂರ್ಯರ ಪ್ರಭೆಯಾಗಿ ಸಚ್ಚಿದಾನಂದನ ದರ್ಶನವನ್ನು ಮಾಡಿಸಿತು. ಆ ಅಪರೂಪದ ಘಟನೆಯನ್ನು ರಾಯರು ತಮ್ಮ ಒಂದು ಪದದಲ್ಲಿ ಸುಂದರವಾಗಿ ನಿರೂಪಿಸಿದ್ದಾರೆ. 'ಇಂದೆನ್ನ ಜನ್ಮ ಪಾವನವಾಯಿತು, ತಂದೆ ಶ್ರೀ ಗುರುಗಳ ಚರಣ ದರುಶನದಿಂದ' ಎಂದು ಪ್ರಾರಂಭವಾಗುವ ೬ ನುಡಿಗಳ ಕೀರ್ತನೆಯಲ್ಲಿ ಗುರುಗಳ ದಯದಿಂದ ತಮಗೆ ಸಾಕ್ಷಾತ್ಕಾರವಾದ ಬಗೆಯನ್ನು ವಿವರಿಸಿದ್ದಾರೆ. ಕೊನೆಯ ನುಡಿಯಲ್ಲಿ,

"ಭಾಸ್ಕರ ಸ್ವಾಮಿಯು ಕರುಣಾಳು ಮೂರ್ತಿಯು
ಮೂಢ ಮಹಿಪತಿಯ ಕೃಪಾಂಬುಧಿಯು
ಕರುಣದಭಯ ಹಸ್ತವನು ಶಿರಸದಲಿಡಲಾಗಿ
ಧನ್ಯನಾದೆನು ಸತಿಪತಿ ಸಹಿತವಾಗಿನ್ನು"

ಎಂದು ಹೇಳುತ್ತಾರೆ. ಬಹುಶಃ ಇದುವೆ ರಾಯರ ಮೊದಲ ಕೃತಿಯಾಗಿರಬೇಕು. ತಮ್ಮ ಗುರುಗಳನ್ನು ಕಂಡು ರಚಿಸಿದ ಪ್ರಥಮ ಕೀರ್ತನೆಯೂ

ಆಗಿರಬೇಕು. ಅಂದಿನಿಂದ 'ಮಹಿಪತಿ' ಎಂಬ ಅಂಕಿತದಿಂದ ತಮ್ಮ ಅನುಭವಗಳನ್ನು ಕೀರ್ತನೆಯ ರೂಪದಲ್ಲಿ ಹೇಳಲು ಪ್ರಾರಂಭಿಸಿರಬೇಕು. ಆದರೆ 'ಮಹಿಪತಿ' ಎಂಬ ಅಂಕಿತವನ್ನು ಭಾಸ್ಕರಸ್ವಾಮಿಗಳು ನೀಡಿದರೆ ? ಅಥವಾ ತಾವೆ ಸ್ವತಃ ಉಪಯೋಗಿಸಿದರೆ ಎಂಬ ಕುರಿತು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಚಾರಿತ್ರಿಕವಾಗಿ ಅವರು ಭಾಸ್ಕರಸ್ವಾಮಿಗಳನ್ನು ಕಂಡದ್ದನ್ನು ಹಾಗೂ ಅವರಿಂದಲೇ 'ಧನ್ಯನಾದೆನು' ಎಂದುದನ್ನು ಈ ಕೀರ್ತನೆ ಸ್ಪಷ್ಟಪಡಿಸುತ್ತದೆ.

ಹೀಗೆ ಪ್ರಥಮ ದರ್ಶನದಲ್ಲಿಯೇ ಗುರುಗಳಾದ ಭಾಸ್ಕರ ಸ್ವಾಮಿಗಳು ಮಹಿಪತಿರಾಯರನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿದ್ದಲ್ಲದೆ ಬ್ರಹ್ಮ ಸಾಕ್ಷಾತ್ಕಾರವನ್ನೂ ಮಾಡಿಸಿದರು. ಅದರಂತೆ ಅವರ ಹೆಂಡತಿ ತಿಮ್ಮವ್ವಳಿಗೆ 'ಜಗಪ್ರಸಿದ್ಧ' ರಾದ ಪುತ್ರದ್ವಯರ ವರವನ್ನೂ ಕೊಟ್ಟರೆಂದು ಅವರ ಕುರಿತಾದ ಚರಿತ್ರೆಯಲ್ಲಿ ಬರುತ್ತದೆ.

ಗುರುಗಳ ಅನುಗ್ರಹಕ್ಕೆ ಪಾತ್ರರಾದ ಮಹಿಪತಿರಾಯರು ಬಾದಶಹನ ಸೇವೆಯನ್ನು ತ್ಯಜಿಸಿ ಸತಿ–ಪತಿ ಸಹಿತವಾಗಿ ಸಾರವಾಡಕ್ಕೆಯೇ ಹೋಗಿ ಗುರುಗಳ ಹತ್ತಿರ ಇರಹತ್ತಿದರು. ಆವರೆಗೆ ಗಳಿಸಿದ್ದ ಸಂಪತ್ತನ್ನೆಲ್ಲ ಬಡ ಬಗ್ಗರಿಗೆ ದಾನ ಮಾಡಿ ಬಿಟ್ಟರು. ಸಾರವಾಡದಲ್ಲಿ ಯೋಗ ನಿರತರಾಗಿ ನಿರಂತರ ಬ್ರಹ್ಮ ಸಾಕ್ಷಾತ್ಕಾರದ ಸಾಧನೆಯಲ್ಲಿ ತೊಡಗಿದರು. 'ಹನ್ನೆರಡು ವರುಷಗಳಲ್ಲಿ ಮುಗಿಯುವಂಥ ಯೋಗ ಸಾಧನೆಯನ್ನು ಅವರು ಹನ್ನೊಂದು ತಿಂಗಳುಗಳಲ್ಲಿ ಮುಗಿಸಿದರು, ಮತ್ತು ಅದರಿಂದಾಗಿ ಅವರು ವಿವಿಧ ಸಿದ್ಧಿಗಳನ್ನು, ದಿವ್ಯ ಅನುಭವಗಳನ್ನೂ ಪಡೆದರು.

ಶಿಷ್ಯನ ಸಿದ್ಧಿಯನ್ನು ಕಂಡು ಭಾಸ್ಕರಸ್ವಾಮಿಗಳು ಸಂತೋಷಪಟ್ಟರು. ಗುರು ಸನ್ನಿಧಾನದಲ್ಲಿಯೇ ಉಳಿಯಬೇಕೆಂದು ಶಿಷ್ಯ ಅಪೇಕ್ಷಿಸಿದರೂ, ಅವರಿಂದ ಜನರ ಉದ್ಧಾರವಾಗಬೇಕೆಂಬ ದೃಷ್ಟಿಯಿಂದ ಸಾರವಾಡದಿಂದ ಹೋಗಲು ಅನುಮತಿಯನ್ನು ನೀಡಿದರು. ಮಹಿಪತಿರಾಯರು ತಮ್ಮ ಪತ್ನಿಯೊಂದಿಗೆ ತಿರುಗಿ ವಿಜಾಪುರಕ್ಕೆ ಬಂದರು. ತಮ್ಮ ಸಾಧನೆಯನ್ನು ಮುಂದುವರೆಸಿದರು.

ಶಿಷ್ಯರಿಗೆ ಯೋಗ ಶಾಸ್ತ್ರವನ್ನು ಕಲಿಸುವಲ್ಲಿ ಮಾರ್ಗದರ್ಶಕರಾದರು. ಜನ ಸಾಮಾನ್ಯರುಗಳಲ್ಲಿ ಭಗವಂತನ ಕುರಿತಾಗಿ ಭಕ್ತಿಯನ್ನು ಬೆಳೆಸುವಲ್ಲಿ ನಿರತರಾದರು.

'ಕೊಟ್ಟರ್ಥಿಡಿಯಲಿಲ್ಲ ಓರ್ವರ ಧನವು । ಪೂರ್ವದ ಸಂಗ್ರಹವು ।
ಮುಟ್ಟಲಲ್ಲೆ ವ್ರಯವಾಗುತಿಹುದು ಧನವು । ಸತಿಸುತ ಪರಿವಾರವು ।
ಬಿಟ್ಟಗಲದೆ ಸೇವೆಯ ಮಾಡುವ ಜನವು । ಭಕ್ತರ ಸಮುದಾಯವು ।
ದಟ್ಟಿಸಿ ಮನೆಯೊಳಗಾಗುದು ಪ್ರತಿದಿನವು । ಮೃಷ್ಟಾನ್ನ ಭೋಜನವು ।'

ಎಂದು ಅವರ ಮರಿಮಗ ಶ್ರೀಪತಿತನುಜರು ತಮ್ಮ ಮುತ್ತಜ್ಜನ ದಿನಚರಿಯನ್ನು ಚಿತ್ರಿಸಿದ್ದಾರೆ.

ಸಾರವಾಡದಿಂದ ವಿಜಾಪುರಕ್ಕೆ ಬಂದು ನೆಲೆಸಿದ ಮೇಲೆ ವರುಷಾರು ತಿಂಗುಳಗಳಲ್ಲಿ ಅವರಿಗೆ ಪುತ್ರಸಂತಾನ ಲಾಭವೂ ಆಯಿತು. ಗೋಕುಲಾಷ್ಟಮಿಯ ದಿನ ರಾಯರ ಹೆಂಡತಿ ತಿಮ್ಮವ್ವ, ಅವಳಿ-ಜವಳಿ ಮುದ್ದಾದ ಎರಡು ಗಂಡು ಮಕ್ಕಳಿಗೆ ಜನ್ಮವಿತ್ತಳು. ಒಬ್ಬನಿಗೆ ದೇವರಾಯನೆಂದು ಇನ್ನೊಬ್ಬನಿಗೆ ಕೃಷ್ಣರಾಯನೆಂದು ಹೆಸರಿಟ್ಟರು.

ವಿಜಾಪುರದಲ್ಲಿ ರಾಜಕೀಯ ಅಸ್ಥಿರತೆ ಸಂಭವಿಸುವವರೆಗೂ ಮಹಿಪತಿರಾಯರು ನಗರದಲ್ಲಿಯೇ ಉಳಿದಿರಬೇಕು. ತಮ್ಮ ಸಾಧನೆಯಲ್ಲಿ ನಿರತರಾಗಿದ್ದರಿಂದ ರಾಜಕಾರಣದ ಸಂಬಂಧವನ್ನು ಅವರು ಆ ಮೊದಲೇ ಕಳಚಿಕೊಂಡಿದ್ದರು. ಜಾತಿ, ಮತ, ಪಂಥಗಳ ಭೇದವಿಲ್ಲದೆ ಪರಮಾತ್ಮನ ಕುರಿತು ಚಿಂತಿಸುವವರೆಲ್ಲ ಒಂದೇ ಜಾತಿಯವರು, ಮನುಷ್ಯಕುಲ ಒಂದು ಎಂಬ ಭಾವನೆಯಿಂದ ಅವರು ಎಲ್ಲರೊಡನೆ ಹೊಂದಿಕೊಂಡಿದ್ದರು. ಆಧ್ಯಾತ್ಮ ಸಾಧನೆಗೆ, ಚರ್ಚೆಗೆ ಅವರ ಹತ್ತಿರ ಎಲ್ಲ ಮತದವರೂ ಬರುತ್ತಿದ್ದರು. ಸೂಫಿ ಸಂತರು, ಅವಧೂತರು, ಶೈವರು, ವೈಷ್ಣವರಾದಿಯಾಗಿ ಎಲ್ಲ ಮತದವರೂ, ಕನ್ನಡ, ಮರಾಠಿ, ತೆಲುಗು, ದಖಣಿ ಉರ್ದು ಭಾಷೆಯವರೂ ಅವರ ಹತ್ತಿರ ಬರುತ್ತಿದ್ದರು. ಅಂತೆಯೇ ಅವರು ನಾಲ್ಕು ಭಾಷೆಗಳನ್ನು ಉಪಯೋಗಿಸಿ ರಚಿಸಿದ ಒಂದು ಕೀರ್ತನೆಯಲ್ಲಿ

'ಸಮಜೋ ಭಾಯಿ, ಸಕುನಾ ಚಾರೋ ಖುದಾಕಾ
ತೆಲುಗು ಕನ್ನಡ ತುರುಕಾರೇ ವಂದೇ ಸುಖ'

ಎಂದು ಹೇಳುತ್ತ ಭಾಷೆ ಬೇರೆಯಾದರೇನು ? ಅಂತಿಮ ಗುರಿ ಒಂದೇ ಎಂಬುದು ಅವರ ಸಂದೇಶವಾಗಿತ್ತು.

ಕ್ರಿ.ಶ. ೧೬೮೬ ರಲ್ಲಿ ಔರಂಗಜೇಬನು ವಿಜಾಪುರವನ್ನು ವಶಪಡಿಸಿಕೊಂಡು ದೆಹಲಿಯ ಮೊಗಲ ರಾಜ್ಯಕ್ಕೆ ಸೇರಿಸಿದನು. ಅದರ ಬೆನ್ನ ಹಿಂದೆಯೇ ಬಂದ ಮೂರು ವರುಷಗಳ ಬರಗಾಲ, ಪ್ಲೇಗ ಬೇನೆಗಳಿಂದ ನಗರವು ತತ್ತರಿಸಿತು. ಆ ದಿನಗಳಲ್ಲಿ ಮಹಿಪತಿರಾಯರು ಕಲಬುರ್ಗಿ ಜಿಲ್ಲೆಯ ಶಾಹಪುರಕ್ಕೆ ಹೋಗಿ ನೆಲೆಸಿದರು. ಮೂರು ವರುಷಗಳ ಅನಂತರ ಅವರು ತಿರುಗಿ ವಿಜಾಪುರಕ್ಕೆ ಬಂದಾಗ ಕಾಖಂಡಕಿ ಗ್ರಾಮದ ಜನರು ಬಂದು ತಮ್ಮ ಊರಲ್ಲಿಯೇ ಇರಲು ಆಮಂತ್ರಣ ನೀಡಿದರು. ಗ್ರಾಮದ ಪಟೇಲರು ಊರ ಮುಂದಿನ ತಮ್ಮ ತೋಟವನ್ನು ಕೊಟ್ಟರು. ಅಲ್ಲಿಯೇ ಒಂದು ಶಮೀವೃಕ್ಷದ ಅಡಿಭಾಗವನ್ನು ತಮ್ಮ ಅನುಷ್ಠಾನಕ್ಕಾಗಿ ಗೊತ್ತುಪಡಿಸಿ ದಿನದ ಬಹುಭಾಗವನ್ನು ಅಲ್ಲಿಯೇ ಕಳೆಯ ಹತ್ತಿದರು. [ಕಾಖಂಡಕಿ ಗ್ರಾಮವು ವಿಜಾಪುರದಿಂದ ದಕ್ಷಿಣಕ್ಕೆ ೩೦ ಕಿ.ಮಿ ಅಂತರದಲ್ಲಿದೆ.]

ಇಬ್ಬರು ಮಕ್ಕಳಲ್ಲಿ ದೇವರಾಯನು ಕ್ಷಾತ್ರತೇಜದಿಂದ ಜಾಲವಾದಿಯ ದೇಸಗತಿಯನ್ನು ಸಂಪಾದಿಸಿ ಅಲ್ಲಿಯೇ ಉಳಿದನು. ಕೃಷ್ಣರಾಯನು ತಂದೆಯ ದಾರಿಯನ್ನು ತುಳಿದು ಆಧ್ಯಾತ್ಮ ಚಿಂತನೆ ಮಾಡುತ್ತ, ತಂದೆಯಿಂದಲೆ ದೀಕ್ಷೆ ಪಡೆದು ಹರಿದಾಸರಾಗಿ ಕಾಖಂಡಕಿಯಲ್ಲಿಯೇ ಉಳಿದರು. ಉಭಯ ಮನೆತನಗಳು ಇಂದಿಗೂ ಜೀವಂತವಾಗಿ ನಡೆದುಕೊಂಡು ಬಂದಿವೆ.

ಮಹಿಪತಿರಾಯರ ಸಾಧನೆ, ಸಿದ್ಧಿಗಳಿಂದಾಗಿ ಅವರು ಆ ಕಾಲದಲ್ಲಿ ತುಂಬ ಪ್ರಸಿದ್ಧರಾಗಿದ್ದರೆಂದು ಕಾಣುತ್ತದೆ. ಪುಣೆಯ ಅರ್ಕೀವ್ಹದಲ್ಲಿ, ವಿಜಾಪುರ ತಾಲೂಕು ಕಂದಾಯ ಕಚೇರಿಯಲ್ಲಿ ದೊರೆಯುವ ದಾಖಲೆಗಳಲ್ಲಿ ಶ್ರೀಮಹಿಪತಿಸ್ವಾಮಿ ಸಂಸ್ಥಾನ ಎಂದು ಕರೆದಿದೆ. ಹಲವಾರು ಸರದಾರರು. ದೇಸಾಯಿ, ದೇಶಮುಖರು

ಅವರಿಗೆ ವಿವಿಧ ಗ್ರಾಮಗಳಲ್ಲಿ ಭೂಮಿಯನ್ನು ದಾನವಾಗಿ ನೀಡಿದ ಉಲ್ಲೇಖಗಳೂ ಇವೆ. ಕಾಖಂಡಕಿ ಗ್ರಾಮವಲ್ಲದೆ ಮುಳವಾಡ, ಸಾರವಾಡ, ಮಸೂತಿ, ಹೊನಗನಹಳ್ಳಿ ಕೊಲ್ಹಾರ, ಬಸವನ ಬಾಗೇವಾಡಿ ಮುಂತಾದ ವಿಜಾಪುರ ಜಿಲ್ಲೆಯ ಗ್ರಾಮಗಳಲ್ಲಿ ಅಲ್ಲದೆ ದೂರದ ಬಂಕಾಪುರದಲ್ಲಿಯೂ ಅವರ ಹೆಸರಿನಲ್ಲಿ ಜಮೀನು ದಾಖಲೆಗಳಿವೆ. ಅವುಗಳೆಲ್ಲ ಶ್ರೀ ಮಹಿಪತಿಸ್ವಾಮಿ ಸಂಸ್ಥಾನಕ್ಕೆ ಸೇರಿದ್ದವುಗಳೆಂದು ಈ ದಾಖಲೆಗಳು ಹೇಳುತ್ತವೆ

ಕಾಖಂಡಕಿಯ ಮಹಿಪತಿರಾಯರು ಸುಮಾರು ೬೫ ವರುಷ ಬಾಳಿ-ಬದುಕಿ ಕೊಲ್ಹಾರದ ಕೃಷ್ಣೆಯ ದಡದಲ್ಲಿ ಕಾರ್ತೀಕ ಮಾಸದ ಅಮಾವಾಸ್ಯೆಯಂದು ಕಾಲವಾದರು. ಅವರ ಇಚ್ಛೆಯಂತೆ ಕಾಖಂಡಕಿಯಲ್ಲಿ ಅವರ ಸ್ಮರಣಾರ್ಥವಾಗಿ ವೃಂದಾವನವನ್ನು ಕಟ್ಟಲಾಯಿತು. ಅವರು ದೇಹವಿಟ್ಟ ಕೊಲ್ಹಾರದ ಕೃಷ್ಣೆಯ ದಡದಲ್ಲೂ ಒಂದು ವೃಂದಾವನ ಇದೆ.

ಕಾಖಂಡಕಿ ಮಹಿಪತಿರಾಯರ ಬದುಕು ಹಾಗು ಬರಹಗಳ ಕುರಿತು ಸಲ್ಲಿಸಿದ ಮಹಾಪ್ರಬಂಧದಲ್ಲಿ ಅವರ ಕಾಲವನ್ನು ಸುದೀರ್ಘ ಚರ್ಚೆಯ ಅನಂತರ ಈ ರೀತಿಯಾಗಿ ನಿರ್ದೇಶಿಸಲಾಗಿದೆ.[೧]

| | | |
|---|---|---|
| ಮಹಿಪತಿರಾಯರ ಜನನ | ಕ್ರಿ.ಶ. ಸು | ೧೬೪೦ |
| ಖವಾಸಖಾನನ ಹತ್ತಿರ ಕರ್ಣಿಕ | " | ೧೬೫೮-೫೯ |
| ಬಾದಶಹನ ಭೆಟ್ಟಿ ಪ್ರೀತ್ಯಾದರ | " | ೧೬೬೦ |
| ಭಾಸ್ಕರ ಸ್ವಾಮಿಗಳ ಅನುಗ್ರಹ | " | ೧೬೭೦ |
| ಅವಳಿ ಮಕ್ಕಳ ಜನನ | " | ೧೬೭೨-೭೩ |
| ಶಾಹಪುರ (ಕಲುಬುರ್ಗಿ)ವಾಸ | " | ೧೬೮೬-೮೯ |
| ಕಾಖಂಡಕಿಗೆ ಆಗಮನ | " | ೧೬೯೦ |
| ಮರಣ | " | ೧೭೦೫ |

೧. ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ – ಕಾಖಂಡಕಿ ಮಹಿಪತಿರಾಯರು (೧೯೮೯) ಪುಟ ೭೬

## ಕೃತಿಗಳು

ಮಹಿಪತಿರಾಯರು ಕನ್ನಡ, ಮರಾಠಿ, ದಖಣಿ ಉರ್ದು ಭಾಷೆಗಳಲ್ಲದೆ ಮಿಶ್ರಭಾಷೆಗಳಲ್ಲೂ ಕೃತಿಗಳನ್ನು ರಚಿಸಿದ್ದಾರೆ. ಅವುಗಳ ಒಟ್ಟು ಸಂಖ್ಯೆಯನ್ನು ೭೫೪ ಎಂದು ಈ ವರೆಗೆ ಗುರುತಿಸಲಾಗಿದೆ.[2] ಅವುಗಳಲ್ಲಿ ಕನ್ನಡದ ಕೃತಿಗಳನ್ನು ೬೮೫ ಎಂದು ಹೇಳಲಾಗಿದೆ. ಈ ಸಂಗ್ರಹವನ್ನು ಸಂಪಾದಿಸುವಾಗ ಇನ್ನಷ್ಟು ಕೀರ್ತನೆಗಳು ದೊರೆತಿದ್ದು ಇಲ್ಲಿ ಒಟ್ಟು ೭೦೩ ಕೃತಿಗಳನ್ನು ಪ್ರಕಟಿಸಲಾಗಿದೆ. ಕರ್ನಾಟಕ ಹರಿದಾಸರ ಕೃತಿಗಳಲ್ಲಿ ಈ ವರೆಗೆ ದೊರೆತ ವೈಯಕ್ತಿಕ ಸಂಖ್ಯೆಯಲ್ಲಿ ಇದು ಅಧಿಕವಾಗಿದೆ.

ಮಹಿಪತಿರಾಯರ ಮನೆತನದಲ್ಲಿ ಅವರ ಅನಂತರ ಸುಮಾರು ನಾಲ್ಕು ತಲೆಮಾರುಗಳವರೆಗೆ ಸಾಹಿತ್ಯ ರಚನೆ ನಡೆದದ್ದು ಕಂಡು ಬರುತ್ತದೆ. ಅವುಗಳಲ್ಲೆಲ್ಲ ಮಹಿಪತಿ ಅಂಕಿತವನ್ನೆ ವಿವಿಧ ಸಂಬಂಧವಾಚಕ ಪದದಲ್ಲಿ ಬಳಸಲಾಗಿದೆ. ಹೀಗೆ ದೊರೆತ ಒಟ್ಟು ೫೪ ಅಂಕಿತಗಳಲ್ಲಿ ೧೪ ಅಂಕಿತಗಳನ್ನು ಮಾತ್ರ ಮಹಿಪತಿರಾಯರ ಅಂಕಿತವೆಂದು ಗ್ರಹಿಸಲಾಗಿದೆ.[3] ಅವುಗಳು–

"ಮಹಿಪತಿ, ದೀನಮಹಿಪತಿ, ತರಳಮಹಿಪತಿ, ದಾಸಮಹಿಪತಿ, ಮೂಢಮಹಿಪತಿ, ನರಕೀಟಕಮಹಿಪತಿ, ಬಾಲಕಮಹಿಪತಿ, ಚಿಣ್ಣಮಹಿಪತಿ, ಕಂದಮಹಿಪತಿ, ಚಿಣ್ಣಕಿಂಕರಮಹಿಪತಿ, ಪುತ್ರಮಹಿಪತಿ, ಮಹಿಪತಿಗುರು, ಮಹಿಪತಿತಂದೆ, ಮಹಿಪೆಮ್ಮ."

ಹೀಗೆ ಸುಮಾರು ೧೪ ಅಂಕಿತಗಳಿಂದ ಮಹಿಪತಿರಾಯರು ಕೃತಿಗಳನ್ನು ರಚಿಸಿದ್ದಾರೆ.

---

೨. ಡಾ. ಕೃಷ್ಣ ಕೊಲ್ಹಾರಕುಲಕರ್ಣಿ–ಕಾಖಂಡಕಿ ಮಹಿಪತಿರಾಯರು (೧೯೮೯) ಪುಟ ೧೨೪

೩. ಡಾ. ಕೃಷ್ಣ ಕೊಲ್ಹಾರಕುಲಕರ್ಣಿ–ಕಾಖಂಡಕಿ ಮಹಿಪತಿರಾಯರು (೧೯೮೯) ಪುಟ ೧೧೫

## ಕೃತಿಗಳ ವೈಶಿಷ್ಟ್ಯ

ಮಹಿಪತಿರಾಯರು ಬಹು ಭಾಷಾ ವಿಶಾರದರಾಗಿದ್ದರು. ಸಹಜವಾಗಿ ಆ ಭಾಷೆಗಳಲ್ಲಿಯು ಭಕ್ತಿ ಸಾಹಿತ್ಯವನ್ನು ಅವರು ಅಭ್ಯಸಿಸಿದವರಾಗಿದ್ದರು. ಮಹಾರಾಷ್ಟ್ರದಲ್ಲಿಯ ಮಹಾನುಭಾವ, ಭಾಗವತ, ಅವಧೂತ ಸಂಪ್ರದಾಯಗಳು ಹಾಗು ಮುಸ್ಲಿಮರಿಂದ ಪ್ರಚಲಿತದಲ್ಲಿದ್ದ ಸೂಫಿ ಸಂಪ್ರದಾಯ, ಕರ್ನಾಟಕದ ವೀರಶೈವ ಶರಣ ಸಾಹಿತ್ಯಗಳನ್ನು ಅವರು ಓದಿಕೊಂಡಿದ್ದರು. ಆದ್ದರಿಂದ ಅವರ ಅನೇಕ ಕೃತಿಗಳಲ್ಲಿ ಈ ಎಲ್ಲ ಸಂಪ್ರದಾಯಗಳ ಪಾರಿಭಾಷಿಕ ಪದಗಳು ಕಂಡು ಬರುವುದು ಸಹಜವಾಗಿದೆ 'ನೇತಿ–ನೇತಿ' ಸೋಹಂ, 'ಸರ್ವಂ ಖಲು ಬ್ರಹ್ಮ ಇದಂ' ಇತ್ಯಾದಿ ಅದ್ವೈತ ಪರ ಶ್ರುತಿ ವಚನಗಳೂ ಇವರ ಕೃತಿಗಳಲ್ಲಿ ಕಂಡು ಬರುವಂತೆ, ನಿರ್ಗುಣ ನಿರಾಕಾರ ಶೂನ್ಯ, ಬಯಲು, ನಿರ್ಬಯಲು, ಇತ್ಯಾದಿ ಪದ ಪ್ರಯೋಗಗಳಿಗೂ ಕೊರತೆ ಇಲ್ಲ. ಅದರಿಂದಾಗಿ ಹಲವರು ಇವರ ಸಂಪ್ರದಾಯವನ್ನು ಗುರುತಿಸುವಲ್ಲಿ ಭಿನ್ನ ಅಭಿಪ್ರಾಯಗಳನ್ನು ತಾಳುವಂತಾಗಿದೆ. ಅವರ ಕೃತಿಗಳಿಗೆ ಮಹಾರಾಷ್ಟ್ರದ ಅನುಭಾವ ಪರಂಪರೆ ಮತ್ತು ಅದ್ವೈತ ಭಕ್ತಿಯ ವ್ಯಾಖ್ಯಾನ ಮಾಡಿದ್ದು ಇದೆ. ಅದನ್ನು ಮೊದಲು ಪ್ರಾರಂಭಿಸಿದವರು ಖ್ಯಾತ ಅನುಭಾವಿ ತತಜ್ಞಾನಿ ಗುರುದೇವ ಅರ್.ಡಿ. ರಾನಡೆ ಅವರು ತಮ್ಮ ಸುಪ್ರಸಿದ್ಧ ಗ್ರಂಥ 'ಕನ್ನಡ ಸಂತರ ಪಾರಮಾರ್ಥ ಮಾರ್ಗ' (ಪಾಥವೇ ಟು ಗಾಡ್ ಇನ್ ಕನ್ನಡ ಲಿಟರೇಚರ) ದಲ್ಲಿ ನಿರೂಪಿಸಿದರು. ಮುಂದಿನ ದಿನಗಳಲ್ಲಿ ಅವರ ಶಿಷ್ಯರೆಲ್ಲರೂ ಮಹಿಪತಿರಾಯರ ಕೃತಿಗಳಿಗೆ ಅವಧೂತಪರವಾದ ವಿವರಣೆಗಳನ್ನು ಕೊಟ್ಟರು.

ಮಹಿಪತಿರಾಯರ ಮನೆತನದವರೇ ಆದ ಹರಿದಾಸ ಶ್ರೀಪತಯ್ಯನವರು ರಾಯರ ಆಧ್ಯಾತ್ಮ ದೃಷ್ಟಿ ಮಾಧ್ವಪರವಾದದ್ದು ಎಂದರು. ಮೈಸೂರು ವಿಶ್ವವಿದ್ಯಾಲಯವು ರಾಯರ ಕೃತಿಗಳನ್ನು ಸಂಪಾದಿಸಿ ಪ್ರಕಟಿಸುವಾಗ ಪ್ರಸ್ತಾವನೆಯಲ್ಲಿ ಅವರ ಸ್ವಾನುಭವ, ಸಿದ್ಧಿಗಳನ್ನು ಎತ್ತಿ ಹಿಡಿದು ದ್ವೈತ

ಸಂಪ್ರದಾಯವೇ ರಾಯರ ಕೀರ್ತನೆಗಳ ತಳಹದಿ ಎಂಬುದನ್ನು ಹಿತಮಿತವಾಗಿ ಹೇಳಿದರು.

ಹೀಗೆ ಹಲವಾರು ವಿದ್ವಾಂಸರು ತಮ್ಮ-ತಮ್ಮ ಸಂಪ್ರದಾಯಗಳಂತೆ, ತಾವು ನಂಬಿದ ಶ್ರದ್ಧೆಯ ಬೆಳಕಿನಲ್ಲಿ ಮಹಿಪತಿರಾಯರಂಥ ಮಹಾತ್ಮರ ಯೋಗಿಗಳ ತಮಗೆ ಅನುಕೂಲವಾಗುವಂಥ ಅವರ ಕೆಲವು ಕೃತಿಗಳನ್ನು ಆಯ್ದುಕೊಂಡು ಅರ್ಥೈಸಲು ಪ್ರಯತ್ನಿಸಿದರು. ಅದು ಅವರವರು ಕಂಡುಕೊಂಡ ದೃಷ್ಟಿ. ಅದರಲ್ಲಿ ಅವರ ತಪ್ಪೇನೂ ಇಲ್ಲ. ಅದಕ್ಕೆ ಅವರು ಸ್ವತಂತ್ರರು. ಆದರೆ ಅದುವೆ ಅಂತಿಮ ನಿರ್ಣಯವಾಗಲಾರದೆಂಬುದೇ ರಾಯರ ಕೃತಿಗಳ ವೈಶಿಷ್ಟ್ಯವಾಗಿದೆ.

ಮಹಿಪತಿರಾಯರ ಕೃತಿಗಳನ್ನು ಅವಲೋಕಿಸುವಾಗ ಮೇಲಿನ ಅಭಿಪ್ರಾಯಗಳನ್ನು ಪುಷ್ಟೀಕರಿಸುವಂಥ ಅನೇಕ ಸಮಸ್ಯೆಗಳು ಪ್ರತಿ ಹೆಜ್ಜೆ-ಹೆಜ್ಜೆಗೂ ಬರುತ್ತವೆ. ದ್ವೈತವೂ ಇದೆ. ಅದ್ವೈತವೂ ಇದೆ. ದ್ವೈತ-ಅದ್ವೈತ ಎರಡೂ ಇಲ್ಲ. ಅದನ್ನು ರಾಯರು ತಮ್ಮ ಒಂದು ಕೃತಿಯಲ್ಲಿ ಸ್ಪಷ್ಟವಾಗಿಯೆ ಹೇಳಿದ್ದಾರೆ.

> ' ದ್ವೈತ ಅದ್ವೈತ ಎಂದು ಹೊಡೆದಾಡದಿರೋ ಪ್ರಾಣಿ
> ಚೇತಿಸಿ ಬ್ಯಾರಿಹ ವಸ್ತುಕಾಣಿ '
> ಎಂದು ಈ ಸಮಸ್ಯೆಯನ್ನು ಬಗೆಹರಿಸಿದ್ದಾರೆ.

ಮನೆತನದಿಂದ ಮಹಿಪತಿರಾಯರು ಮಾಧ್ವ-ವೈಷ್ಣವ ಸಂಪ್ರದಾಯಕ್ಕೆ ಸೇರಿದವರು. ವಂಶ ಪಾರಂಪರ್ಯವಾಗಿ ಮಧ್ವ ಮತ ತತ್ವಗಳಲ್ಲಿ ಅಚಲವಾದ ನಂಬುಗೆಯನ್ನು ಇಟ್ಟವರು. ಅದರಿಂದಾಗಿ ವಾಸ್ತವದಲ್ಲಿ ಮಹಿಪತಿರಾಯರು ಕೂಡ ವಿಷ್ಣು ಸರ್ವೋತ್ತುಮತ್ವ, ಲಕ್ಷ್ಮೀದೇವಿಯು ಪ್ರಕೃತಿ ನಿಯಾಮಕಳು, ಜಗತ್ತು ಪಾರಮಾರ್ಥಿಕ, ಸತ್ಯ ಮುಕ್ತಿ-ನೈಜ ಸುಖಾನುಭವ ಹಾಗು ಮುಕ್ತಿಗೆ ನಿರ್ಮಲವಾದ ಭಕ್ತಿಯೇ ಮುಖ್ಯ ಸಾಧನವೆಂದು ನಂಬಿದ್ದರು. ಅವುಗಳನ್ನು ಅವರು ತಮ್ಮ ಕೃತಿಗಳಲ್ಲಿ ಹಲವಾರು ಸಲ ಪ್ರತಿಪಾದಿಸಿದ್ದಾರೆ.

ಶ್ರೀ ಹರಿಯು ಮಾಧ್ವರ ಇಷ್ಟದೈವ ಅವನು ಸರ್ವೋತ್ತುಮನು. ಸ್ವತಂತ್ರನು ಹರಿಸರ್ವೋತ್ತುಮತ್ವವು ಮಧ್ವಾಚಾರ್ಯರ ಉಪದೇಶದ ತಿರುಳು.

ಶ್ರುಣುತಾಮಲ ಸತ್ಯವಚ: ಪರಮಂ ।
ಶಪಥೇರಿತ ಮುಚ್ಚ್ರಿತ ಬಾಹು ಯುಗಂ ।
ನಹರೇ: ಪರಮೋ: ನಹರೇ: ಸದೃಶ: ।
ಪರಮ: ಸತು ಸರ್ವ ಚಿದಾತ್ಮಗಣಾತ್ ॥

ಎಂದು ಮಧ್ವಾಚಾರ್ಯರು ಇದನ್ನು ತಮ್ಮ ದ್ವಾದಶ ಸ್ತೋತ್ರದಲ್ಲಿ ಸಾರಿ ಹೇಳಿದ್ದಾರೆ. ಶ್ರೀ ಹರಿಗಿಂತ ಉತ್ತಮನಿಲ್ಲ, ಅವನಿಗೆ ಸಮನಾದವರು ಯಾರೂ ಇಲ್ಲ. ಎಲ್ಲ ಜೀವರಾಶಿಗಿಂತ ಅವನು ಉತ್ತುಮನು ಎಂದು ನಾನು ಎರಡೂ ಕೈಗಳನ್ನೆತ್ತಿ ಶಪಥ ಮಾಡುತ್ತ ಪರಮ ಸತ್ಯವಾದ ಈ ಮಾತನ್ನು ಹೇಳುತ್ತೇನೆ ಕೇಳಿ ಎಂದು ಅವರು ಹೇಳಿದ್ದಾರೆ.

ಇದನ್ನೇ ಮಹಿಪತಿರಾಯರು ಏಳು ನುಡಿಗಳ ತಮ್ಮ ಒಂದು ನಿಡಿದಾದ ಕೃತಿಯಲ್ಲಿ ಸುಂದರವಾಗಿ ನಿರೂಪಿಸುತ್ತಾರೆ.

'ಹರಿ ಹರಿ ಹರಿ ಹರಿ ಹರಿಯೆನಬೇಕು
ಹರಿಸ್ಮರಣೆಯೊಳನುದಿನವಿರಬೇಕು ॥

ಎಂದು ಪ್ರಾರಂಭವಾಗುವ ಧ್ರುವ ಪದದ ಕೀರ್ತನೆಯಲ್ಲಿ

" ಹರಿಯೇ ಶ್ರೀ ಪರಬ್ರಹ್ಮನಬೇಕು ।
ಹರಿ ಪರಂದೈವ ವೆಂದರಿಬೇಕು ।
ಹರಿಯೇ ತಾ ಮನ ದೈವವೆನಬೇಕು ।
ಹರಿ ಋಷಿ ಮುನಿ ಕುಲಗೋತ್ರವೆನಬೇಕು ॥

ಎನ್ನುತ್ತಾರೆ. ಹರಿಯೇ ಪರಬ್ರಹ್ಮ, ಹರಿಯೇ ಪರಂದೈವ ಹರಿಯೇ ತಾಯಿತಂದೆ ಬಂಧು-ಬಳಗ, ಆಪ್ತ ಮಿತ್ರರು ಸಲಹುವ ದೊರೆ, ಸುಖ ಸೌಖ್ಯದ ಸಿರಿ ಹರಿಯೇ ಸರ್ವೋತ್ತುಮ ಸ್ವಾಮಿ ಸಕಲ ತಾ ಧರ್ಮವೂ ಹರಿಯೇ, ಶ್ರೀ ಪರಮಾತ್ಮ ಎಂದು ಹೇಳುತ್ತ ಕೊನೆಯಲ್ಲಿ

ಹರಿ ಬಾಹ್ಯಾಂತರೇಕೋಮಯವೆನಬೇಕು ।
ಹರಿ ಸಕಲವು ವ್ಯಾಪಕವೆನಬೇಕು ।
ಹರಿಯೇ ಶ್ರೀ ಪರಮಾತ್ಮನೆನಬೇಕು ।
ಹರಿ ಮಹಿಪತಿ ಸದ್ಗತಿಯೆನಬೇಕು ॥

ಎಂದು ಹೇಳುತ್ತಾರೆ. ಅವರ ಒಟ್ಟಿನ ಕೃತಿಗಳಲ್ಲಿ ಮುನ್ನೂರಕ್ಕಿಂತ ಅಧಿಕ ಕೃತಿಗಳು ಹರಿಗುರುಗಳ ಮಹಿಮೆಗೆ ಮೀಸಲಾಗಿವೆ.

ಆದರೆ ರಾಯರ ಕೃತಿಗಳಿಗೆ ಇದೊಂದೇ ಮುಖ ಇರಲಿಲ್ಲ. ಅವರು ತಮ್ಮ ಸಾಧನೆಗೆ ಬಳಸಿದ್ದು ಯೋಗ ಮಾರ್ಗ. ಈ ಸಾಧಕನ ಜೀವನ ಮಾತ್ರ ಭಾಸ್ಕರ ಸ್ವಾಮಿಗಳಿಂದ ಪ್ರಾರಂಭವಾದದ್ದು, ಅವರ ಅನುಗ್ರಹವೇ ಅದಕ್ಕೆ ಕಾರಣವಾಯಿತು. ಆದ್ದರಿಂದ ಸಾಧನ ಮಾರ್ಗದಲ್ಲಿಯ ವಿವಿಧ ಹಂತಗಳಲ್ಲಿಯ ಸಾಧಕನ ಸ್ವರೂಪ ಆ ಯೋಗ ಮಾರ್ಗದ್ದೇ ಆಗಿದೆ. ಮಾರ್ಗ ಮಧ್ಯದಲ್ಲಿ ದ್ವೈತ ಅದ್ವೈತಗಳ ತಳಕು ಇಲ್ಲ. ನಾಮಸ್ಮರಣೆ, ಜಪ, ತಂತ್ರಯೋಗ ಹಾಗು ರಾಜಯೋಗದ ಅನುಭವಗಳನ್ನು ಅವರು ಅದ್ಭುತವಾಗಿ ವರ್ಣಿಸುತ್ತಾರೆ.

ಹರಿದಾಸರ ಪರಂಪರೆಯಲ್ಲಿ ಕಂಡು ಬರದ ರೀತಿಯಲ್ಲಿ ಕೆಲವೊಮ್ಮೆ ಗುರುವಿನ ವರ್ಣನೆ, ಗುರು ತತ್ವದ ಮಹತ್ವವನ್ನು ಬಿತ್ತರಿಸಿದ್ದಾರೆ ಎಂದು ಅನಿಸಬಹುದು. ಉಳಿದ ಯಾವ ಹರಿದಾಸರೂ ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿರದ ದತ್ತಾತ್ರಯನ ಕುರಿತಾದ ಕೀರ್ತನೆಗಳನ್ನೂ ರಾಯರು ರಚಿಸಿದ್ದಾರೆ. ಉಳಿದ ಹರಿದಾಸರು ವಿಷ್ಣು ಭಕ್ತಿ, ಭಕ್ತಿಯ ಅನುಭವಗಳನ್ನು ಜೊತೆಗೆ ತಮ್ಮ ಸಾಧನ

ಮಾರ್ಗದ ಕಿಂಚಿತ್ ದರ್ಶನವನ್ನು ಮಾಡಿಸಿದ್ದಾರೆ. ಮಹಿಪತಿರಾಯರು ಯೋಗ ಮಾರ್ಗದ ವಿಶಿಷ್ಟ ಅನುಭವಗಳನ್ನು ಸವಿವರವಾಗಿ ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿದರು. ಆದ್ದರಿಂದ ಮಹಿಪತಿರಾಯರು ಕೇವಲ ಹರಿದಾಸರೆಂದಾಗಲೀ, ಯೋಗಿಗಳೆಂದಾಗಲೀ, ತಂತ್ರಸಾಧಕರೆಂದಾಗಲೀ, ಮಹಾ ಭಕ್ತರೆಂದಾಗಲೀ ಪರಿಗಣಿಸಲು ಬರುವುದಿಲ್ಲ. ಅವರು ಈ ಎಲ್ಲವುಗಳು ಆಗಿದ್ದರು ಮತ್ತು ಸಮಕಾಲೀನದಲ್ಲಿ ಸಾಧ್ಯವಿದ್ದ ಎಲ್ಲ ಮಾರ್ಗಗಳಿಂದಲೂ ಆಧ್ಯಾತ್ಮ ಸಾಧನೆ ಮಾಡಿ ಅದ್ಭುತ ಸಿದ್ಧಿಗಳನ್ನು ಪಡೆದವರಾಗಿದ್ದರು. ಈ ದೃಷ್ಟಿಯಿಂದ ಅವರ ಸಾಧನ ಮಾರ್ಗವು ಸಂಕೀರ್ಣವಾದದ್ದು. ಅಂತೆಯೇ ಕರ್ನಾಟಕದ ಅಷ್ಟೇ ಏಕೆ ವಿಶ್ವದ ಅನುಭಾವಿಗಳಲ್ಲಿ ಮಹಿಪತಿರಾಯರ ಸ್ಥಾನವು ವಿಶಿಷ್ಟವಾದದ್ದು ಎಂದು ಗುರುದೇವರಾನಡೆ ಅವರು ಬಾಯ್ತುಂಬ ಹೊಗಳುತ್ತಾರೆ.

## ಶೈಲಿ

ಮಹಿಪತಿರಾಯರು ಮೂಲತ: ಹಿರಿಯ ಅನುಭಾವಿಗಳು, ಸಾಧಕರು, ಸಿದ್ಧರು, ಯೋಗಿಗಳು, ತಮ್ಮ ಬದುಕಿನಲ್ಲಿ ಸಾರ್ಥಕತೆಯನ್ನು ಪಡೆದವರು, ಅವರು ಕವಿಗಳಾಗಬೇಕೆಂದು ಕೃತಿಗಳನ್ನು ರಚಿಸಿದವರಲ್ಲ. ಪರಮಾತ್ಮನನ್ನು ಕಾಣುವ ಹಂಬಲ ಉಳ್ಳವರು ಆದ್ದರಿಂದಲೇ ತಮ್ಮ ಒಂದು ಕೃತಿಯಲ್ಲಿ ಸ್ಪಷ್ಟವಾಗಿ ತಮ್ಮ ರಚನೆಗಳ ಬಗ್ಗೆ ಹೇಳಿಕೊಂಡಿದ್ದಾರೆ.

> 'ಸರ್ವೋತ್ತಮನ ಸ್ತುತಿಗೆ ಸರಿಬೆಸದಕ್ಷರ ದೆಣಿಕ್ಯಾಕೆ ।
> ಯತಿಗಣ ಪ್ರಾಸವ್ಯಾಕೆ ಸ್ತುತಿಸ್ತವನ ಕೊಂಡಾಡಲಿಕ್ಕೆ ।
> ಹಿತದೋರದು ಮಿತಿ ಮಾಡಲಿಕ್ಕೆ ಅತಿ ಶೋಧಿಸಲಿಕ್ಕೆ ।
> ಮುಕ್ತಿಗೆ ಬದ್ಧವೆಂದೆಂದೊ ಉತ್ತಮರುಪೇಕ್ಷಿಸರೆಂದೂ
> ನೆತ್ತಿಲಿಟ್ಟು ಕೊಂಬರು ಬಂದು ಅತಿಪ್ರೀತಿಲೆ ನಿಂದು ॥'

ಎಂದು ಹೇಳುತ್ತಾರೆ. ಅನುಭಾವಿಗಳ ದಾರಿಯಿಲ್ಲಯ ವನಶ್ರೀಯಂತೆ ಅವರ

ಕಾವ್ಯಸಂಪತ್ತಿದೆ. ಅವುಗಳಿಗೆ ಮೂಲ ಪ್ರೇರಣೆ ಅವರ ಅನುಭವ ಹಾಗು ಸಾಧನೆಯೇ ಆಗಿದೆ. ಒಂದೊಂದು ಸಾಧನೆ, ಸಿದ್ಧಿಯ ಅನಂತರ ಪಡೆದ ಅಮೃತ ಶಾಂತಿಯನ್ನು ಅವರು ತಮ್ಮ ಕೃತಿಗಳಲಿ ಪ್ರಕಟಿಸಿದ್ದಾರೆ. ಗಿಡ ಬಳ್ಳಿಗಳಿಗೆ ಚಿಗುರು, ಹೂವು, ಕಾಯಿ, ಹಣ್ಣುಗಳಾಗುವಷ್ಟು ಸಹಜ–ಸ್ವಾಭಾವಿಕವಾಗಿ ಈ ಕೃತಿಗಳ ಸೃಷ್ಟಿಯಿದೆ. ಹೇಳಬೇಕೆಂಬ ಉತ್ಕಟ ಆಕಾಂಕ್ಷೆಯಲ್ಲಿ ಕಾವ್ಯ ಹೊರಹೊಮ್ಮುತ್ತದೆ. ಅಲ್ಲಿ ಯತಿ, ಗಣ, ಪ್ರಾಸಗಳು ಅಭ್ಯಾಸವಿಲ್ಲದೆಯೇ ಕೆಲವೊಮ್ಮೆ ಅವುಗಳು ಬಂದಿರುತ್ತವೆ.

ಮಹಿಪತಿರಾಯರ ದೊರೆತ ಕೃತಿಗಳ ಸಂಖ್ಯೆ ವಿಪುಲವಾಗಿದ್ದಂತೆ ಅವುಗಳ ರಚನಾ ವಿಧಾನವು ವೈವಿಧ್ಯ ಪೂರ್ಣವಾಗಿದೆ. ಬಹುಶ: ರಾಯರ ಶಿಷ್ಯ ಮಂಡಲಿಯು ಕೆಲವು ಶಿಷ್ಟರದ್ದಾಗಿರಲಿಲ್ಲವೆಂದು ತೋರುತ್ತದೆ. ಎಲ್ಲ ಬಗೆಯ ಸಾಮಾಜಿಕ ಅಂತಸ್ತುಗಳಿಗೆ ಸೇರಿದ ಜನರು ಇದ್ದಿರಬೇಕು. ಆದ್ದರಿಂದ ಅವರವರ ಅಭಿರುಚಿಗೆ ತಕ್ಕಂತೆ, ಸಾಂಸ್ಕೃತಿಕ ಮಟ್ಟಗಳಿಗೆ ಸರಿ ಹೊಂದುವಂತೆ ಬೇರೆ ಬೇರೆ ಬಗೆಯ ಸಾಹಿತ್ಯ ರಚನೆ ಮಾಡಿದ್ದಾರೆ. ವಿಷಯ ಒಂದೇ ಆಗಿದ್ದರೂ ಅದನ್ನು ವಿವರಿಸುವ ರೀತಿ ವೈವಿಧ್ಯಮಯವಾಗಿದೆ.

ಸುಸಂಸ್ಕೃತ ಶಿಷ್ಯರಿಗಾಗಿ ಕೀರ್ತನೆಗಳನ್ನು ಸ್ತುತಿ ಸ್ತೋತ್ರ ಪದಗಳನ್ನು ಆರತಿ ಪದಗಳನ್ನು, ಪ್ರಾತ: ಸ್ಮರಣೆಗಳನ್ನು ರಚಿಸಿದ್ದಾರೆ. ಸ್ತ್ರೀಯರಿಗಾಗಿ ಸಾಂಗತ್ಯ, ಶೋಭನ ಪದ, ತ್ರಿಪದಿ, ಜೋಗುಳ ಪದ, ಕುಟ್ಟುವ ಪದ, ಸುವ್ವಿಪದ, ಕೋಲಾಟದ ಪದಗಳನ್ನು ಬರೆದಿದ್ದಾರೆ. ಜನ ಸಾಮಾನ್ಯರಿಗೆ ಲಾವಣಿ, ಹಂತಿ ಪದ, ಭಾವಗೀತೆ, ಕೋಲಾಟ, ಕೊರವಂಜಿ ಪದ, ಸುಗ್ಗಿಯ ಪದ, ತಾನಾ ತಂದಾನಾಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ವೃತ್ತಗಳ ವಿವಿಧತೆಯೂ ಸಾಕಷ್ಟಿದೆ. ಬೇರೆ ಬೇರೆ ರಾಗ ತಾಳಗಳಿಂದ ಕೂಡಿದ ತ್ರಿಪದಿಗಳು, ಚೌಪದಿಗಳು, ಸಾಂಗತ್ಯ, ಭಾಮಿನಿ, ವಾರ್ಧಕ ಷಟ್ಪದಿಗಳೂ ರಗಳೆ, ಲಾವಣಿ, ಮಾಲಾವೃತ್ತ, ವಚನ ಇವುಗಳಿಂದ ರಾಯರ ಸಾಹಿತ್ಯವು ಸಂಪದ್ಭರಿತವಾಗಿದೆ, ಹೃದಯಂಗಮ ವಾಗಿದೆ.

ಕನ್ನಡದ ಹೊರತಾಗಿ ಅವರು ಮರಾಠಿ ಹಾಗು ಅಂದು ಪ್ರಚಲಿತದಲ್ಲಿದ್ದ ದಖಣಿ ಉರ್ದು ಭಾಷೆಯಲ್ಲೂ ಕೆಲವು ಕೃತಿಗಳನ್ನು ರಚಿಸಿದ್ದಾರೆ. ಜೊತೆಗೆ ಮಿಶ್ರಭಾಷೆ ಎಂದರೆ ಕನ್ನಡ, ಮರಾಠಿ, ತೆಲುಗು, ಪರ್ಶಿಯನ್ ಹಾಗು ದಖಣಿ ಭಾಷೆಗಳನ್ನು ಬಳಸಿ ರಚಿಸಿದ ಪದಗಳೂ ದೊರೆಯುತ್ತವೆ. ಅಪ್ಪಟ ಸಂಸ್ಕೃತ ಭಾಷೆಯ ಕೃತಿಯೇನೋ ಎಂಬಂಥ ರಚನೆಗಳೂ ಇವೆ. ಇದರಿಂದಾಗಿ ಅವರ ಕನ್ನಡ ಕೃತಿ ರಚನಾ ಶೈಲಿಯ ಮೇಲೆ ಸಾಕಷ್ಟು ಪರಿಣಾಮವಾಗಿದೆ. ಸಂಸ್ಕೃತ ಹಾಗು ಕನ್ನಡ ಜಾನಪದ ನುಡಿಗಳ ಮಧುರ ಮಿಲನವಂತೂ ಸರಿಯೆ, ದಖಣಿ ಭಾಷೆಯ ಪ್ರಭಾವದಿಂದಾಗಿ ಅವರು ಕನ್ನಡ ಭಾಷೆಯನ್ನು ಹೇಗೆ ಬೇಕೋ ಹಾಗೆ ದುಡಿಸಿಕೊಂಡಿದ್ದಾರೆ. ಅವರ ಕನ್ನಡ ಬಹುತೇಕ ಕೃತಿಗಳಲ್ಲಿ ವಿಜಾಪುರದ ಸುತ್ತ ಮುತ್ತ ಇಂದಿಗೂ ಬಳಸುವ ಜನಸಾಮಾನ್ಯ ಶಬ್ದಗಳ ಬಳಕೆಯೇ ಅಧಿಕವಾಗಿದೆ.

ಹಾನ(ಇದ್ದಾನೆ), ಅಭ್ಯಂತ್ರ, ಕರಕೋ, ಅಮ್ಮೆ ಅಮ್ಮಿ(ಮೊಲೆ) ರಮ್ಮಿಸಿ, ತ್ಯರನೆ, ಕುರುವ್ವು, ಸಿಲ್ಕುವ, ಅರಿಕ್ಯುಳ, ತಿರುವು ಮರವು, ಖೂನ(ಗುರುತು), ಬೆರಿ(ಕೂಡು), ಠಾವ, ಇರಳ್ಹಗಲ ಬಡಿವಾರ, ಸರ್ಕನೆ, ತುಂಬ್ಯಾದ, ಗುರ್ತು, ಬೆರ್ತು, ಪ್ಯಾಟಿ, ಸೂರ್‍ಯಾಡು ಕಡಗಂಡು, ಸರಗೆ , ಉಮ್ಮಸ(ಹುಮ್ಮಸ), ಭಗತರು, ಹೊತ್ತಿಗೆ, ಸುಖಗರು ತದೆ, ಸಂತ್ರಾಧಾರಿ, ಸ್ವಸ್ಥ, ಆಖರದಿ, ಕಂಡಮ್ಯಾಲೆ, ಬಲುಬ್ಯಾಗ, ಕೊಟ್ಟಾಂಗ, ತುಟ್ಟಿಲೆ(ತುಟಿಲೆ), ಹೊಟ್ಟಿ, ಸಾಯಾಸ, ಮಾರಗವು, ಹತ್ತಿಲೆ, ಸೂಟಿ, ನಾಟಿ, ಮುರುವು, ಇತ್ಯಾದಿ ಇನ್ನೂ ಅನೇಕ ಶಬ್ದಗಳನ್ನು ಉದಾಹರಿಸಬಹುದು, ಭಾಷಾಭ್ಯಾಸಿಗಳಿಗೆ ರಾಯರ ಸಾಹಿತ್ಯವು ಒಂದು ಆಗರವಿದ್ದಂತೆ ಮಾದರಿಗಾಗಿ ಕೆಲವು ಶಬ್ದಗಳ ಉಪಯೋಗವನ್ನು ನೋಡುವುದಾದರೆ,

' ಸುಗ್ಗಿ ಇದೆ ಲಗ್ಗೆ ಮಾಡಿಕೊಳ್ಳಿ
ಬಗ್ಗಿ ಉಣಬೇಕು ಹಿಗ್ಗಿಕೋಳ್ಳೋ '
' ಉಮ್ಮೆ ಸವಿದೊಮ್ಮೆ ಅಮ್ಮ ನಾ
ಅಮ್ಮಿಯಾಲಮೃತೆರಿ '

' ಮುರು ಹರಿಯಗುಡದನಕ '

' ಮರಹು ಮರದೀಡ್ಯಾಡಿ '

' ಒಳ್ಳ್ಯಾವರ ಕೇಳಿ ಉಳವಉಪಾಯದ ಮಾತು '

' ಅಟಾಅಟ ಬಡುವದ್ಯಾತಕೆ '

ಇತ್ಯಾದಿ ವಾಕ್ಯ ಪ್ರಯೋಗಗಳು ಆಡು ಮಾತಿನ ಬಳಕೆಗೆ ಸಾಕ್ಷಿಯಾಗಿವೆ.

ಮಹಿಪತಿರಾಯರು ಶಬ್ದ ಸಾಮ್ರಾಟರು ಅವರ ಶಬ್ದ ಸಂಗ್ರಹ ಅನುಪಮವಾಗಿದೆ. ಆ ಶಬ್ದಗಳ ಸರಿ ಉಪಯೋಗ ಕೃತಿಗಳಿಗೆ ನಾದ ಮಾಧುರ್ಯವನ್ನು ಒದಗಿಸಿದೆ. ಪ್ರಾಸ ಅನುಪ್ರಾಸ, ಯಮಕಾದಿ ಶಬ್ದಾಲಂಕಾರಗಳು, ಮುಕ್ತ ಪದ ಗ್ರಾಸಾಲಂಕಾರ, ಅರ್ಥಾನುಕಾರಿ ನಾದವುಳ್ಳ ಶಬ್ದಗಳ ಬಳಕೆ ಸಹಜವಾಗಿ ಹೊರಹೊಮ್ಮಿ ಅವರ ಕೃತಿಗಳ ನಾದಮಾಧುರ್ಯವನ್ನು ಹೆಚ್ಚಿಸಿದೆ.

ಉದಾಹರಣೆಗೆ 'ಸತ್ಸಂಗ ಮಾಡೋ ಮನವೆ' ಎಂಬ ಲಾವಣಿಯಲ್ಲಿಯ ಅನುಪ್ರಾಸ ಯಮಕಗಳು ಅನುಪಮವಾಗಿವೆ. ಇವುಗಳು ಸಹಜವಾಗಿ ಬಂದಿವೆಯಲ್ಲದೆ ಪಾಂಡಿತ್ಯದ ಪ್ರತೀಕವಾಗಿ ಅಲ್ಲ ಎಂಬುದು ಗೊತ್ತಾಗದೆ ಇರದು.

'ತೊಡಕಿ ಮಿಡುಕಬ್ಯಾಡ ಹಡಕಿ ವಿಷಯದೊಳು ಗಡಕವಾಗಿ ।
ಕೆಡುಕ ಬುದ್ಧಿಯಿಂದ ಕೆಡುದೇನ ಬಡದ ಭವಣೆಬುಟ್ಟು ।
ಮಡದಿ ಮಕ್ಕಳಿಗೆ ದುಡಿದು ತಂದು ಅಡಕಿದರ ತಾವು ಕೊಡುದೇನ ।'

ಎಂದು ಮುಂತಾಗಿ ಸಾಗುವ ಸುಧೀರ್ಘ ಲಾವಣಿಯೊಂದಿಗೆ,

'ಮೂರುಗುಣ ರಹಿತ ಮೂರುಲೋಕ ವಂದಿತ
ಮುರಹರನಹುದೀತ ಗುರುನಾಥ ।

ಸುರಜನ ಪೂರಿತ ಪರಮಾನಂದ ಭರಿತ
ತಾರಕನಹುದೀತ ಗುರುನಾಥ ॥

ಎಂಬ ಎಂಟು ನುಡಿಗಳ ಒಂದೇ ಒಂದು ಒತ್ತಕ್ಕರದ ಉಪಯೋಗವಿಲ್ಲದ ಕೃತಿಯನ್ನೂ ನೋಡಬಹುದು. ಅದರಂತೆ ' ಒಡೆಯನೆಂದು ನಿಮ್ಮ ವಿಡದಿರೆ ಪಾದವ' ಅಥವ 'ಇದೇ ನೋಡಿರೋ ನಿಜ ಕೂಡಿರೋ' ಮೊದಲಾದ ಕೃತಿಗಳನ್ನು ನೋಡಬಹುದು.

' ನೊಡಿ ನೋಡಿ ನೋಡಿ ನೋಡುದರೊಳು ಕೂಡಿ
ನೊಡುವದೇನೆಂದು ನೋಡಿ
ನೋಡಿದ ಮ್ಯಾಲಿನ್ನು ಮೂಡಿ ಬಂದರ ಘನ
ನೋಡುವದೇ ಖೂನಮಾಡಿ
ಮಾಡಿದ ಮಾಟವು ಕೂಡಿ ಬಂದರ ಕೈಯ
ನಾಡಗೂಡ ಹೇಳಬ್ಯಾಡಿ
ಗೂಢಗುಹ್ಯದ ಮಾತು ಒಡೆದು ಹೇಳುದಲ್ಲ
ನೋಡಿ ನಿಮ್ಮೊಳು ಬೆರದಾಡಿ '

ಇಂಥ ಸಾಲುಗಳು ಓದುಗರ ಕಿವಿಗಳನ್ನು ತಣಿಸದಿರವು, 'ಸೋಜಿಗವಾಯಿತು ಸದ್ಗುರುವಿನ ಕೃಪೆ' ಎಂಬ ಕೃತಿಯಲ್ಲಿನ,

' ನೀಗು, ಹೋಗು, ಬಾಗು, ಸಾಗು, ಆಗು, ಕೂಗು, ತೂಗು, ಮತ್ತು
ಹರಿ, ಮುರಿ, ಕುರಿ, ಮರಿ, ಅರಿ, ಸುರಿ, ನರಿ, ತ್ಯರಿ, ಜರಿ, ನೆರಿ, ಅಲ್ಲದೆ
ಜಾರು, ಮೀರು, ಹಾರು, ತೋರು, ಸೇರು, ಸಾರು, ಭೀರು

ಈ ಶಬ್ದಗಳ ಬಳಕೆಯನ್ನು ಗಮನಿಸಬಹುದು.

## ಸಮರೋಪ

ಜಾತಿ, ಮತ, ಪಂಥಗಳ ಗೋಜಲು ಇಂದು ಎಂದಿಗಿಂತಲೂ ಹೆಚ್ಚಾಗಿದೆ. ಮಹಿಪತಿರಾಯರು ತಮ್ಮ ಶ್ರದ್ದೆಯನ್ನು ಬದಲಿಸದೆ, ಧರ್ಮ ಸಮನ್ವಯದ ಸಂದೇಶವನ್ನು ಸಾರಿದರು. ಮೂರುವರೆ ಮೊಳದ ದೇಹದ ಶುದ್ಧಿಯನ್ನು ಪಡೆಯದೇ ದ್ವೈತ-ಅದ್ವೈತ ಎಂದು ಯಾಕೆ ಬಡಿದಾಡುತ್ತಿ? ಎಂದು ಕೇಳಿದರು. ಸಮಕಾಲೀನ ಸಮಾಜದೊಂದಿಗೆ ಜಾತಿ, ಮತ, ಕುಲಗಳ ಭೇದವಿಲ್ಲದೆ ಬೆರೆದು ಆತ್ಮೋನ್ನತಿಯ ಮಾರ್ಗವನ್ನು ತೋರಿದರು. ಹಿಂದು ಧರ್ಮವೆ ಖಿಲವಾಗುತ್ತಿದ್ದ ದಿನಗಳಲ್ಲಿ ಮಹಿಪತಿರಾಯರು ಹಿಂದು ಧರ್ಮ ಹಾಗು ಸಂಸ್ಕೃತಿಯನ್ನು ಪುನರುಜ್ಜೀವಿಸಿದರು. ಅವರು ತಮ್ಮ ಸಾಹಿತ್ಯವನ್ನು ಒಂದು ಸಂಪ್ರದಾಯಕ್ಕೆಂದು ಸಂಕುಚಿತಗೊಳಿಸಲಿಲ್ಲ. ಅದರಂತೆ ಭಾಷೆ ಯಾವುದಾದರೇನು? ದೇವರನ್ನು ಕಾಣುವ, ಅವನನ್ನು ಅರ್ಥಮಾಡಿಕೊಳ್ಳುವ ದಾರಿ ಒಂದೇ ಎಂದು ಮುಂತಾಗಿ ಹೇಳಿ ತಮ್ಮ ದೃಷ್ಟಿಯನ್ನು ನಾಲ್ಕು ನಿಟ್ಟಿಗೂ ಹರಿ ಬಿಟ್ಟರು. ಅದು ಅವರ ದೊಡ್ಡಗುಣ.

ಮಹಿಪತಿರಾಯರು ಕನ್ನಡ ಸಾಹಿತ್ಯಕ್ಕೆ ನೀಡಿದ ಅಮೋಘ ಕೊಡುಗೆ ಅವರ ಅನುಭಾವ ಸಾಹಿತ್ಯ. ಅದರಲ್ಲೂ ಅವರು ಕನ್ನಡಮ್ಮನಿಗೆ ಮಾಡಿಸಿದ ರಾಜಯೋಗದರ್ಶನ ಅನುಪಮವಾದದ್ದು.

ರಾಜಕೀಯ ಅವ್ಯವಸ್ಥೆ, ಸಾಮಾಜಿಕ ಅವನತಿ, ಧಾರ್ಮಿಕ ಅಸ್ಥಿರತೆಗಳು ತುಂಬಿದ್ದ ಕಾಲದಲ್ಲಿ ಮಹಿಪತಿರಾಯರು ಬಂದರು. ಕೃತಿ ರಚನೆ ಮಾಡಿದರು, ಆ ಕೃತಿಗಳ ಮೂಲಕ ದಿಕ್ಕುಗೆಟ್ಟಿದ್ದ ಸಮಾಜಕ್ಕೆ ಆಸೆ, ಧೈರ್ಯ, ಭರವಸೆಗಳನ್ನು ತಂದರು. ಮೇಲಾಗಿ ಹೃದಯದ ಹಣತೆಗಳನ್ನು ಹೊತ್ತಿಸಿ ಮಾನವೀಯತೆಯ ಬೆಳಕು ಚೆಲ್ಲಿದರು. ಹರಿದಾಸ ಸಾಹಿತ್ಯದ ಆಕಾಶದಲ್ಲಿ ಹೊಳೆಯುತ್ತಿರುವ ಅನೇಕ ತೇಜ: ಪುಂಜ ನಕ್ಷತ್ರಗಳಲ್ಲಿ ಮಹಿಪತಿರಾಯರು ಸಿಡಿದುನಿಂತ ಧ್ರುವ ನಕ್ಷತ್ರದಂತಿದ್ದಾರೆ.

## ಗ್ರಂಥ ಸಂಪಾದನೆ

ಇಲ್ಲಿಯ ಕೃತಿಗಳನ್ನು ಸಂಪಾದಿಸುವಾಗ ಪ್ರಮುಖವಾಗಿ ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದ ಶ್ರೀ ಮಹಿಪತಿರಾಯರ ಕೃತಿಗಳು ಎಂಬ ಕೃತಿಯನ್ನು ಆಕರವನ್ನಾಗಿಟ್ಟುಕೊಂಡು ವಿಜಾಪುರದ ಶ್ರೀ ದ್ಯಾವಪ್ಪಯ್ಯ ಕಾಖಂಡಕಿ ಅವರ ಹತ್ತಿರವಿದ್ದ ಹಸ್ತ ಪ್ರತಿಗಳೊಂದಿಗೆ ಕೆಲವು ಪಾಠಾಂತರಗಳನ್ನು ಗುರುತಿಸಿ ಸಂಪಾದಿಸಲಾಗಿದೆ. ಹಲವಾರು ಹಸ್ತ ಪ್ರತಿಗಳನ್ನು ಶೋಧಿಸಿ ಇನ್ನಷ್ಟು ಅಧಿಕ ಕೃತಿಗಳನ್ನು ಸೇರಿಸಲಾಗಿದೆ. ಜೊತೆಗೆ ಅವರ ಮೂರು ಮಿಶ್ರಭಾಷಾ ಕೃತಿಗಳನ್ನು ಮಾದರಿಗಾಗಿ ಕೊಟ್ಟಿದೆ. ಈ ಕೃತಿಗಳನ್ನು ಸಂಪಾದಿಸಲು ಅನುವು ಮಾಡಿಕೊಟ್ಟ ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೂ, ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಗೂ ಹಾಗು ಶ್ರೀ ದ್ಯಾವಪ್ಪಯ್ಯ ಹರಿದಾಸ ಕಾಖಂಡಕಿ ಶ್ರೀ ಅರ್.ಜಿ.ಹರಿದಾಸ ಇವರಿಗೂ ನನ್ನ ಕೃತಜ್ಞತೆಗಳು.

ಕೃಷ್ಣ ಕೊಲ್ಹಾರಕುಲಕರ್ಣಿ.

# ಕೀರ್ತನೆಗಳ ಕ್ರಮಸೂಚಿ

# ಅನುಬಂಧಗಳು

೧. ಕಠಿಣಶಬ್ದಗಳ ಅರ್ಥ

೨. ಸಂಖ್ಯಾ ವಿಶಿಷ್ಟ ಪದಗಳು

೩. ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ
ಸಾಂದರ್ಭಿಕ ಪೌರಣಿಕ ವ್ಯಕ್ತಿಗಳು

೪. ಕೀರ್ತನೆಗಳ ಅಕಾರಾದಿ

# ಅನುಬಂಧ–೧

## ಕಠಿಣ ಶಬ್ದಗಳ ಅರ್ಥ

**ಅ**

ಅರ್ಕಮಂಡಲ = ಸೂರ್ಯಮಂಡಲ
ಅಕ್ಕಿಸು = ಪಡೆದುಕೊಳ್ಳು
ಅಖರದಿಂದ = ಅಕ್ಕರೆಯಿಂದ
ಅಟಾಅಟ = ಡಂಭಾಚಾರ, ಅಟ್ಟಹಾಸ
ಅಡಕ = ಇಕ್ಕಟ್ಟು, ತೊಂದರೆ, ಒಳಗೊಂಡ
ಅಡಕು = ತುಂಬು
ಅಢಳ = ಹಿರಿದ
ಅರ್ತು = ಅರಿತು, ತಿಳಿದು
ಅರ್ಥಿ = ಅಪೇಕ್ಷೆ
ಅಧಿ = ನೆಲೆ
ಅನಕಾ = ಅಂತು , ವರೆಗೆ
ಅನಿಮಿಷದೃಷ್ಟಿ = ಎವೆಯಿಕ್ಕದ ದೃಷ್ಟಿ
ಅನುಷ್ಠಾನ = ಆಚರಣೆ
ಅನುಸಂಧಾನ = ಪ್ರಯೋಗ, ಸಾಧನೆ
ಅಪಾರ = ಅನಂತ
ಅಭ್ಯಂತ್ರ = ತೊಂದರೆ
ಅಮ್ಮಿ = ಮೊಲೆ
ಅಮ್ಮೆ = ಮೊಲೆ
ಅಮೂರ್ತಿ = ನಿರಾಕಾರ
ಅರಕ (ಅರ್ಕ) = ಸೂರ್ಯ
ಅರವು = ಅರಿವು, ತಿಳಿ
ಅರಹು = ಅರಿವು, ತಿಳಿ
ಅರಹುತ = ಅರ್ಹತೆ, ಯೋಗ್ಯತೆ
ಅವಧೂತ = ಎಲ್ಲವನ್ನು ಬಿಟ್ಟವನು, ಬೈರಾಗಿ
ಅರ್ವ = ಅರಿವು, ತಿಳಿ
ಅವಸರ = ಸಮಯ, ಬೇಗ
ಅಸಿಯಕಲ್ಲು = ಅರೆಯುವ ಕಲ್ಲು
ಅಳ್ಳು = ಅಳುಕು, ಹೆದರಿ
ಅಕ್ಷ = ಅಚ್ಚು
ಅಂಕುರ = ಚಿಗುರು
ಅಂದಣ = ಪಲ್ಲಕ್ಕಿ
ಅಂಧತ್ವ = ಕುರುಡುತನ
ಅಂಡಲಿ = ಗೋಳಾಡು, ಅಂಡಲೆಯುವುದು

**ಆ**

ಆಗಮ = ಶಾಸ್ತ್ರ
ಆಗರ = ಮನೆ
ಆಟ್ಟಿ = ಅಟ್ಟುಳಿ, ಹಿಂಸೆ

# ದೇವತಾಸ್ತುತಿ

## ೧

ಸರ್ವೋತ್ತಮನ ಸ್ತುತಿಗೆ ಸರಿಬೆಸದಕ್ಷರದೆಣಿಕ್ಯಾಕ ಧ್ರುವ

ಯತಿ ಫಲ ಗಣ ಪ್ರಾಸವ್ಯಾಕೆ ಸ್ತುತಿಸ್ತವನ ಕೊಂಡಾಡಲಿಕ್ಕೆ
ಹಿತದೋರದು ಮಿತಿ ಮಾಡಲಿಕ್ಕೆ ಅತಿ ಶೋಧಿಸಲಿಕ್ಕೆ ೧

ಮುತ್ತಿಗೆ ಬುದ್ಯುಶದೆಂದು ಉತ್ತಮರಪೇಕ್ಷರೆಂದೆಂದು
ನೆತ್ತಿಲಿಟ್ಟು ಕೊಂಬರು ಬಂದು ಅತಿ ಪ್ರೀತಿಲೆ ನಿಂದು ೨

ಅತಿ ಸಾರಸ ಮಳೆಗರೆಯುತಿರಲು ಸತತ ಸುಪಥ
ಸ್ವಾನಂದದ ಸರಳು
ಮತಿ ಹೀನರು ಬಲ್ಲರೇನದರೊಳು ಮಾತಿನ ಮರಳು ೩

ನದಿ ಋಷಿ ಮೂಲೆತ್ತಲು ಕೇಳಿ ಸಾಧಿಸಿ ಬೀಳ್ವದು
ಬಾಯಲಿ ಧೂಳಿ
ಭೇದಾ ಭೇದವು ಮಾಡದೆ ಬಾಳಿ ಇದೇ ಪರಿ ಸ್ತುತಿಯಲಿ ೪

ತಪ್ಪು ಕಡಿಯ ನೋಡದೆ ಎನ್ನೊಡೆಯ ಒಪ್ಪಿಸಿಕೊಂಬ
ಮಹಿಪತಿ ಸ್ತುತಿನುಡಿದು
ಅಪ್ಪವ್ವನುತಾ ಎನ್ನ ಕಡಿಯ ತಪ್ಪನೆ ತುಸು ಹಿಡಿಯ ೫

## ೨

ಉದಯಲೆದ್ದು ಶ್ರೀ ಗುರುವೆನ್ನಿರೊ
ಉದಧಿನಿವಾಸ ಸದ್ಗುರುವೆನ್ನಿರೊ ಧ್ರುವ

ಕರುಣಕರನೆನ್ನಿ ಗುರುಮುರಹರನ್ನೆನಿ
ಕರಿವರ ಹರಿ ಸರ್ವೋತ್ತಮನೆನ್ನಿ ೧

ಸುರಮುನಿವರನೆನ್ನಿ ಗುರುಗಿರಿಧರನೆನ್ನಿ
ನರಕೀಟಕನ ಪಾಲಿಪನೆನ್ನಿರೊ ೨

ಶರಣರಕ್ಷಕನೆನ್ನಿ ವರದಾಯಕನೆನ್ನಿ
ತ್ರೈಲೋಕ್ಯನಾಥ ತಾರಕನೆನ್ನಿರೊ ೩

ವಿಹಂಗವಾಹನನೆನ್ನಿ ತ್ರಿ ಕಂಚಧರ(?)ನೆನ್ನಿ
ಪಾಸಾಲ(?) ಸಾಹಿತ್ಯದೇವನೆನ್ನಿ ೪

ಭಕ್ತವತ್ಸಲನೆನ್ನಿ ಮುಕ್ತಿದಾಯಕನೆನ್ನಿ
ಮಹಿಪತಿ ಗುರು ಭವನಾಶನೆನ್ನಿ ೫

## ೩

ಮುಂಜಾನೆ ಎದ್ದು ಮುರಹರನ ಸ್ಮರಿಸೆಲೆ ಮನವೆ
ಅಂಜುವ ಭವದುರಿತ ಹಿಂಗಿಸುವನು ಧ್ರುವ

ಕೇಶವೆಂದೆನಲು ತಾ ಕ್ಲೇಶ ಪರಿಹರಿಸುವನು
ನಾಶಗೈಸುವ ಭವ ನಾರಾಯಣೆನಲು
ಮೀಸಲು ಮನದಲೊಮ್ಮೊ ಮಾಧವೆಂದೆನಲು
ತಾ ಭಾವಿಸುವ ಹೃದಯದೊಳು ಗೋವಿಂದನು

ವಾಸನೆಯ ಪೂರಿಸುವ ವಿಷ್ಣು ಯೆಂದೆನಲು ತಾ
ದೋಷ ಛೇದಿಸುವ ಮಧುಸೂದನೆನಲು
ಲೇಸುಗೈಸುವ ಜನುಮ ವಾಮನೆನಲು ೧

ಸಿರಿ ಸಕಲ ಪದವೀವ ಶ್ರೀಧರಂದೆನಲು ತಾ
ಹರುಷಗತಿನೀವ ಹೃಷೀ ಕೇಶನೆನಲು
ಪರಮ ಪಾತಕ ದೂರ ಪದ್ಮಾನಾಭೆಂದೆನಲು
ದಾರಿದ್ರ ಭಂಜನ ದಾಮೋದರೆನಲು
ಸುರಿಸುವ ಅಮೃತವ ಸಂಕರುಷಣೆಂದೆನಲು
ಹೊರೆವ ಧರೆಯೊಳು ವಾಸುದೇವೆನಲು
ಪರಿಪರಿಯ ಸಲುಹುವ ಪ್ರದ್ಯುಮ್ನನೆಂದೆನಲು
ಅರಹುಗತಿನೀವ ಅನಿರುದ್ಧನೆನಲು ೨

ಪೂರಿಸುವ ಭಾವ ಪರುಷೋತ್ತಮೆಂದೆನಲು ತಾ
ತಾರಿಸುವ ಜನುಮ ಅಧೋಕ್ಷಜೆನಲು
ನರಜನ್ಮುದ್ಧರಿಸುವ ನಾರಸಿಂಹೆಂದೆನಲು
ಕರುಣ ದಯ ಬೀರುವ ಅಚ್ಯುತನೆನಲು
ಜರಿಸುವ ದುರ್ವ್ಯಸನ ಜನಾರ್ದನೆನಲು
ಊರ್ಜಿತಾಗುವುದು ಉಪೇಂದ್ರ ಎನಲು
ತರಳ ಮಹಿಪತಿ ಪ್ರಾಣದೊಡೆಯ ಶ್ರೀಹರಿಯೆನಲು
ಕರುಣದಿಂದದೊಗುವ ಗುರುಕೃಷ್ಣನು ೩

೪

ನೆನೆದು ನಮಿಸುವೆ ನಾನು ವಾರಂವಾರ ಪ

ನೆನೆದು ನಮಿಸುವೆ ನಾನನುದಿನ ಹರಿಪದ
ವನಜ ಮಧುಪರಾದ ಅನುಭವ ಶರಣರ ಅ.ಪ

ಆದಿಮೂರುತಿತ್ರಯ ಮಧ್ವಮುನಿರೇಯ
ಬೋಧಕ ಪದ್ಮನಾಭ ನರಹರಿ ಧ್ಯಾನ
ಮಾಧವಾಕ್ಷೋಭ್ಯರ ಮಹಾ ಜಯತೀರ್ಥರಾ
ರಾಧಕ ವಿದ್ಯಾದಿರಾಜ ಕವಿನಿಧಿ
ಸಾದರ ವಾಗೀಂದ್ರ ಶಾಂತ ರಾಮಚಂದ್ರ
ಸಾಧು ವಿದ್ಯಾನಿಧಿಯರ ರಘುನಾಥ
ಮೇದಿನಿ ರಘುವರ್ಯರ ರಘೋತ್ತಮ
ವೇದವ್ಯಾಸಾರ್ಯರ ವಾರಂವಾರ ೧

ಇತ್ತ ವಿದ್ಯಾಧೀಶ ಈ ವೇದನಿಧಿ ಘೋಷ
ಸತ್ಯವ್ರತರ ನಾಮ ಸತ್ಯನಿಧಿಯ ನೇಮ
ಸತ್ಯನಾಥಾಖ್ಯಾತ ಸತ್ಯಾಭಿನವ ತೀರ್ಥ
ಮತ್ತಿಳೆಯೊಳಗಿರ್ಪ ಮನಕೆ ಸೂಚಿಸಿ ಬಪ್ಪ
ಕೃತ್ಯಮ್ ಸುಜ್ಞಾನ ಕೃಷ್ಣದ್ವೈಪಾಯನ
ಇತ್ಯಧಿಕ ಸರ್ವರ ಜನದಲಿ
ಅತ್ಯಧಿಕ ಮೀರ್ವರಾ ಪುರುಷಾರ್ಥ
ಉತ್ತಮ ಪದಲಿರುವರಾ ವಾರಂ ವಾರ ೨

ಶರಣೆಂದು ಆದ್ಯರ ಸಕಲ ಪ್ರಸಿದ್ಧರ
ಸಿರಿಪಾದ ಪ್ರಿಯರ ಶುಭ ವ್ಯಾಸರಾಯರ
ವರ ಹಯಗ್ರೀವ ಜಗವರಿತ ವಾದಿರಾಜ
ಪುರಂದರದಾಸ ಪುತ್ರರಾ ವರ ಮಧ್ವರಾ
ನೆರೆ ತಾಳ ಪಾಕರ ನುತ ಮತಿ ಕನಕರ
ಹರಿಭಕ್ತಿ ಉಲ್ಲಾಸರ ಬಂಡೆರಂಗ
ನರಿತಿಹ ನಿಜದಾಸರ ಮಹಿಪತಿ
ಗುರುಶರಣರ ತೋಷರ ವಾರಂ ವಾರ ೩

೫

ನಮೋ ನಮೋ ನಾ ಮಾಡುವೆ
ಬ್ರಹ್ಮ ಸುಖದಲಿ ನಲಿದಾಡುವೆ ಧ್ರುವ

ನಮೋ ಶ್ರೀ ಗಣನಾಯಕನಿಗೆ ನಮೋ ನಮೋ ಶ್ರೀ ಸರಸ್ವತಿಗೆ
ನಮೋ ಶ್ರೀ ಮಾತಾಪಿತರಿಗೆ ನಮೋ ನಮೋ ಸ್ವಹಿತರಿಗೆ
ನಮೋ ನಮೋ ೧

ನಮೋ ಶ್ರೀ ಗುರುವಿಗೆ ನಮೋ ನಮೋ ನಮೋ
ಸದ್ಗುರುವಿಗೆ ನಮೋ
ದೇವಾಧಿದೇವಗೆ ನಮೋ ನಮೋ ನಮೋ
ಶ್ರೀ ಸ್ವಾಮಿಗೆ ನಮೋ ನಮೋ ೨

ನಮೋ ಋಷಿಕುಲದೈವಕೆ ನಮೋ ನಮೋಸ್ತು
ಇಷ್ಟದೈವಕೆ ನಮೋ
ಸುವೇದ ಶಾಸ್ತ್ರಕೆ ನಮೋ ನಮೋ ಪುರಾಣ
ಮಹಿಮಗೆ ನಮೋ ನಮೋ ೩

ನಮೋ ಗಾಯತ್ರಿ ದೇವತೆಗೆ ನಮೋ ನಮೋ
ಸೂತ್ರಾಂತ್ರಿಗೆ ನಮೋ
ನಮೋ ಸುಸಂಪ್ರದಾಯಕೆ ನಮೋ ನಮೋ
ಸುಪಥಕೆ ನಮೋ ನಮೋ ೪

ನಮೋ ಬ್ರಹ್ಮ ವಿಷ್ಣು ರುದ್ರಗೆ ನಮೋ ನಮೋ
ಸುಸರ್ವ ದೈವಕೆ ನಮೋ
ನಮೋ ದಶಾವತಾರಕೆ ನಮೋ ನಮೋ ಅನೇಕ
ರೂಪಕೆ ನಮೋ ನಮೋ ೫

ನಮೋ ಶ್ರೀ ಮಹಾಲಕ್ಷ್ಮಿಗೆ ನಮೋ ನಮೋ ಸುಸರ್ವ
ಶಕ್ತಿಗೆ ನಮೋ
ನಮೋ ದೇವತೆಗಳಿಗೆ ನಮೋ ನಮೋ ಋಷಿ
ಮುನಿಗಳಿಗೆ ನಮೋ ನಮೋ ೬

ನಮೋ ಶುಕಾದಿ ಮುನಿಗಳಿಗೆ ನಮೋ ನಮೋ
ಸುಭಾಗವತರಿಗೆ ನಮೋ
ನಮೋ ಸಿದ್ಧ ಶರಣರಿಗೆ ನಮೋ ನಮೋ ಸದಭಕ್ತರಿಗೆ
ನಮೋ ನಮೋ ೭

ನಮೋ ಸುಜ್ಞಾನಿಗಳಿಗೆ ನಮೋ ನಮೋ
ಸುಮಹಿಮರಿಗೆ ನಮೋ
ನಮೋ ಸತ್ಕವಿಗಳಿಗೆ ನಮೋ ನಮೋ
ಸುತೀರ್ಥಕ್ಷೇತ್ರಕ್ಕೆ ನಮೋ ನಮೋ ೮

ನಮೋ ಸಕಲ ಆಶ್ರಮಕೆ ನಮೋ ನಮೋ
ಸುಪುಣ್ಯಶ್ಲೋಕರಿಗೆ ನಮೋ
ನಮೋ ಶ್ರೀ ಹರಿದಾಸರಿಗೆ ನಮೋ
ಸಜ್ಜನರಿಗೆ ನಮೋ ನಮೋ ೯

ನಮೋ ಬ್ರಹ್ಮಾಂಡ ನಾಯಕರಿಗೆ ನಮೋ ನಮೋ
ತ್ರೈಲೋಕ್ಯನಾಥಗೆ ನಮೋ
ನಮೋ ವಿಶ್ವಪಾಲಕಗೆ ನಮೋ ನಮೋ
ಸರ್ವೋತ್ತಮಗೆ ನಮೋ ನಮೋ ೧೦

ನಮೋ ತಾರಕ ದಿವ್ಯಮೂರ್ತಿಗೆ ನಮೋ ನಮೋ
ಸುಕರುಣಿಗೆ ನಮೋ
ನಮೋ ಮಹಿಪತಿಗೆ ವಸ್ತುಗತಿಗೆ ನಮೋ ನಮೋ
ಭಕ್ತವತ್ಸಲಗೆ ನಮೋ ೧೧

೬

ಗುಣಾತೀತ ಸದ್ಗುರು ಗಣನಾಥ
ಘನಸುಖದಾಯಕ ಸದೋದಿತ ಧ್ರುವ

ಅನುದಿನ ಮಾಡುವೆ ಮನೋಹರ
ಅಣುರೇಣುದೊಳು ನೀ ಸಾಕ್ಷಾತ್ಕಾರ
ಮುನಿಜನರಿಗಾಗುವಿ ಸಹಕಾರ
ನೀನಹುದೋಭಕ್ತರ ವಿಘ್ನಹರ ೧

ನಿಮ್ಮ ಭೋಧಗುಣವೆ ಸರಸ್ವತಿ
ಸಮ್ಯಜ್ಞಾನ ಬೀರುವ ನಿಜಸ್ಥಿತಿ
ಬ್ರಹ್ಮಾದಿಗಳೊಂದಿತ ನಿಜಖ್ಯಾತಿ
ಬ್ರಹ್ಮಾನಂದ ದೋರುವ ಫಲಶ್ರುತಿ ೨

ಬೇಡಿಕೊಂಬೆ ನಿಮಗೆ ಅನುದಿನ
ಕುಡುವವರಿಗೆ ನೀ ನಿಧಾನ
ಮೂಢ ಮಹಿಪತಿ ಒಡೆಯ ನೀ ಪೂರ್ಣ
ಮಾಡುತಿಹ ನಿತ್ಯವು ನಾ ನಮನ ೩

೭

ಶರಣು ಶರಣು ಶರಣು ದೇವಾಧಿಗಳೊಂದಿತ
ನಹುದು ಸ್ವಾಮಿ ಗಣನಾಥ ಶರಣು ಧ್ರುವ

ಅಖಿಳ ಭವನದೊಳು ಪೂಜಿತ
ಭಕುತ ಜನಕೆ ನೀ ಸಾಕ್ಷಾತ
ಸಕಲ ವಿದ್ಯಾವರದಾತ
ಶಕುತನಹುದಯ್ಯ ಪ್ರಖ್ಯಾತ ೧

ಶುದ್ಧ ಬುದ್ಧರ ಸಹಕಾರ
ಬುದ್ಧಿನೀವ ಘನ ಉದಾರ
ರಿದ್ಧಿ ಗ್ಯಾಗೀಹ್ಯ ನೀ ಆಧಾರ
ಸಿದ್ಧಿದಾಯಕ ವಿಘ್ನಹರ ೨

ಜನಕೆ ಮಾಡುವೆ ದೋಷನಾಶ
ಅನುದಿನವೆ ಮತಿ ಪ್ರಕಾಶ
ದೀನ ಮಹಿಪತಿಯ ಮನೋಭಾವಪೂರಿತ
ಗಣಾಧೀಶ ಶರಣು ಶರಣು ೩

## ೮

ಜಯ ಜಯ ಸ್ವರಸತಿ ಜಯವರ ಪೂರಣಮತಿ
ತ್ರಯಲೋಕ್ಯದಲಿ ಖ್ಯಾತಿ ಜಯ ಸುಕೀರ್ತಿ ಧ್ರುವ

ವಿದ್ಯಾವರದಾಯಿನಿ ಸಿದ್ಧಿಗೆ ಶಿಖಾಮಣಿ
ಬುದ್ಧಿ ಪ್ರಕಾಶಿನಿ ಸದ್ಭೂಷಿಣಿ ೧

ಕರಕಮಲದಲಿ ವೀಣೆ ಸುರಸ ಅಮೃತವಾಣಿ
ವರವಿದ್ಯದಲಿ ದಾನಿ ಸುಪ್ರವೀಣೆ ೨

ಪ್ರಸನ್ನವದನಿ ವಿಶ್ವದಲಿ ನೀ ಪೂರ್ಣೆ
ಹಂಸವಾಹಿನಿ ಪೂರ್ಣೆ ಸ್ವಸಿದ್ಧಿಣಿ ೩

ಸದಾ ಸದ್ಗುರುಸ್ತುತಿ ಒದುಗುವ್ಹಾಂಗ ಸ್ಫೂರ್ತಿ
ಇದೇ ಮಹಿಪತಿ ಕುರ್ತಿ ಬೋಧಿಸುವ ಮತಿ ೪

೯

ಗುರು ಮಧ್ವಮುನಿರನ್ನ ಮೂರುಪರಿಯ ದೋರಿದೆ ನಿನ್ನ
ಹರಭಕ್ತಿಯಲಿ ಅವಿಚ್ಛಿನ್ನ ಸರಿಯಾರು ಧರೆಯೊಳು ನಿನ್ನ
ಸ್ಮರಣೆಯಲಿಹೆ ರಾಮನ ಪರಮಪಾವನ್ನ ೧

ಅತಿಬಾಹು ಪರಾಕ್ರಮ ಕ್ಷಿತಿಯೊಳು ನಿನ್ನದೇ ನೇಮ
ಪ್ರಥಮಲ್ಯಾದೆ ಹನುಮ ದ್ವಿತಿಯಲ್ಯಾದೆ ಭೀಮ
ತೃತಿಯಲ್ಲಿ ಪೂರ್ಣ ಪ್ರಜ್ಞನೆನಿಸಿದೆ ನಿಸ್ಸೀಮ ೨

ಸಾಹ್ಯಕ್ಕೆ ಕಾರಣ ಮಹಾದೈತ್ಯರ ಮರ್ದನ
ಶ್ರೀ ಹರಿ ಸಾನ್ನಿಧ್ಯ ಪೂರ್ಣ ಇಪ ಸಕಲ ನಿಪುಣ
ಮಹಿಪತಿ ಮುಖ್ಯಪ್ರಾಣ ಸ್ವಹಿತ ಸಾಧನ ೩

೧೦

ಕಾಯಬೇಕೆನ್ನ ಶ್ರೀ ದೇವಾಧಿದೇವಿಣಿ
ದಯವುಳ್ಳಸ್ವಾಮಿ ಸಹಕಾರಿ ನಾರಾಯಣಿ ಧ್ರುವ

ಕರುಣಾನಂದಗುಣ ಶರಣ ಸಂರಕ್ಷಣಿ
ದಾರಿದ್ರ್ಯ ಭಂಜಿನಿ ದುರಿತ ವಿಧ್ವಂಸಿನಿ ೧

ಘನಸುಖದಾಯಿಣಿ ದೀನ ಉದ್ಧಾರಣಿ
ಮುನಿಜನ ಶಿಖಾಮಣಿ ನೀನೆ ಶ್ರೀ ಲಕ್ಷುಮಿಣಿ ೨

ಬಾಹ್ಯಂತ್ರ ವ್ಯಾಪಿಣಿ ಮಹಾಗುರು ಸ್ವರೂಪಿಣಿ
ಸಾಹ್ಯದಲಿ ನೀ ಪೂರ್ಣ ಮಹಿಪತಿಯ ಸ್ವಾಮಿಣಿ ೩

## ೧೧

ನೀನೆ ಪರಮ ಪಾವನಿ ನಿರಂಜನಿ
ನೀನೆ ಪರಮ ಪಾವನಿ ಧ್ರುವ

ಆದಿನಾರಾಯಣಿ ಸಾಧುಜನವಂದಿನಿ
ಸದಾನಂದರೂಪಿಣಿ ಸದ್ಗತಿ ಸುಖದಾಯಿಣಿ ೧

ಲಕ್ಷುಮಿ ರೂಪಿಣಿ ಸಾಕ್ಷಾತ್ಕಾರಿಣಿ
ರಕ್ಷರಕ್ಷಾತ್ಮಿಣಿ ಅಕ್ಷಯಪದದಾಯಿಣಿ ೨

ಅನಾಥರಕ್ಷಿಣಿ ದೀನೋದ್ಧಾರಿನೀ
ಅನಂತಾನಂತಗುಣಿ ಮುನಿಜನ ಭೂಷಣಿ ೩

ದಾರಿದ್ರ್ಯಭಂಜನಿ ದುರಿತವಿಧ್ವಂಸಿನಿ
ಪರಮಸಂಜೀವಿನಿ ಸುರಮುನಿರಂಜನಿ ೪

ಸ್ವಾಮಿ ಶ್ರೀ ಗುರುವಿಣೆ ಬ್ರಹ್ಮಾನಂದ ರೂಪಿಣಿ
ಮಹಿಪತಿಕುಲಸ್ವಾಮಿಣಿ ನೀನೆ ಪರಮಪಾವನಿ ೫

## ೧೨

ದೇವಾಧಿದೇವ ಶ್ರೀದೇವ ನಿರಂಜನ ಈಶ ಬಾರೊ
ಕಾವ ಕರುಣ ಭವಭಂಜನ ಗುರು ಆತ್ಮ ಹಂಸ ಬಾರೊ ಧ್ರುವ

ಅಗಣಿತ ಗುಣ ಅಗಾಧ ಅಪಾರಾಗಮ್ಯ ಬಾರೊ
ನಿಗಮಗೋಚರ ನಿತ್ಯ ನಿರ್ಗುಣಾನಂದನುಪಮ್ಯ ಬಾರೊ
ಯೋಗಿ ಜನರ ಹೃದಯ ಮುನಿಮನೋರಮ್ಯ ಬಾರೊ
ಜಗದೊಳು ಭಕ್ತಜನರಿಗೆ ಪೂರಿತಕಾಮ್ಯ ಬಾರೊ ೧

ಝುಗಿಝುಗಿಸುವ ಜಗಜ್ಯೋತಿ ಜಗನ್ಮೋಹನ ಬಾರೊ
ಧಗಿ ಧಗಿಸುವ ತೇಜ ಹೊಳೆವ ಪುತ್ಥಳಿಯ ಚಿನ್ನ ಬಾರೊ
ಮಘ ಮಘ ಮಿಂಚುವ ಮಗುಟಮಣಿ ಗುಣರನ್ನ ಬಾರೊ
ಬಗೆಬಗೆಯಿಂದ ಸದ್ಗೈಸುವ ಪತಿತಪಾವನ್ನ ಬಾರೊ ೨

ಋಷಿ ಮುನಿವಂದಿತ ಸಾಧು ಜನ ಹೃದಯ ಬಾರೊ
ವಾಸವಾಗಿ ಸರ್ವ ಅಂತ್ರಯಾಮಿಲಿಹ ಗುಹ್ಯ ಬಾರೊ
ಭಾಸ್ಕರ ಕೋಟಿ ಸುತೇಜ ಪ್ರಕಾಶ ನಮ್ಮಯ್ಯ ಬಾರೊ
ದಾಸ ಮಹಿಪತಿಯ ರಕ್ಷಿಸುವ ಪ್ರಾಣ ಪ್ರಿಯ ಬಾರೊ ೩

## ೧೩

ದೇವಾಧಿದೇವ ಶ್ರೀದೇವ ಶಿಖಾಮಣಿ ಬಾರೋ ಬಾರೊ
ಪಾವನ ಗೈಸುವ ಪರಮ ದಯಾಕರುಣ ಬಾರೊ ಬಾರೊ ಧ್ರುವ

ಮಂದರಧರ ಮಾಧವ ಶ್ರೀಹರಿ ಮುಕುಂದ ಬಾರೊ
ಸುಂದರ ವದನನೆ ನಂದ ಯಶೋದೆಯ ಕಂದ ಬಾರೊ
ಕಂದರ್ಪ ಕೋಟಿ ಲಾವಣ್ಯದಲೊಪ್ಪುವಾನಂದ ಬಾರೊ
ವಂದಿತ ತ್ರೈಲೋಕ್ಯ ಇಂದಿರಾಪತಿ ದೀನಬಂಧು ಬಾರೊ ೧

ಗರುಡವಾಹನ ಗೋವಿಂದ ಗೋಪಾಲ ಶ್ರೀಕೃಷ್ಣ ಬಾರೊ
ಸರಸಿಜೋದ್ಭವನುತ ಸಿರಿಯ ಲೋಲನೆ ಪರಿಪೂರ್ಣ ಬಾರೊ
ಶರಣರಕ್ಷಕ ಸದಾ ಸಾಮಜವರದ ಸದ್ಗುಣ ಬಾರೊ
ವರ ಶಿರೋಮಣಿ ಮುನಿಜನರ ಸ್ವಹಿತ ಸುಭೂಷಣ ಬಾರೊ ೨

ಅನಾಥರನುಕೂಲಾಗುವ ಘನದಾಗರ ಬಾರೊ
ಅನುಭವಿಗಳ ಅನುಭವದ ಸುಖಸಾಗರ ಬಾರೊ
ಭಾನುಕೋಟಿತೇಜ ಭಕ್ತಜನ ಸಹಕಾರ ಬಾರೊ
ದೀನಮಹಿಪತಿ ಸ್ವಾಮಿ ನೀನೆ ಎನ್ನ ಮನೋಹರ ಬಾರೊ ೩

## ೧೪

ಬಾರಯ್ಯ ಗುರುದೇವರಾಯ ಶ್ರೀ
ಹರಿಯೆ ನಮ್ಮಯ್ಯ ಗುರು ಭಕ್ತಜನ ಪ್ರಿಯ ಧ್ರುವ

ನೀರೊಳು ಪೊಕ್ಕು ನಿಗಮನ ತಂದಿ ಬಾರಯ್ಯ
ಧರಿಯ ಬೆನ್ನಿಲಿ ಪೊತ್ತು ನಿಂದಿ ನೀ ಬಾರಯ್ಯ
ಧಾರುಣಿಯ ಗೆದ್ದು ಹಿರಣ್ಯಕನ ಕೊಂದಿ ಬಾರಯ್ಯ
ತರಳಗೆ ಒಲಿದ ಬಾರಯ್ಯ ಶ್ರೀ ಹರಿ
ಎಂದೆನಯ್ಯ ಗುರುತಂದೆಬಾರಯ್ಯ ೧

ಮೂರು ಪಾದವನಳಿದುಕೊಂಡಿ ನೀ ಬಾರಯ್ಯ
ಹರಿಗಡಿದು ಸಾಸಾರ್ಜುನನ ಕೊಂದಿ ಬಾರಯ್ಯ
ಶಿರಗಳನೆ ಚೆಂಡಾಡಿ
ಸಿರಿ ತಂದಿ ಬಾರಯ್ಯ ಗಿರಿಯೆನೆತ್ತಿ ನಿಂದಿ ಬಾರಯ್ಯ ಶ್ರೀ

ಹರಿ ಮುಕುಂದಯ್ಯ ಗೋವಿಂದ ಬಾರಯ್ಯ ೨
ಬರಿಯ ಬೆತ್ತಲೆ ಆಗಿ ವ್ರತವಳಿದಿ ಬಾರಯ್ಯ
ಏರಿ ಕುದುರಿಯನೆ ರಾವುತನಾದಿ ಬಾರಯ್ಯ ಪರಮಭಕ್ತರನು
ಹೊರಿಯಲಿ ಬಂದಿ ಬಾರಯ್ಯ ಪರಿಪರಿ ರೂಪವಾದಯ್ಯ
ತರಳ ಮಹಿಪತಿ ಪ್ರಾಣದೊಡೆಯ ಬಾರಯ್ಯ ೩

## ೧೫

ಬಾರಯ್ಯ ಬಾರಯ್ಯ ಬಾರೊ ಶ್ರೀ ಹರಿಯೆ
ಬಾರಯ್ಯ ಗುರು ಶಿರೋಮಣಿಯೆ ೧

ಮಚ್ಛನಹುದು ಗುರು ಸಚ್ಚಿದಾನಂದನೆ
ಅಚ್ಯುತಾನಂತ ನೀ ಬಾರಯ್ಯ ೨

ಕೂರ್ಮನಹುದು ಗುರು ಧರ್ಮ ಸಹಕಾರನೆ
ನಿರ್ಮಳಾನಂದ ನೀ ಬಾರಯ್ಯ ೩

ವರಾಹನಹುದು ಗುರು ವಾರಿಜನೇತ್ರನೆ
ವರಮುನಿಹೃದಯ ನೀ ಬಾರಯ್ಯ ೪

ನರಸಿಂಹನಹುದು ಗುರು ನರಹರಿಯೆ
ನಾರಾಯಣನೆ ನೀನು ಬಾರಯ್ಯ ೫

ವಾಮನಹುದು ನೀ ಬ್ರಾಹ್ಮಣೋತ್ತಮನೆ
ಬ್ರಹ್ಮಾನಂದ ಶ್ರೀ ಗುರು ಬಾರಯ್ಯ ೬

ಭಾರ್ಗವರಾಮನಹುದು ಪರಾಕ್ರಮನೆ
ಪರಮಪುರಷ ಗುರು ಬಾರಯ್ಯ ೭

ರಾಮನಹುದು ಗುರು ಕಾಮ ನೀ ಪೂರಿತ
ಸಾಮಗಾಯನ ಪ್ರಿಯ ಬಾರಯ್ಯ ೮

ಕೃಷ್ಣನಹುದೊ ಗುರುವಿಷ್ಣು ಪರಮಾತ್ಮನೆ
ದೃಷ್ಟ ಮೂರುತಿ ನೀನು ಬಾರಯ್ಯ ೯

ಬೌದ್ಧನಹುದು ಗುರು ವೇದಾಂತಮಹಿಮನೆ
ಸಿದ್ಧಶಿಖಾಮಣಿ ಬಾರಯ್ಯ ೧೦

ಕಲಿಕ್ಯವತಾರನಹುದು ಮೂಢನಾತ್ಮನೆ
ಬಾಲಮುಕಂದ ನೀ ಬಾರಯ್ಯ ೧೧

## ೧೬

ಬಾರಯ್ಯ ಭಕ್ತವತ್ಸಲ ಬಾರೋ ಶ್ರೀ
ಹರಿ ಗೋಪಾಲ ಸಿರಿಸುಖಲೋಲ ಧ್ರುವ

ಸಾಮಗಾಯನ ಪ್ರಿಯ ಸಮಸ್ತಲೋಕದ ಶ್ರೇಯ
ನೇಮಿಸಿ ಬೀರೊ ದಯ ಸ್ವಾಮಿ ನಮ್ಮಯ್ಯ ೧

ಅನಾಥರನುಕೂಲ ಮುನಿಜನ ಪ್ರತಿಪಾಲ
ಘನಸುಖದ ಕಲ್ಲೋಳ ದೀನದಯಾಳ ೨

ಮನಮಂದಿರದೊಳು ಅನುವಾಗಿ ಬಂದು ಬಾಳು
ದೀನಮಹಿಪತಿಗಾಳು ಘನವಾಗಿ ಕೇಳು ೩

## ೧೭

ಬಾರಯ್ಯ ಭಕ್ತವತ್ಸಲ ಶ್ರೀ
ಗುರು ಮುದ್ದುಕೃಷ್ಣ ಮದನಗೋಪಾಲ ಧ್ರುವ

ಯಾದವಕುಲತಿಲಕ ಶ್ರೀದೇವದೇವ
ಸಾಧುಜನರ ಪಾಲಕ
ಉದ್ಧವ ಪ್ರಾಣಪೋಷಕ
ಆದಿಕೇಶವ ಸದಮಲ ಸುಖದಾಯಕ ೧

ಇಂದೀವರದಳನಯನ ನಂದಕುಮಾರ
ಸುಂದರ ಶುಭವದನ
ಮಾಧವ ಮಧುಸೂದನ
ಮಂದರಧರ ವೃಂದ ಗೋಕುಲೋದ್ಧರಣ ೨

ಮುರಹರ ಸಂಕರುಷಣ ಉರಗಶಯನ
ತೋರಯ್ಯ ನಿಮ್ಮ ಚರಣ
ಬಾರಯ್ಯ ನಾರಾಯಣ
ಗರುಡವಾಹನ ಹೊರೆಯಾ ಮಹಿಪತಿ ಪ್ರಾಣ ೩

## ೧೮

ಬಾರೋ ಬಾರೋ ಗುರುರಾಯನೆ ಧ್ರುವ

ಹೊಳೆಯನೀಸಿ ಇಳದಿ ಬಾರೊ
ಇಳಿಯ ಪೊತ್ತು ಬಳಿದಿ ಬಾರೊ

ಇಳಿಯಗೆಲಿದು ಸೀಳಿ ಕಂಭದೊಳು
ಹೊಳದಿ ಬಾರೊ ನೀನು ೧

ಅಳೆದು ಭೂಮಿ ಬಳದಿ ಬಾರೊ
ಇಳಹಿ ತಳಿಯ ತಿಳದಿ ಬಾರೊ
ಅಳಿದು ದೈತ್ಯಬಲವ ಮುರಿದು
ಕೊಳಲನೂದಿ ಬಳಲಿ ಬಾರೊ ೨

ಸುಳ್ಳ ವ್ರತನಳಿದಿ ಬಾರೊ
ಸುಳುಹಿ ತೇಜ ಹೊಳಿದಿ ಬಾರೊ
ತರಲ ಮಹಿಪತಿಯ
ಹೊರೆದು ಸಲಹುವ ಸ್ವಾಮಿ ಬಾರೊ ೩

## ೧೯

ಬಾರೋ ಬಾರೋ ರಂಗಾ ಬಾರೋ ಬಾರೋ ಪ

ಮಾವನ ಮರ್ದನ ಬಾರೋ ಮಾವನ ಮಾವನೆ ಬಾರೋ ।
ಮಾವನೋಳು ಕಾದಿ ಮಾವನಿತ್ತ ಮಣಿಯ ನೀನು ೧

ಮಗನ ಕಟಾಹಲಿಂದ ಮಗಳ ಪಡೆದನೆ ಬಾರೋ ।
ಮಗನ ಅತ್ಮನಲಿ ಬಂದ ಮಗನ ಮಾವನ ತರಿದೆ ೨

ಮೈದುನನಾ ಧರಿಸಿದನಾ ಮೈದುನಾರಿಯಣ್ಣ ಬಾರೋ ।
ಮೈದುನ ಬೋವಾ ಮಹಿಪತಿ ಪದ ಭಜಿಪರೊಡಿಯಾ ಕೃಷ್ಣ ೩

## ೨೦

ದೇವ ಬಂದ ದೇವಕಿ ಕಂದ ಧ್ರುವ

ದೇವ ಬಂದ ದೇವತಿಗಳ ಪ್ರಿಯ
ಭುವನತ್ರಯಕಾಗಿಹ್ಯಾಶ್ರಯ ೧

ಮಾಮನೋಹರ ಮಾಧವ ಮುರಾರಿ
ಸಾಮಜ ವರದ ಸದಾ ಸಹಕಾರಿ ೨

ಉರಗ ಶಯನ ಹರಿಕರುಣಾನಂದ
ಗರಡುವಾಹನ ಗೋಪಾಲ ಗೋವಿಂದ ೩

ಸರ್ವಾನಂದ ಶ್ರೀ ಹರಿ ಸಿರಿಲೋಲ
ಸಾರ್ವಭೌಮ ಸದಾ ಕೃಪಾಲ ೪

ಲೇಸಿಲೆ ಹೊರೆವ ಮಹಿಪತಿ ಪ್ರಾಣೇಶ
ಭಾಸ್ಕರ ಕೋಟಿ ಸುತೇಜ ಪ್ರಕಾಶ ೫

## ೨೧

ಅಮ್ಮಾ ಬಾ ನಮ್ಮಮ್ಮನೆ ಅಮ್ಮೆ ನೀಡಮ್ಮನೆ
ಬೊಮ್ಮನಾ ಪಡೆದ ಶ್ರೀ ಹರಿ ಪರಬ್ರಹ್ಮನೆ ಧ್ರುವ

ಬೇಡುವೆ ನಿಮ್ಮನೆ ಕಾಡುವೆ ಸುಮ್ಮನೆ
ಓಡ್ಯಾಡಿ ಬಂದು ಅಂಡಲಿವೆ ನಾ ತಮ್ಮನೆ ೧

ಬಯಸಿ ಬಂದೊಡೆ ನಾ ಕಾಯಬೇಕೆನ್ನನಾ
ತಾಯಿ ತಂದ್ಯೊಬ್ಬಳೆ ನೀನೆ ಸನಾತನಾ ೨

ಉಣಿಸೆ ನಾಮಮೃತ ದಣಿಸೆ ಮನೋರಥಾ
ದೀನಮಹಿಪತಿ ಜೀವ ಪ್ರಾಣಕ ಸನಾಥಾ ೩

## ೨೨

ಅಮ್ಮಬಾರೆ ನಮ್ಮಮ್ಮನೆ ನೀನಮ್ಮ
ಅಮ್ಮಬಾರೆ ನಮ್ಮಮ್ಮನೆ ಧ್ರುವ

ಅಮ್ಮಬಾರೆ ನಮ್ಮಮ್ಮನೆ ನೀ
ನಮ್ಮ ಬೊಮ್ಮನ ಪಡೆದಮ್ಮ ನೀ ಪರ

ಬ್ರಹ್ಮ ನೀನಹುದಮ್ಮ ನೀನಮ್ಮ
ಅಮ್ಮಬಾರೆ ನಮ್ಮಮ್ಮನೆ ೧

ಉಮ್ಮ ಸವಿದೊಮ್ಮೆ ಅಮ್ಮೆ ನಾ ನಿನ್ನ
ಸುಮ್ಮನಿರುವೆ ನಾ ಒಮ್ಮನದಲೆಮ್ಮೆ
ಇಮ್ಮನಡಿಬೇಡೆ ಅಮ್ಮೆ ನಾನ ನಿಮ್ಮ
ಒಮ್ಮೆ ಅಮ್ಮಿಯಾಲಮೃತ್ಯೆರಿ ಅಮ್ಮಾ ೨

ಒಮ್ಮೆ ದಯವೆಂಬ ಅಮ್ಮನುಣಿಸಮ್ಮಾ
ನಮ್ಮ ಕರುಣದಾ ಅಮ್ಮನುಣಿಸಮ್ಮಾ
ಒಮ್ಮೊಮ್ಮುಣಿಸ ನಮ್ಮಮ್ಮ ನೀನಮ್ಮಾ
ರಮ್ಮಿಸಿ ಮಹಿಪತಿ ಬಾಲಕಗ ನಿಮ್ಮ ೩

## ೨೩

ಅರಿತು ಕೊಳ್ಳಿರೊ ಬ್ಯಾಗ ಹರಿಯ ನಾಮಮೃತ
ದೊರಕುವದಲ್ಲಿದು ನೋಡಿ ಸರ್ಕನೆ ಸರ್ವರಿಗೆಲ್ಲಾ ಧ್ರುವ

ಗುರುಕರುಣ ಕೃಪೆಯಿಂದ ಪರಮ ದಿವ್ಯಾಮೃತವು
ಸುರಿಸುರಿದು ಚಪ್ಪರಿಸು ಸೂರ‍್ಯಾಡಿ ಸಾರಸವ ೧

ಅನುದಿನ ಸೇವಿಸುವ ಅನುಭವಿಗಳೂಟ
ಏನೆಂದು ಸುರಲಿ ನಾ ಆನಂದೋಬ್ರಹ್ಮವಾ ೨

ಎಂದಿಗೆ ಬಾಹುದು ನೋಡಿ ಸಂದಿಸಿ ಮಾನವ ಜನ್ಮ
ಚಂದ ಮಾಡಿಕೊಳ್ಳಿರೊ ಬಂದ ಕೈಯಲಿ ಬ್ಯಾಗ ೩

ಆಲಸ್ಯ ಮಾಡಬ್ಯಾಡಿ ವಾಲ್ಗೈಸಿಕೊಳ್ಳಲಿಕ್ಕೆ
ಸುಲಲಿತವಾಗಿಹುದು ತಿಳಿದುಕೊಂಬವರಿಗೆ ೪

ಇರಳ್ಹಗಲ ಪೂರ್ಣ ಸುರವುತಿಹ ಅಮೃತ
ತರಳ ಮಹಿಪತಿ ಪ್ರಾಣ ದೊರೆವ ಸಂಜೀವನ ೫

## ೨೪

ಅರಿಕುಕೊಳ್ಳಿರೈಯ್ಯಾ ನೀವು ಹರಿಯ ನಾಮಾವೃತ
ಗುರ್ತು ಮಾಡಿಕೊಡುವ ಪೂರ್ಣ ಸದ್ಗುರು ಸಮರ್ಥ ಧ್ರುವ

ಒಳ್ಳೆಒಳ್ಳೆವರು ಬಂದು ಕೇಳಿರೊ ನೀವಿನ್ನು
ತಿಳದುಕೊಳ್ಳಿ ಇದಕೆ ಬೀಳುವದಿಲ್ಲಾ ಹಣಹೊನ್ನು
ಉಳ್ಳ ಬುದ್ಧಿಯಿಂದ ನೀವು ತೆರೆದುನೋಡಿ ಕಣ್ಣು
ಕೊಳಲರಿಯದವನ ಬಾಯಾಗ ಬೀಳುದು ಮಣ್ಣು ೧

ಬ್ರಹ್ಮಸುಖ ಇದೇ ಇದೇ ನೋಡಿರೋ ಸಾಕ್ಷಾತ
ಸಮ್ಯಕ್ ಜ್ಞಾನ ಪ್ಯಾಟಿಯೊಳು ತುಂಬಿ ತುಳಕುತ್ತ
ಒಮ್ಮನ ಮಾಡಿಕೊಂಡು ಬಂದು ಕೊಳ್ಯಮೃತ
ನೇಮದಿಂದ ಕೊಳ್ಳಲಿಕ್ಕೆ ದೋರುದು ಸ್ವಹಿತ ೨

ಇಹಪರ ನಾರ್ಥಕಿದೆ ಕೇಳಿರೋ ನೀವೆಲ್ಲ
ದೇಹ ಅಭಿಮಾನಿಗಿದು ಸಾಧ್ಯವಾಗುವುದಿಲ್ಲ
ಸೋಹ್ಯವರಿತು ಸೂರೆಗೊಂಡು ಮಹಿಮ ತಾನೆ ಬಲ್ಲ
ಗುಹ್ಯವಾಕ್ಯ ತಿಳಿದುನೋಡಿ ಮಹಿಪತಿ ಸೊಲ್ಲಾ ೩

## ೨೫

ಅಲ್ಲಿಗಲ್ಲಿಗೆ ಪುಲ್ಲನಾಭನಿಹ್ಯ ನೋಡಿ ಎಲ್ಲಿಹ
ಮಾತೆಂದೆನಬ್ಯಾಡಿ ಧ್ರುವ

ಎಲ್ಲಿ ನೋಡಿದರೆ ತಾ ಅಲ್ಲಿಗಲ್ಲಿಗಿಹ್ಯ
ಎಲ್ಲ ಕಡೆಯಲ್ಲೇಕೋಮಯವೊ
ಸುಲ್ಲಭವಾಗಿಹ್ಯಬಲ್ಲ ಜ್ಞಾನಿಗೆ ಭಾಸುತಿಹ್ಯ
ಫುಲ್ಲಲೋಚನ ಪ್ರಾಣದೊಲ್ಲಭನು ೧

ಎತ್ತ ನೋಡಿದರತ್ತ ಸುತ್ತಸುತ್ತಲಿಹ್ಯ
ನಿತ್ಯವಾಗಿಹ್ಯ ಹೃತ್ಕಮಲದಲಿ
ತುತ್ತಾಯಿತ ತಾ ಮಾಡಿ ನಿತ್ಯಸಲಹುವ
ಹತ್ತಿಲೆ ಹೊಳೆಯುತ ಚಿತ್ತದಲಿ ೨

ಹಿಂದೆನೋಡಿದಿರಿಹ ಮುಂದೇನೋಡಿದಿರಿಹ್ಯ
ಸಂಧಿಸಿಹನು ಅಂತರಾತ್ಮದಲಿ
ತಂದೆ ತಾಯಿಯು ಬಳಗಾಗಿಹ್ಯ ತಾನೆ
ಎಂದಿಗೆ ಅಗಲದೆ ಅನುದಿನದಲಿ ೩

ಜನವನದೊಳಗಿಹ್ಯ ಜನಾರ್ಧನ ತಾನು
ತನುಮನದೊಳು ಥಳಥಳಸುತಲಿ
ಅನುಮಾನವಿಲ್ಲದೆ ಅನಿಮಿಷದಲಿ ನೋಡಿ
ಅಣುರೇಣುದಲಿ ಪರಿಪೂರ್ಣನು ೪

ಸಾರಿಚಲ್ದೆದ ಪರಬ್ರಹ್ಮಸ್ವರೂಪವಿದು
ಸೂರ್ಯಾಡಬಹುದು ಸುಜ್ಞಾನಿಗಳು
ತೋರದು ಎಂದಿಗೆ ಗುರುಕೃಪೆಯಿಲ್ಲದೆ
ತರಳಮಹಿಪತಿ ವಸ್ತುಮಯವಿದು ೫

## ೨೬

ಅಲ್ಲೆ ನೋಡಿದರೀಹ್ಯ ಇಲ್ಲೆ ನೋಡಿದರೀಹ್ಯ
ಎಲ್ಲಾ ಕಡೆಯಲ್ಲೇಕೋಮಯವೋ ೧

ಸುಲ್ಲಭವಾಗಿ ನಮ್ಮ ಫುಲ್ಲಲೋಚನ ಕೃಷ್ಣ
ಬಲ್ಲ ಮಹಿಮರಿಗೆ ಭಾಸುವನು ೨

ಭೇದಿಸಿ ನೋಡಿರಯ್ಯ ಸಾಧು ಜನರೆಲ್ಲ
ಮೇದಿನಿಯೊಳು ಘನತುಂಬಿಹುದು ೩

ಕಣ್ಣಾರೆ ಕಂಡೆವಯ್ಯ ಪುಣ್ಯಚರಣಮಹಿಮೆ
ಸಣ್ಣ ದೊಡ್ಡದರೊಳು ಸಾಕ್ಷಾತವೊ ೪

ನಂಬಿನಡಿಯಲಿಕೆ ಅಂಬುಜಾಕ್ಷನ ಪಾದ
ಗುಂಭಗುರುತವಾಗಿದೋರುವದು ೫

ಗುರುಕೃಪೆಯಿಂದ ನೋಡಿ ಹರುಷವಾಯಿತು ಜೀವ
ಬೆರತುಕೂಡಿತು ಸಮರಸವೊ ೬

ಬೆರೆದು ಕೊಡುವದು ಹರಿಯ ಕಟಾಕ್ಷವಿದು
ಮರುಳ ಮಂಕಗಳಿದು ಅರಿಯಾವೊ ೭

ವದಗಿ ಬಂದತಿದರಿಟ್ಟು ಸದಮಲಬ್ರಹ್ಮಸುಖಾ
ಮೊದಲಿನ ಪುಣ್ಯ ಪೂರ್ವಾರ್ಜಿತವೊ ೮

ಧನ್ಯವಾಯಿತು ಮೂಢ ಮಹಿಪತಿ ಪ್ರಾಣಜೀವ
ಮನವು ಆಯಿತು ಉನ್ಮನವೊ ೯

## ೨೭

ಆಲದೆಲಿಯ ಮ್ಯಾಲ ಮಲಗ್ಯಂಗುಟ ಚಪ್ಪರಿವನು ನೀನಾರೈ
ಮೂಲರೂಪದ ನಿಜದೋರದೆ ಬಾಲಕನಾಗಿಹ ನೀನಾರೈ ಧ್ರುವ

ಚಲುವ ಕಂಗಳ ನೋಡದಲ್ಹೊಳವುತ ಜಲದೊಳಗಾಡುವನಾರೈ
ಕಾಲುಡಿಗಿಸಿ ಬೆನ್ನಿಲೆ ಬಲು ಕಠಿಣವ ತಾಳಿದವ ನಿನಾರೈ ೧

ಕೋರ್ಹಲ್ಲಿಲಿ ಬೇರನೆ ಅಗಳ್ಯಾಡುತ ದೋರುವ ನೀನಾರೈ
ನರಮೃಗರೂಪದಿ ತರಳಗೊಲಿದು ಭರದಲಿ ಬಂದವನಾರೈ ೨

ಒಪ್ಪಿಲಿ ಮೂರುಪಾದ ಭೂಮಿಯೊಪ್ಪಿಸಿಕೊಂಡವನಾರೈ
ಚಪ್ಪಗೊಡಲಿ ಕೈಯಲಿ ಪಿಡಕೊಂಡು ಇಪ್ಪವ ನೀನಾರೈ ೩

ಬಳ್ಳಿಹಿಡಿದು ಕಲ್ಲನೆ ಉದ್ಧರಿಸಿದ ಮಲ್ಲನು ನೀನಾರ್ರೈ
ಗೊಲ್ಲತೆಯರ ಮೋಹಿನಿ ಎಳಿದಾಡುವ ಚಲುವನು ನೀನಾರ್ರೈ ೪

ಒದಗಿ ತ್ರಿಪುರದಲಿ ಹಳಿದು ನಾರೇರ ವ್ರತ
ಚದುರನು ನೀನಾರ್ರೈ
ಕುದುರೆಯನೇರಿ ಹದನದಿ ತಿರವ್ಯಾಡುವ ರಾವುತನಾರ್ರೈ ೫
ಕುರುಹುದೋರದೆ ನರನಾರಿಯರ ರೂಪದಲ್ಯಾಡಿದವನಾರ್ರೈ
ಮರಳ ಮಾಡ್ಯಸುರರ ಸುರರಿಗೆ ಅಮೃತವ
ಬಡಿಸಿದವ ನೀನಾರ್ರೈ ೬

ಅಗಣಿತ ಗುಣದಲಿ ಬಗೆ ಬಗೆ ಆಡುವ ಸುಗುಣ ನೀನಾರ್ರೈ
ಝುಗಝುಗಿಸುವ ಜಗನ್ಮನೋಹರನಾಗ್ಯಾಡುವ ನೀನಾರ್ರೈ ೭

ಖೂನ ಕುರುಹದೋರಿದ ಭಾನುಕೋಟಿ ತೇಜನಹುದೋ ಬಾರ್ರೈ
ದೀನ ಮಹಿಪತಿ ಸನಾಥಮಾಡಿದ ದೀನೋದ್ಧಾರಹುದಹುದ್ರೈ ೮

## ೨೮

ಆವಧನ್ಯರೋ ಸುಖಿಸುವರು ಗೋಕುಲದವರು ।
ಗೋವಿಂದನೊಳು ಕ್ರೀಡಿಸುವರು ಗೋಗೋವಳರು ಧ್ರು

ಭಾವಿಸೆ ಮುಖದಲ್ಲಿದಾವ ಸಾರಾಯ ಕೊಂಬಾ ।
ದೇವಗೋಪಾಲಕರ ಕರಿಸಿ । ಬುತ್ತಿಯ ತರಿಸಿ ।
ಸವಿಸವಿದುಂಬುವರ ವೆರಸಿ । ಕೈಯೊಳಿರಿಸಿ ।
ಅವರತನ್ನಂಜಲೆಂಬ ದೂರಿಸಿ ನಲುವಾದರಿಸಿ ೧

ಸಿರಿರಮಣಿಯ ಕೂಡ ಸರಸದಿ ಕುಚವಿಡಿದಾ ।
ಕರದಿನವೀನ ತೃಣವಾ ಕಡಿದು ಕವಳವಿಡಿದು ।

ಕರೆದು ಆವಿನ ಪೆಸರಾ ನುಡಿದು ಕುಡವಾವಿ ನಡೆದು ।
ಕರುಣದಿ ಚಪ್ಪರಿಸುವಾ ಜಡಿದು ಮೈಯನಡದು ೨

ಅನಂದಿನ ಧ್ಯಾಯಿಸುವಾ ಮುನಿಮನದಲ್ಲಿ ಹೊಳೆಯಾ ।
ಚಿನುಮಯ ಗೋಪಿಯರಾವಳಿಯಾ ಯೋದ್ಧುಳಿಯಾ ।
ಅನುವಾಗಿದೋವರ್ತನಕಳಿಯಾ ವರ ಬಳಿಯಾ ।
ಘನಮಹಿಪತಿ ಸ್ವಾಮಿ ನೆಲಿಯಾ ಬೊಮ್ಮತಾ ತಿಳಿಯಾ ೩

## ೨೯

ಇವನ ಕಂಡಿರ್ಯಾ ಕಾವಕರುಣನ
ಭಾವ ಭಾವಿಸುವ ಪರಿಯಾಗುವ ದೇವನ ಧ್ರುವ

ಸಗುಣಲೀಹ್ಯನಾ ಭಕುತಿಗೊಲಿವನಾ
ಸುಗಮದಿಂದ ನಿಗಮನುಳುಹಿ ನಗವ ನೆಗೆದನಾ ೧

ಸಿರಿಯ ಲೋಲನಾ ವರಕೃಪಾಲನಾ
ಧರಿಯನುಳುಹಿ ತರಳಗೊಲಿದು ಪ್ರಿಯವಾದನಾ ೨

ಪರಮಪುರುಷನಾ ಸುರವರೇಶನಾ
ವರವ ಬಲಿಗೆ ಇತ್ತು ದೋರಿದ ಭಾರ್ಗವರೂಪನಾ ೩

ಪರಮ ಆತ್ಮನಾ ಹರಿಸರ್ವೋತ್ತಮನಾ
ಸುರರ ನೆರೆಯ ಬಿಡಿಸಿ ಹೊರಟ ಪಾಂಡವಪ್ರಿಯನಾ ೪

ಹೊಳೆವ ತೇಜನಾ ಮೂಲೋಕ ಪಾವನಾ
ಹಳಿದು ವ್ರತವ ನೋಡಿ ಹಯವನೇರಿ ಸುಳಿದನಾ ೫

ಘನ ಮಹಿಮನಾ ದಯಾ ನಿಸ್ಸೀಮನಾ
ದೀನ ಮಹಿಪತಿಸ್ವಾಮಿ ಭಾನುಕೋಟಿ ದೀಪ್ತನಾ ೬

## ೩೦

ಇವನಾ ಕಂಡಿರ್ಯಾ ನಮ್ಮ ನವನೀತ ಚೋರನ
ಅವನ ಕಂಡರದೇಳಿ ಹವಣಿಸಿ ಹಿಡಿದುಕೊಂಬಾ ಧ್ರುವ

ನಾಕು ಬೀದಿಯೊಳಗೆ ಸಾಕು ಸಾಕು ಮಾಡಿದ
ಸೋಂಕದೆ ಕೈಯ್ಯಗೊಡಾ ಬೇಕೆಂದಾರುಮಂದಿಗೆ ೧

ಹದಿನೆಂಟು ಸಂಧಿಯೊಳು ಶೋಧಿಸಿನೋಡಿದರೆ
ಸಾಧಿಸಿ ಬಾರನಿವ ಮದನ ಮೋಹನ ನೋಡಿ ೨

ತಾನೆ ಸಿಕ್ಕುವ್ವಾಗೊಂದು ಮನಗೂಡಬೇಕು ತಂದು
ದೀನ ಮಹಿಪತಿ ಸ್ವಾಮಿ ಅನಕಾ ದೋರತಾ ಬಂದು ೩

## ೩೧

ಇವ ನೋಡಮ್ಮ ನವನೀತಚೋರ
ದೇವದೇವ ಮಾ ಮನೋಹರ ಧ್ರುವ

ಗೋವನಿವ ಗೋಪಾಲ ಶ್ರೀಧರ
ಗೋವಿಸುವ ಇವ ದಾಮೋದರ
ಸಾವಿರ ನಾಮದೊಡೆಯ ಸಹಕಾರ
ಹಾವಿನ ಫಣಿ ಮೆಟ್ಟಿದ ವೀರ ೧

ಸಿರಿಯ ಲೋಲನಿವ ನಂದಕುಮಾರ
ಉರಗಶಯನ ಕೌಸ್ತುಭಧರ
ಪರಮ ಪುರಷ ಹರಿಯ ಸುರವರ
ಮರುಳಮಾಡಿದವ ಗೊಲ್ಲತೇರ ೨

ಬೆಣ್ಣೆ ಮೊಸರು ಕದ್ದು ವೈವನ
ಕಣ್ಣಿಲೆ ಕಟ್ಟಬೇಕು ಇವನ
ಪುಣ್ಯಯುಳ್ಳ ಯಶೋದೆ ಕಂದನ
ಬಣ್ಣಿಸೊ ಮಹಿಪತಿಗನುದಿನ ೩

## ೩೨

ಇಂದು ಕಾಯಲಾ ಭಕ್ತವತ್ಸಲಾ
ಬಂದು ಒದಗಿ ನಿಂದು ಭಯವ ದೂರ ಮಾಡಲಾ ಧ್ರುವ

ಮೊರಿಯು ಕೇಳೆಲಾ ಹರಿಯು ನಿಶ್ಚಲಾ
ಕರುಣದಿಂದ ಒದಗಿ ಬ್ಯಾಗ ದುರಿತ ಹರಿಸೆಲಾ ೧

ಸುಳವದೋರಲಾ ಹೊಳೆದು ವಿಠ್ಠಲಾ
ಖಳರ ಕೈಯ ಸೆಳೆದುಕೊಂಡು ಬಲೆಯ ಬಿಡಿಸೆಲಾ ೨

ತಂದಿ ನೀನೆಲಾ ತಾಯಿ ನೀನೆಲಾ
ಬಂಧುಬಳಗ ದೈವ ಕುಲಕೋಟಿ ನೀನೆಲಾ ೩

ಹಿಂದೆ ಶರಣರ ಬಂದು ಕಾಯ್ದೆಲಾ
ಸಂದು ವಿಘ್ನದೊಳು ಬಂದು ರಕ್ಷಿಸಿದೆಲಾ ೪

ಅಂದು ಒದಗಿ ನೀ ಬಂದ ಪರಿಯಲಾ
ಇಂದು ಅಭಿಮಾನ ಕಾವ ಬಿರುದು ನಿನ್ನದಲ್ಲಾ ೫

ದೀನ ಜನರಿಗೆ ದಾತ ನೀನೆಲಾ
ಅಣುಗ ನಿನ್ನ ದಾಸನೆಂದು ಪ್ರಾಣನುಳುಹೆಲಾ ೬

ಪುಣ್ಯಪ್ರಭೆಯಿಂದಾ ಕಣ್ಣುದೆರಿಯಲಾ
ಧನ್ಯಗೈಸಿ ಮಹಿಪತಿ ಮಾತ ಮನ್ನಿಸೆಲಾ ೭

## ೩೩

ಈತನೀಗ ಕೃಷ್ಣನಾಥನು ಶ್ರೀನಾಥನು ಶ್ರೀನಾಥನಮ್ಮಾ ಧ್ರುವ

ನಂದಕುಮಾರನೀತ ನಂದಮಹಿಮನೀತ
ಕಂದರ್ಪಜನಕನೀತ ಸುಂದರವದನನೀತ ೧

ಇಂದಿರೇಶನು ಈತ ವಂದಿತ ತ್ರೈಲೋಕ್ಯನಾಥ
ಚಂದವಾಗಿ ಸುಳಿದ ಬಾಲ ಮುಕುಂದನೀತ ೨

ಗಿರಿಯ ಬೆರಳಲೆತ್ತಿದಾತ ಕರಿಯ ಸೆರೆಯ ಬಿಡಿಸಿದಾತ
ಮೊರೆಯ ಕೇಳಿ ದ್ರೌಪದಿಯ ಕರುಣಿಸಿದಾತ ೩

ಅಸುವ ಪೂತನಿ ಹೀರಿದಾತ ಕಂಸನ ಮಡುಹಿದಾತ
ವಂಶ ಕೌರವರ ತಾನು ಸಂಹರಿಸಿದಾತ ೪

ಬಾಲಕನಹುದೀತ ಮೂಲೋಕ ಪಾಲಕ ನೀತ
ಸಲಹುತಿಹ ಮಹಿಪತಿ ಮೂಲಾಗ್ರಜನೀತ ೫

## ೩೪

ಉತ್ತಮೋತ್ತಮ ದೈವ ನಿತ್ಯನೀನಾಗಿರಲಿಕ್ಕೆ
ಮತ್ತೆ ಅನ್ಯ ದೈವನಾರಿಸಲ್ಯಾತಕೆ ಧ್ರುವ

ಸತ್ಯಸನಾತನನೆಂದು ಶ್ರುತಿಸಾರುತಿರಲಿಕ್ಕೆ
ಚಿತ್ತ ಚಂಚಲವಾಗುವ ಸಂದೇಹವ್ಯಾತಕೆ
ಎತ್ತ ನೋಡಿದರತ್ತ ಪ್ರತ್ಯಕ್ಷ ನೀ ದೋರಲಿಕ್ಕೆ
ಮತ್ತೆ ಆವ್ಹಾನ ವಿಸರ್ಜನವ್ಯಾತಕೆ ೧

ವಾಸವಾಗಿ ಎನ್ನಾತ್ಮದೊಳು ನೀನೆ ಇರಲಿಕ್ಕೆ
ದೇಶೋದೇಶವನೆ ಶೋಧಿಸುವದ್ಯಾತಕೆ
ವಾಸುವೇವನೆ ನೀನೆ ಎನ್ನ ಈಶನಾಗಿರಲಿಕ್ಕೆ
ಸೋಶಿಲೆ ಅನೇಕ ವೇಷ ದೋರುವದ್ಯಾತಕೆ ೨

ಭಾನುಕೋಟಿತೇಜ ಎನ್ನೊಡಿಯನಾಗಿರಲಿಕ್ಕೆ
ಬಿನುಗುದೈವದ್ಹಂಗು ತಾಇನ್ನೊಂದು ಯಾತಕೆ
ಮನದ ಮಂಗಳಾಗಿ ನೀ ಮಹಿಪತಿಗೆ ಭಾಸುತಿರಲಿಕ್ಕೆ
ಅನುಭವಕ್ಕನುಮಾನ ಮಾಡುವುದ್ಯಾತಕೆ ೩

## ೩೫

ಎನ್ನಪರಾಧವೇನು ನಿನ್ನ ಸೂತ್ರಾಡಿಸಿದ್ಹಾಂಗ ಆಡುವೆ ಹರಿ ಧ್ರುವ

ಆಡಿಸಿದರಾಡುವೆ ನೋಡಿಸಿದರೆ ನೋಡುವೆ
ಮಾಡಿಸಿದರೆ ಮಾಡುವೆ ಪ್ರೇರಿಸಿದ್ಹಾಂಗ ೧

ನಡೆಸಿದರ ನಡೆಯುವೆ ಕೂಡಿಸಿದರ ಕೂಡುವೆ
ನುಡಿಸಿದರೆ ನುಡಿಯುವೆ ಚೇತರಿಸಿದಂತೆ ೨

ಉಡಿಸಿದರೆ ಉಡುವೆ ತೊಡಿಸಿದರೆ ತೊಡುವೆ
ಇಡಿಸಿದರೆ ನಾ ಇಡುವೆ ಸರ್ವಭೂಷಣ ೩

ಹೇಳಿಸಿದರೆ ಹೇಳುವೆ ಕೇಳಿಸಿದರೆ ಕೇಳುವೆ
ಆಳಿಸಿದರೆ ಆಳುವೆ ಅನುವಾದ್ಹಾಂಗ ನೀ ೪

ಕಲಿಸಿದರೆ ಕಲಿಯುವೆ ಬಲಿಸಿದರೆ ಬಲಿಯುವೆ
ಮಲಗಿಸಿದರೆ ಮಲಗುವೆ ಸುಖಗೈಸಿದ್ಹಾಂಗ ೫

ನೇಮಿರೆ ನೀವಂದು ನಾ ಮಾಡುವದಿನ್ನೊಂದು
ನಿಮಿತ್ಯಮಾಡಿದೋರುದು ಸೋಜಿಗಿದೊಂದು ೬

ಎನ್ನ ಬಾಹ್ಯಂತ್ರ ಪೂರ್ಣ ಚನ್ನಾಗಿರೆ ನೀ ಕರುಣ
ಚೆನ್ನ ಮಹಿಪತಿಗಭಿಮಾನ ನಿನ್ನದೇ ಅನುದಿನ ೭

## ೩೬

ಎಲ್ಯಾಡಿ ನೀ ಬಂದ್ಯೋ ಹರಿ
ಫುಲ್ಲಲೋಚನ ಕೃಷ್ಣ ಧ್ರುವ

ಬಲಿ ಮಹಿಮರನೆಲ್ಲ ಸಂರಕ್ಷಿಸಿ ಮಲ್ಲದೈತ್ಯರ
ಹಲ್ಲು ಮುರಿದು ನೀ ಬಂದ್ಯೊ ೧

ಸುಗಮ ಸುಪಥದೋರಿ ನಿನ್ನ
ಉಗಮ ಸಾರಿ ನೀ ಬಂದ್ಯೊ
ನಿಗಮ ತಂದುಳುಹಿಸಿ ನಗ ನೆಗಹಿ ನಿಂದು
ಜಗದೋದ್ಧಾರವ ಮಾಡಿ ನೀ ಬಂದ್ಯೋ ೨

ಶರಣ ರಕ್ಷಕನಾಗಿ ನಿನ್ನ
ಕರುಣ ನೀ ಬೀರಿ ಬಂದ್ಯೋ
ತರಳಗೊಲಿದು ಧರಿ ಮೂರಡಿಯೆನೆ ಮಾಡಿ
ಪರಶುಧರನಾಗಿ ಆಡಿ ನೀ ಬಂದ್ಯೊ ೩

ಮೊರೆಯ ಹೊಕ್ಕವರಿಗೆ ಪದ
ಸ್ಥಿತವನಿತ್ತುನೀ ಬಂದ್ಯೊ
ಸುರರ ಸ್ಥಾಪನೆ ಮಾಡಿ ತುರುಗಳ ಕಾಯಿದು
ಪರ ನಾರೇರ ವ್ರತವಳಿದು ನೀ ಬಂದ್ಯೋ ೪

ನೀನೆ ರಾವುತನಾಗಿ ನಿನ್ನ
ಖೂನ ನೀ ದೋರಿ ಬಂದ್ಯೊ
ದೀನ ಮಹಿಪತಿ ಸ್ವಾಮಿ ಭಾನುಕೋಟಿ ತೇಜ ನೀನೆ
ನೀನಾಗೆನ್ನ ಹೊರಿಯಲು ಬಂದ್ಯೊ ೫

## ೩೭

ಎಲ್ಲಿಗ್ಹೋಗಿ ತಡಮಾಡಿದ್ಯೋ
ಫುಲ್ಲಲೋಚನ ಕೃಷ್ಣ ನೀ ಎಲ್ಲಡಗಿದ್ಯೊ ಧ್ರುವ

ಬಲ್ಲವರಿಗೆ ಬಲ್ಲತನದೋರ ಹೋಗಿದ್ಯೊ
ಅಲ್ಲಿ ಅವರ ಸಹಕಾರ ನೀನಾದ್ಯೊ
ಸುಲ್ಲಭವಾಗಿ ಜ್ಞಾನಕೆ ನೀ ಸಿಲುಕಿದ್ಯೋ
ಒಲ್ಲದ್ಹಾಂಗ್ಹೋಗಿ ಎಲ್ಲರಿಗಾಗಿದ್ಯೊ ೧

ಜ್ಞಾನಿಗಳಿಗೆ ಜ್ಞಾನಸಮುದ್ರ ನಾಗಿದ್ಯೊ
ಧ್ಯಾನಮಾಡುವರ ಧ್ಯಾನವೆ ಅಗಿದ್ಯೊ
ಮುನಿಜನರೊಡನೆ ಮಾನಸ ಹಂಸನಾಗಿದ್ಯೊ
ಖೂನದೋರಲು ಹೋಗಿ ನೀನೆ ಆಗಿದ್ಯೊ ೨

ಧೃಢಭಕ್ತರೊಡನೆ ಭಿಡಿಯೊಳಗಾಗಿದ್ಯೊ
ಕಡಿಗಾಗದ್ಹಾಂಗ ಕೈಯೊಳಗಾಗಿದ್ಯೊ
ಎಡಬಲಕವರೆಂದು ಬಿಡದ್ಹಾಂಗಾಗಿದ್ಯೊ
ಒಡಲ ಹೊಕ್ಕವರ ಒಡಿಯನಾಗಿದ್ಯೊ ೩

ಪ್ರೇಮ ಉಳ್ಳವರ ಪ್ರೀತಿಯೊಳಗಾಗಿದ್ಯೊ
ಸ್ವಾಮಿತನದಲಿ ಸಮೀಪನಾಗಿದ್ಯೊ
ಕಾಮ ಪೂರಿಸಲಿಕೆ ನೇಮವ ಪಿಡಿದ್ಯೊ
ಮಾಮನೋಹರ ನೀ ಸುಗಮವಾಗಿದ್ಯೊ ೪

ಇಂದು ನೆನಪಾಯಿತೆಂದು ಓಡಿ ನೀ ಬಂದ್ಯೊ
ಚಂಚವಾಗೆನ್ನೊಳಗಾದ್ಯೊ ನೀ ಬಂದ್ಯೊ
ಕಂದಮಹಿಪತಿಗನುಭವದೋರ ನೀ ಬಂದ್ಯೊ
ತಂದೆ ಸದ್ಗುರು ಅನಂದವ ತಂದ್ಯೊ ೫

## ೩೮

ಎಲ್ಲಿದ್ದ್ಯೊ ಹರಿ ಹೇಳಯ್ಯ
ಎಲ್ಲಿ ತಿಳಿವುತದೆ ನಿಮ್ಮಾಟದ ಸುಧ್ಯೇಯ ಧ್ರುವ

ನಾಲ್ಕಾರು ಹದಿನೆಂಟು ಮಂದಿಯ ಕೇಳಿದೆ
ಸಿಲುಕನೆಂದವರಾಡುದೆ
ಮಲಕು ಎಂಬತ್ತು ನಾಲ್ಕು ಲಕ್ಷ ನೂ ಸೋಸಿದೆ
ನಿಲುಕಿ ನಿನ್ನ ನೆಲೆ ನಿಜವು ದೋರದೆ ೧

ನಾನಾ ಮತ ನಾನಾ ಮಾರ್ಗ ಶೋಧಿಸಿದೆ
ಖೂನ ನಿನ್ನದು ತಿಳಿಯದೆ
ನಾನು ನಾನೆಂಬವರಿಗೆ ಅನುಸರಿಸಿದೆ
ನೀ ನಿಹ ಸ್ಥಳದ ಗಾಳಿಯು ಬೀಸದೆ ೨

ಬೀಳದವರ ಕಾಲುಬಿದ್ದು ನಾ ಕೇಳಿದೆ
ಸುಳಹು ನಿನ್ನದು ತೋರದೆ
ತಲೆ ಕೆಳಗನೆ ಮಾಡಿ ತಪಸವ ಮಾಡಿದೆ
ಒಲವು ನಿಮ್ಮದು ಎಂದಿಗೆ ಅಗದೆ ೩

ಬಡದ ಬವಣೆ ಬಟ್ಟು ಹುಡುಕದಾ ಹುಡುಕಿದೆ
ತುಡಕು ನಿಮ್ಮದು ತಿಳಿಯದೆ
ಒಡನೆ ಎನ್ನೊಳು ಬಂದು ಅಡಕವ ಹರಿಸಿದೆ
ಬಡವನಾಧಾರೆಂದು ಕೈ ಬಿಡದೆ ೪

ಮನೋನ್ಮನವಾಗಿ ಕಂಗಳ ತೆರೆಸಿದೆ
ಸ್ವಾನುಭವನೇ ಬೀರಿದೆ
ದೀನಮಹಿಪತಿ ಮನೋಹರಣ ಮಾಡಿದೆ
ಅನುದಿನ ಘನಸುಖದೊಳಗಿರಿಸಿದೆ ೫

## ೩೯

ಎಲ್ಲಿ ಶ್ರೀಹರಿ ನಾಮದ ಘೋಷ ಅಲ್ಲಿ
ಸಕಲಸುಖ ಸಂತೋಷ
ಸುಲಭದಲ್ಯಾಹುದು ಭವಭವಯದ ನಾಶ ೧

ಕರೆಸುವದಾನಂದ ಹರುಷ ಹರಿಸುವದು ಕಲಿಮಲಕಲುಷ
ಪರಿಶೋಷಿಸುವದು ಮಹಾಪಾತಕ ದೋಷ ೨

ಸ್ವಹಿತ ಸಾಧನದಸು ಉಪದೇಶ ಬಾಹ್ಯಂತ್ರ ದೋರುವ ಪ್ರಕಾಶ
ಮಹಿಪತಿಗಿದೆ ನಿತ್ಯಾನುಭವದುಲ್ಲಾಸ ೩

## ೪೦

ಎಂಥ ಮಗನೆ ನಿಮ್ಮ ಗೋಪಮ್ಮ ಧ್ರುವ

ಸವಿಸುಖಬಲ್ಲಿವ ನವನೀತ ಚೋರ
ಎವಿಹಾಕುತ ಬಾಹಾ ಪರನಾರಿ ಜಾರ ೧

ಎಳೆವನು ಹಾದಿ ಬೀದಿ ಯೊಳಗೆ ಸೆರಗ
ಸುಳಹು ಕಂಡಾರೆಂದರೆ ತಾ ತಿರಗ ೨

ಹಿಡಿದೇನೆಂದರೆ ಕೈಯೊಳು ಸಿಲುಕ
ಮಾಡಿ ಮಾಡದಿದ್ದಾಂಗ ಇವ ಬಲು ಠಕ್ಕ ೩

ಹೇಳಬೇಕಿನ್ನಾರಿಗೆ ಈ ದೂರ
ತಿಳಿದುಕೊಳ್ಳಮ್ಮ ಮಗನ ವಿಚಾರ ೪

ಬಿಡ ಇವನೆಂದೂ ಪಿಡಿದವರ ಕೈಯ
ಬಿಡದೆ ಸಲಹುತಿಹ್ಯ ಮೂಢಮಹಿಪತಿಯ ೫

## ೪೧

ಕರುಣಸಾಗರನಹುದೊ ಶರಣ ಜನರ ಪ್ರಿಯ ಧ್ರುವ

ಕರಿರಾಜ ಮೊರೆ ಇಡಲು ಭರದಿಂದೊದಗಿ ಬಂದ್ಯೊ
ದುರಿತ ಬಂದಡರಿದಾವಸರದೊಳು ನೀ
ಪರಿಹರಿಸಿದ್ಯೊ ಶ್ರಮ ಪರಮ ದಯಾಳು ೧

ದುರಿತ ನಿರ್ಮಿಸಿದವನ ಬೆರಳಲಿ ಸೀಳಿದ್ಯೊ ಪೂರ್ಣ
ಹರಿಯಂದಾ ಮಾತಿಗೆ ಕರುಣದಿಂದೊದಗಿ ನೀ
ಪರಪರಗಾಯಿದ್ಯೊ ತರಳ ಪ್ರಹ್ಲಾದನ ೨

ಧರ್ಮಪತ್ನಿಯ ಸೆರಗೆ ಭರದಿಂದೆಳೆಯುವ ಸಮಯ
ಸ್ಮರಣಿ ಒದಗಿ ಬಂದೊ ಪರಿಪರಿ ವಸ್ತುವ
ಪೂರಿಸಿದ್ಯೊ ಶ್ರೀ ಹರಿ ಕೃಷ್ಣ ಕೃಪಾಳು ೩

ಅರಗಿನ ಮನೆಯೊಳು ಮರೆ ಮೋಸ ಮಾಡಿರಲು
ದೋರಿ ವಿವರದಿಂದ ಪೊರೆವೊಂದಿಸಿದ್ಯೊ ಸ್ವಾಮಿ
ಶರಣಾಗತವತ್ಸಲ ಪಾಂಡವಪ್ರಿಯ ೪

ಹಲವು ಪರಿಯಲೆನ್ನ ಸಲಹುವ ಸದ್ಗುರುಪೂರ್ಣ
ಬಾಲಕ ಮಹಿಪತಿಯ ಪಾಲಕ ನೀನಹುದೊ
ಮೂಲೋಕದೊಡೆಯ ಶ್ರೀ ಹರಿ ದಯಾಳ ೫

## ೪೨

ಕರುಣಾಕರನೀತ ಕರಿಭಯ ಹರಿದಾತ
ಹರಿಪರಂದೈವೀತ ಗುರುನಾಥ ಧ್ರುವ

ಮೂರುಗುಣರಹಿತ ಮೂರುಲೋಕ ವಂದಿತ
ಮುರಹರನಹುದೀತ ಗುರುನಾಥ ೧

ಸುರಜನ ಪೂಜಿತ ಪರಮಾನಂದಭರಿತ
ತಾರಕನಹುದೀತ ಗುರುನಾಥ ೨

ಪತಿತಪಾವನೀತ ಪಿತಾಮಹನ ಪಿತ
ದಾತನಹುದೀತ ಗುರುನಾಥ ೩

ಅನಾಥ ಬಂಧುನೀತ ಅನುದಿನ ಸಾಕ್ಷಾತ
ದೀನದಯಾಳುನೀತ ಗುರುನಾಥ ೪

ಭಕ್ತವತ್ಸಲನೀತ ಶಕ್ತಸದ್ಗುರುನಾಥ
ಮುಕ್ತಿದಾಯಕನೀತ ಗುರುನಾಥ ೫

ಜನವನದೊಳಗೀತ ಮನೋಭಾವಪೂರಿತ
ಆನಂದೋ ಬ್ರಹ್ಮನೀತ ಗುರುನಾಥ ೬

ಗುಹ್ಯಕೆ ಗುಹ್ಯನೀತ ಬಾಹ್ಯಂತ್ರ ಸದೋದಿತ
ಮಹಾಮಹಿಮನೀತ ಗುರುನಾಥ ೭

ಇಹಪರ ನಮಗೀತ ಮಹಿಪತಿ ಪ್ರಾಣನಾಥ
ಸಹಾಕರನಹುದೀತ ಗುರುನಾಥ ೮

## ೪೩

ಕಡುಣಸಯ್ಯ ಗುರುವರೇಶ ಪರಮಪುರುಷ ಹರಿಸರ್ವೇಶ ಧ್ರುವ

ನೋಡದಿರಯ್ಯ ಭಿನ್ನಭೇದ ಮಾಡೊ ದಯ ಸುಜ್ಞಾನಬೋಧ
ನೀಡೊ ನಿಮ್ಮ ನಿಜಪ್ರಸಾದ ಕೊಡುವದನುಭವಾಮೃತಸ್ವಾದ ೧

ಸರಿಯಗಾಣೆ ಹರಿಯೆ ನಿಮ್ಮ ಸಿರಿಯಲೋಲಾನಂದ ಬ್ರಹ್ಮ
ಕರಿಯವರದ ದಯನಿಸ್ಸೀಮ ಮೊರಿಯಗೇಳಿ ಘನಮಹಿಮ ೨

ಕರುಣ ದಯದಲಿ ನೀ ಪೂರ್ಣ ಶರಣಜನರ ಸುಭೂಷಣ
ಹೊರೆದು ಸಲಹೊ ಸ್ವಾಮಿ ಪೂರ್ಣ ತರಳ
ಮಹಿಪತಿಯ ಪ್ರಾಣ ೩

## ೪೪

ಕರುಣಿಸೊ ಕರುಣಿಸೊ ಗುರುವೆಂಕಟೇಶ
ಕರುಣಿಸೆನ್ನ ನೀ ನೋಡೊ ಪರಮ ಪುರುಷ ಧ್ರುವ

ಬಿನ್ನಹವ ಪಾಲಿಸೊ ಚಿನುಮಯ ರೂಪ
ಉನ್ನತ ಮಹಿಮ ನೀ ಘನ್ನ ಗುರು ಕೃಪ ೧

ಅನಾಥ ಬಂಧು ನೀ ಶರಣ ರಕ್ಷಕ
ಅನಂತ ಕೋಟಿ ಬ್ರಹ್ಮಾಂಡ ನಾಯಕ ೨

ಅಶೇಷೂರಿತ ವಾಸುದೇವ ಚಿದ್ರೂಪ
ದೇಶಿಕರದೇವ ಭಾಸಿ ಪಾಲಿಪ ೩

ವಂದಿತ ತ್ರೈಲೋಕ್ಯ ವೇದಾಂತ ಮಹಿಮ
ಇಂದಿರಾಪತಿ ಘನಗುರುಬ್ರಹ್ಮ ೪

ಶ್ರೀನಾಥ ನೀನಲ್ಲದೆ ನನಗಾರು ಇಲ್ಲ
ನೀನೆ ಸಕಲಪೂರ್ಣ ಭಕ್ತವತ್ಸಲ ೫

ಮತಿಹೀನನವಗುಣ ನೋಡದಿರೆನ್ನ
ಕ್ಷಿತಿಯೊಳು ಸದ್ಗೈಸೊ ಪತಿತಪಾವನ ೬

ದೀನನಾಥ ನೀ ಬಂದು ಮನದೊಳು ನಿಂದು
ಮನ್ನಿಸಿ ದಯಬೀರೊ ಘನಕೃಪಾಸಿಂಧು ೭

ವಿಶ್ವವ್ಯಾಪಕ ಸಾಧುಹೃದಯನಿವಾಸ
ದಾಸ ಮಹಿಪತಿ ಪ್ರಾಣ ಹೊರಿಯೊ ಪ್ರಾಣೇಶ ೮

## ೪೫

ಕರುಣಿಸೋ ಸ್ವಾಮಿ ನೀಪೂರ್ಣ
ಸಾರಸದ್ಗತಿ ಭೂಷಣಾ
ತಾರಿಸೋ ಯನ್ನ ನೀ ಪ್ರಾಣಾ ಶ್ರೀ
ಹರಿ ಕಂಜಲೋಚನಾ ೧

ಸ್ವಾಮಿ ನೀ ಸರ್ವ ಸಾಕ್ಷಾತಾ
ಬ್ರಹ್ಮಾದಿದೇವ ವಂದಿತಾ
ಮನೋಹರ ಪ್ರಖ್ಯಾತಾ
ನೇಮ ನೀ ಕಾಮ ಪೂರಿತಾ ೨

ಹಸ್ತಿಗೊಲಿದ ಸುದಾತಾ
ವಸ್ತು ಶ್ರೀದೇವ ನಿಶ್ಚಿತಾ
ನಿಸ್ತರಿಸುವಾ ಶ್ರೀನಾಥಾ
ಕಸ್ತೂರಿರೇಖಾ ಶೋಭಿತಾ ೩

ನೀನೆ ನಮಸ್ತ ಕಾಧಾರಾ
ಶ್ರೀನಿಧಿ ಜ್ಞಾನ ಸಾಗರಾ
ದೀನ ಜನರ ಮಂದಾರಾ
ಪೂರ್ಣಾನಂದದಾಗರಾ ೪

ಮಹಿಪತಿ ಸ್ವಾಮಿ ಶ್ರೀಪತಿ
ಕಾಯೋ ನೀ ಲಕ್ಷ್ಮೀಪತಿ
ಶ್ರೀ ಹರಿ ದಿವ್ಯಸುಮೂರ್ತಿ
ದೋರೋ ನೀ ದಿವ್ಯಸಂಗತಿ ೫

## ೪೬

ಕಾಯಬೇಕೆನ್ನ ನೀನು ಶ್ರೀ ಗುರು ಎನ್ನ ಧ್ರುವ

ಪಕ್ಷ ಪಾಂಡವ ಪ್ರಿಯ ಅಕ್ಷಯಾಪದನಿಶ್ಚಯ
ಲಕ್ಷುಮಿ ಸುಹೃದಯ ರಕ್ಷಿಸೊ ನೀ ಎನ್ನಯ್ಯ ೧

ಪವಿತ್ರ ಪ್ರಣವರಿಸಿ ಸುವಿದ್ಯದೊಳು ಬೆರಸಿ
ಜೀವ ಪಾವನಗೈಸಿ ಭವ ಭಯವು ಹಿಂಗಿಸಿ ೨

ಸೋಹ್ಯ ಸೊನ್ನೆಯದೋರಿ ದಯಮಾಡೊ ಮುರಾರಿ
ಸಾಹ್ಯ ಮಾಡೊ ಸಹಕಾರಿ ಮಹಿಪತಿ ಸ್ವಾಮಿ ಶ್ರೀಹರಿ ೩

## ೪೭

ಕಾಯಯ್ಯ ಕಂಜಲೋಚನ
ದಯಲೆನ್ನ ಕರುಣಾ ದಯಲೆನ್ನ ಧ್ರುವ

ಅಕ್ಷಯಾನಂದ ನೀ ಪೂರ್ಣ ಲಕ್ಷುಮೀ ರಮಣ ಸಗುಣಾ
ಲಕ್ಷ್ಮೀರಮಣ ಪಕ್ಷಪಾಂಡವರ ಪ್ರಾಣ ರಕ್ಷಿಸೊ ನಾರಾಯಣ ೧

ಅಣುರೇಣು ವೊಳನುಕೂಲ ಮುನಿಜನಪಾಲ ಲೋಲಾ
ಘನಸುಖದ ಕಲ್ಲೋಳ ನೀನೆ ದೀನದಯಾಳಾ ೨

ಶರಣು ಜನರುದ್ಧರಣ ಜ್ಞಾನಗುರು ನಿಧಾನಾ ಗುರು ನಿಧಾನಾ
ಕರುಣಾಸಾಗರ ಪೂರ್ಣ ಹೊರಿಯೊ ಮಹಿಪತಿಪ್ರಾಣ ೩

## ೪೮

ಕಾಯಯ್ಯಾ ನೀ ಎನ್ನ ರನ್ನಾ ।
ದಯದಲಿ ಸಂಪನ್ನಾ ಪ

ಮಂದರಧರ ದಶಕಂದರ ಹರಿ ಅತಿ– ।
ಸುಂದರ ಸದ್ಗುಣ ಮಂದಿರ ಈಶಾ ।
ಕುಂದರದನ ಕಂಬುಕಂದರ ಐದೊಂದು ।
ಕಂದರ ಪಿತ ಸಖ ಇಂದಿರೆಯರಸಾ ೧

ತುಂಗ ವಿಕ್ರಮ ದನುಜಾಂತ ಮದಗಜಕ ।
ಸಿಂಗದಂತೆ ಹರಣ ರಂಗ ನಿಸ್ಸೀಮಾ ।
ಇಂಗಿತಜನ ಭವಭಂಗ ಕಮಲದಳ ।
ಕಂಗಳಲೊಪ್ಪುವ ಮಂಗಳ ಮಹಿಮಾ ೨

ಅಂಬುಜ ಭವನುತ ಅಂಬುಧಿಜಾನನ ।
ಅಂಬುಜ ಸುಚಕೋರಾಂಬುಜ ಚರಣ ।
ಅಂಬುಧಿವಾಸ ವಿಶ್ವಂಭರ ಮಹಿಪತಿ– ।
ನಂಬಿದ್ದವರಿಗಿಂಬಾಗಿಹೆ ಕೃಷ್ಣಾ ೩

## ೪೯

ಕಾಯಯ್ಯ ರಘುರಾಮ ದೀನಜನೋದ್ಧಾರಿ ರಘುರಾಮ ಧ್ರುವ

ಕೇವಲ ಪತಿಪಾಮರ ನಾನು
ಕೈವಲ್ಯಾವನ ಮೂರುತಿ ನೀನು
ಕೇವಲ ಘನ ಅಪರಾಧಿಯುನಾನು
ದೇವನೆ ಕರುಣಾಸಾಗರ ನೀನು ೧

ಭಾವ ಭಕುತಿಕೀಲವ ನಾನರಿಯೆ
ವಿವೇಕಾಮೃತ ನೀಡುವ ದೊರೆಯೆ
ಅವಾಗ ವಿಷಯಾಸಕ್ತನು ಹರಿಯೆ
ಕಾವ ದೈವ ನೀನೆ ಶ್ರೀ ಹರಿಯೆ ೨

ಚರಣವೆ ಗತಿಯೆಂದಾತನ ತಂದೆ
ತರಳನ ಕುಂದನಾರಿಸದಿರು ತಂದೆ
ತರಳ ಮಹಿಪತಿ ಪ್ರಭು ನಮೋ ಎಂದೆ
ಶರಣ ರಕ್ಷಕ ನೀನಿಹುದೆಂದೆ ೩

## ೫೦

ಕಾಯೋ ಕರುಣ ಕೃಪೆಯಿಂದ ಹರಿ ಮುಕುಂದ ಧ್ರುವ

ಕರುಣಾನಂದದ ಸಾಗರ ಕರಿವರ
ಶರಣಾಗತಜನರ ಮಂದಾರ ಪರಮ ಉದ್ಧಾರ
ಸುರ ಸಂಸಾರಾಯದಾಗರ ಪರಾತ್ಪರ
ತರಣೋಪಾಯದಾಧಾರ ೧

ಅನಾಥ ಜನರಾಶ್ರಯ ನೀನೆ ನಿಶ್ಚಯ
ಅನುಭವಾನಂದಾ ಹೃದಯ ಘನಮಯ

ದಿನಕರಕೋಟಿ ಪ್ರಭೆಯೆ ಜನವನಲಿಹ್ಯ
ಮುನಿಜನರ ಹೃದಯ ಅನುದಿನದಲಕ್ಷಯ ೨

ವಿಹಿತವಿಚಾರದ ವಿವರ ಈಹ್ಯಶ್ರೀಧರ
ಸ್ವಹಿತ ಸುಖದ ಸುಸಾರ ಬಾಹ್ಯಾಂತರ
ಮಹಿಮೆ ನಿನ್ನದು ಅಪಾರ ಮಹೇಶ್ವರ
ಇಹ್ಯ ಪರದ ದಾತಾರ ಮಹಿಪತಿ ಸಹಕಾರ ೩

## ೫೧

ಕಾಯೊ ಕರುಣಾಕರ ಕೃಪಾಲ ಶ್ರೀ ಗುರು ಎನ್ನ
ಕಾಯೊ ದಯದಿಂದೆನ್ನ ಪರಮಪಾವನ ಧ್ರುವ

ಹುಟ್ಟಿಸಿಹ್ಯ ಜೀವನ ಸೃಷ್ಟಿಯೊಳು ನಾ ನಿಮ್ಮ
ದೃಷ್ಟಿಸಿ ನೋಡಲು ಎನ್ನ ಕಷ್ಟಪರಿಹಾರ
ಶಿಷ್ಟಜನ ಪ್ರತಿಪಾಲ ದುಷ್ಟಜನ ಸಂಹಾರ
ಎಷ್ಟೆಂದು ಪೊಗಳಲಯ್ಯ ಕೃಷ್ಣಕೃಪಾಲ ೧

ಇನ್ನೊಂದು ಅರಿಯೆ ನಾ ಅನ್ಯಪಥವೆಂಬುದನು
ನಿನ್ನ ಚರಣಕೆ ಪೂರ್ಣ ನಂಬಿಹ್ಯನು
ಭಿನ್ನವಿಲ್ಲದೆ ಎನ್ನ ಚನ್ನಾಗಿ ಸಲಹಯ್ಯ
ಧನ್ಯಗೈಸೊ ಪ್ರಾಣ ಚಿನ್ಮಯನೆ ೨

ವಾಸನೆಯ ಪೂರಿಸೊ ವಿಶ್ವವ್ಯಾಪಕ ಎನ್ನ
ಭಾಸ್ಕರಕೋಟಿ ಪ್ರಕಾಶ ಪೂರ್ಣ
ಲೇಸು ಲೇಸಾದಿ ಪಾಲಿಸೊ ವಾಸುದೇವನೆ
ದಾಸಾನುದಾಸ ನಿಜದಾಸ ಮಹಿಪತಿಗೆ ೩

## ೫೨

ಕಾಯೊ ಕರುಣಾಭಯ ಕೃಧ್ಬಯ ನಾಶನ ಧ್ರುವ

ಕಂದ ಪ್ರಲ್ಹಾದಗಾಗಿ ಸಂಧಿಸೊದಗಿನಿಂತು
ಬಂದು ರಕ್ಷಿಸಿದೆ ಪ್ರಾಣ ಚಂದವಾಗಿ ನೀ ೧

ಕರಿಯ ಮೊರೆಯ ಕೇಳಿ ನೆರಯ ಬಿಡಿಸಿದೆ ಎಂದು
ಮೊರೆಯ ಹೊಕ್ಕೆನು ನಿಮಗೆ ಹರಿಹರಿಯೆಂದು ೨

ದ್ರೌಪದಿಯ ಅಭಿಮಾನ ಕೃಪೆಯಿಂದ ನೀ ಪೂರ್ಣ
ಉಪಾಯದಲಿಗಾಯ್ದ ಅಪಾರ ಮಹಿಮ ೩

ಸ್ಮರಿಸಿದಾಕ್ಷಣ ಬಂದು ಕರುಣದಿಂದನ್ಯರಿಗೆ
ಪರಿಪರಿಯಿಂದ್ಹೊರೆದೆ ವರಮುನಿಗಳ ೪

ಶರಣು ಹೊಕ್ಕೇನು ನಿಮ್ಮ ತರಳ ಮಹಿಪತಿ ಪ್ರಾಣ
ಹೊರೆದು ರಕ್ಷಿಸು ಎನ್ನ ಪರಮಪಾವನ ೫

## ೫೩

ಕಾಯೊ ಕಾಯೊ ಕರುಣಕಾರ ಗೋವಿಂದ
ಕಾಯೊ ನಮ್ಮ ಕೃಪಾಸಿಂಧು ಹರಿ ಮುಕುಂದ ಧ್ರುವ

ಬೊಮ್ಮನಾ ಪಡೆದ ಪರಾವರ ದೊರಿಯೆ
ಸಮ್ಯಜ್ಞಾನವಿತ್ತು ಕಾಯೊ ಮುರಾರಿಯೆ
ನಿಮ್ಮ ವಿನಾ ಅನ್ಯಪಥವ ನಾನರಿಯೆ
ನಮ್ಮ ದೈವ ನೀನಹುದೊ ನರಹರಿಯೆ ೧

ಭವಭಯ ದುರಿತ ಪರಿಹರಿಸೊ
ಭಾವ ಭಕ್ತಿಯೊಳೂ ಮನಪೂರ್ಣವಿರಿಸೊ
ಕಾವಕರುಣನೆ ನಿಮ್ಮ ದಯ ಬೀರಿಸೊ
ದಿವಾರಾತ್ರೆಯಲಿ ನಿಮ್ಮ ಸ್ಮರಣಿಲಿರಿಸೊ ೨

ಕಾಯೊ ಕಾಯೊ ಕೊಟ್ಟು ನಿಮ್ಮ ನಿಜಧ್ಯಾನವ
ಕಾಯೊ ಕರುಣಿಸಿ ಎನ್ನ ಜೀವನದ
ಕಾಯೊ ದಯದಿಂದ ಎನ್ನ ಅಭಿಮಾನ
ಕಾಯೊ ನಿಜ ದಾಸ ಮಹಿಪತಿ ಪ್ರಾಣವ ೩

## ೫೪

ಕಾಲಕಾಲದಲಿ ಕೇಶವನೆನ್ನಿರೊ
ಬಾಲ ಮುಕುಂದ ಮಾಧವನೆನ್ನಿರೊ ಧ್ರುವ

ಉದಯಕಾಲದಲಿ ಅನಂತಮಹಿಮನೆನ್ನಿ
ಮಧ್ಯಾಹ್ನದಲಿ ಪದ್ಮನಾಭನೆನ್ನಿ
ಸಂಧ್ಯಾಸಾಯಂಕಾಲದಲಿ ಶ್ರೀಧರನೆನ್ನಿ
ಸದಾ ಕಾಲದಲಿ ಶ್ರೀ ಹರಿಯೆನ್ನಿರೊ ೧

ಏಳುತ ಮಚ್ಛಾವತಾರ ಅಚ್ಯುತನೆನ್ನಿ
ಮಲಗುತ ಶೇಷಶಯನನೆನ್ನಿರೊ
ಹೇಳುತ ವಿಷ್ಣುವರಾಹವತಾರನೆನ್ನಿ
ಕೇಳುತ ಕೃಷ್ಣಾವತಾರನೆನ್ನಿ ೨

ನಡೆಯುತ ಸುಗುಣ ನಿರ್ಗುಣ ಸರ್ವೋತ್ತಮನೆನ್ನಿ
ನುಡಿಯುತ ನಾರಯಣನೆನ್ನಿರೊ
ಮಾಡುತ ಕೃಷ್ಣನಿರ್ಮಿತ ದಾಮೋದರನೆನ್ನಿ
ಕೂಡುತ ಕೂರ್ಮಾವತಾರನೆನ್ನಿ ೩

ಆಡುತ ಗರುಡವಾಹನ ತ್ರಿವಿಕ್ರಮನೆನ್ನಿ
ಬೇಡುತ ಸ್ವಾಮಿ ವಾಮನನೆನ್ನಿರೊ
ನೋಡುತ ವಾರಿಜನೇತ್ರ ಪ್ರಸಿದ್ಧನೆನ್ನಿ
ಪಾಡುತ ಪರಮಾತ್ಮನೆನ್ನಿರೊ ೪

ಉದ್ಯೋಗದಲಿ ಸಹಕಾರನಿರುದ್ಧನೆನ್ನಿ
ಉದರ ಕಾಯದಲಿ ಉಪೇಂದ್ರನೆನ್ನಿ
ಮೇದಿನೊಯೊಳು ಹರಿಮಧುಸೂದನನೆನ್ನಿ
ಆದಿ ಅಂತಿಮ ಅಧೋಕ್ಷಜನೆನ್ನಿರೊ ೫

ಹೃದಯಕಮಲದೊಳು ಹೃಷೀಕೇಶನು ಎನ್ನಿ
ಶಬ್ದಜಿಹ್ವೆಲಿ ಜನಾರ್ಧನನೆನ್ನಿರೊ
ಬುದ್ಧಿಯಲಿ ಸಿದ್ಧಬೌದ್ಧಾವತಾರನೆನ್ನಿ
ಅದಿಅನಾದಿ ಗೋವಿಂದನೆನ್ನಿ ೬

ಅನುದಿನ ಮನದೊಳು ಘನಮಹಿಮನು ಎನ್ನಿ
ತನುವಿನೊಳು ಪುರುಷೋತ್ತಮ ನಾನೆನ್ನಿ
ಅನ್ನವುದಕ ಸೇವಿಸುವ ಹರಿಭೋಕ್ತನೆನ್ನಿ
ಘನಭೂಷಣದಿ ಸಂಕರುಷಣನೆನ್ನಿ ೭

ಸತಿಪತಿ ಸಂಯೋಗದಲಿ ಪ್ರದ್ಯುಮ್ನನೆನ್ನಿ
ಪತಿತಪಾವನ ಪರಬ್ರಹ್ಮನೆನ್ನಿ
ಭಕ್ತವತ್ಸಲ ನರಸಿಂಹಾವತಾರನೆನ್ನಿ
ಮುಕ್ತಿದಾಯಕ ದೇವೋತ್ತಮನೆನ್ನಿರೊ ೮

ಪಾವನಮೂರುತಿ ಪರಶುರಾಮನೆನ್ನಿ
ಜೀವಸಂಜೀವ ಶ್ರೀ ರಾಮನೆನ್ನಿ
ಭವಭಯನಾಶ ಕಲ್ಕ್ಯಾವತಾರನೆನ್ನಿ
ಮಹಿಪತಿಗುರು ವಾಸುದೇವನೆನ್ನಿ ೯

## ೫೫

ಕೂಸು ಕಂಡಿರ್‍ಯಾ ವಿಶ್ವದೊಳೊಂದು
ಕೂಸು ಕಂಡಿರ್‍ಯಾ ಧ್ರುವ

ವೇದವ ತಂದು ಉಳುಹಿತೀ ಕೂಸು
ಮೇದಿನಿ ಭಾರವ ತಾಳಿತೀ ಕೂಸು
ಸಾಧಿಸಿ ಧಾರುಣಿ ಗೆದ್ದಿತೀ ಕೂಸು
ಉದಿಸಿ ಸ್ತಂಭದೊಳು ಮೂಡಿತೀ ಕೂಸು ೧

ಭೂಮಿಯು ಮೂರಡಿ ಮಾಡಿತೀ ಕೂಸು
ನೇಮದಿ ಪರಶುವ ಹಿಡಿಯಿತೀಕೂಸು
ಸಮುದ್ರ ಸೇತುವೆ ಕಟ್ಟಿತೀ ಕೂಸು
ಕಾಮ ಪೂರಿಸಿತೀ ಕೂಸು ೨

ಬೆತ್ತಲೆ ತ್ರಿಪುರದಲಿ ಸುಳಿಯಿತೀಕೂಸು
ವಸ್ತಿ ಕುದುರೆ ನಾಳಿತೀ ಕೂಸು
ನಿತ್ಯಮಹಿಪತಿ ಮನದೊಳಗಾಡುವ ಕೂಸು
ಸತ್ಯಸನಾತನಾಗಿಹ್ಯ ಕೂಸು ೩

## ೫೬

ಕೃಪೆ ನಿಮ್ಮದಾಗಬೇಕು ಸ್ವಾಮಿ ನಿಮ್ಮರಿಯಲಿಕ್ಕೆ
ಅಪಾರ ಮಹಿಮೆ ನಿಮ್ಮ ಸುಂಪಾದ ತಿಳಿಯಲಿಕ್ಕೆ ಧ್ರುವ

ಭ್ರಾಂತಗೆಲ್ಲಿಹುದಯ್ಯ ಪೂರ್ಣನಿಂತ ನಿಲಕಡೆಜ್ಞಾನ ।
ಎಂತುಹೇಳಿದರ ಖೂನ ಶಾಂತಹೊಂದದಯ್ಯಮನ ।
ಪಂಥ ಪರಮ ಗುಹ್ಯಸ್ಥಾನ ತಂತುವಿಡಿಯಲು ನಿರ್ಗುಣ ।
ಅಂತು ಇಂತು ಎಂಬುಂದೆ ನಾನಂತ ಗುನ ನಿಧಾನ ೧

ಖೂನ ತಿಳಿಯಲಿಕ್ಕಗಾಧಗುರು ನಿಮ್ಮಶ್ರೀಪಾದ ।
ಏನು ಅರಿಯೆನು ನಿಮ್ಮ ಬೋಧ ನೀಡಬೇಕು ಸುಪ್ರಸಾದ ।
ನೀನೆವೆ ನಿತ್ಯವಾದ ವಸ್ತು ಪರಿಪೂರ್ಣ ಸದಾ ।
ದೀನ ಬಂಧು ದಯದಿಂದ ಖೂನದೋರೊ ಆಶ್ರಯದ ೨

ಮೂಢ ಮಂದ ಮತಿ ನಾನು ಭಕ್ತಿ ಮಾಡಲರಿಯೆನು
ಒಡಿಯನಹುದಯ್ಯ ನೀನುಮಹಿಪತಿಯ ಕಾಮಧೇನು
ಕೊಡಲಿಕ್ಕೆ ಪೂರ್ಣ ನೀನು ಸ್ವಾಮಿ ಕಾವ ಕರುಣನು
ಪಿಡಿದಿಹ್ಯ ನಿಮ್ಮ ನಾನು ದಿವ್ಯ ಪಾದಪದ್ಮವನು ೩

## ೫೭

ಕೃಷ್ಣ ಎಂಥಾದೊ ನಿನ್ನ ಕರುಣ
ಶಿಷ್ಯ ಜನರುದ್ದೇಶಬಂದ್ಯೊ ನೀ ಕರುಣ
ದುಷ್ಟಜನರ ಮಾಡಿದ್ಯೊ ನೀ ಮರ್ದನಿ
ದೃಷ್ಟಿಸಿ ಮಾಡುವೆ ಸಾಧು ಸಂರಕ್ಷಣೆ ೧

ಹುಟ್ಟಿ ವಸುದೇವನಲ್ಲಿ ಬಂದು ಹೊಳೆದ್ಯೊ
ದಿಟ್ಟತನದಲಿ ನಂದಗೋಕುಲದಿ ಬೆಳೆದ್ಯೊ
ಮೆಟ್ಟಿ ವಿಷದ ಹಾವಿನ ಹೆಡೆಯ ತುಳಿದ್ಯೊ
ಕುಟ್ಟಿ ಕಂಸಾಸುರನ ಪ್ರಾಣವೆಳೆದ್ಯೊ ೨

ಮೊಲಿಯನುಂಡು ಕೊಂಡಿ ಪೂತನಿ ಪ್ರಾಣ
ಕಾಲಿಲೊದ್ದು ಕೊಂದ್ಯೋ ಶಕಟಾಸುರನ
ಬಾಲತನದಲಿ ಕೆಡಹಿದ್ಯೊ ಮಾವನ
ನೆಲೆಯು ತಿಳಿಯದು ಇನ್ನೊಬ್ಬರಿಗೆ ಪೂರ್ಣ ೩

ತುರುಗಳ ಕಾಯ್ದ್ಯೊ ನೀ ಗೋವಿಂದ
ಬೆರಳೆಲೆತ್ತಿದ್ಯೊ ಹಿರಿಯ ಮುಕುಂದ
ಮರುಳು ಮಾಡಿದ್ಯೊ ಗೋಪಿಕೇರ ವೃಂದ
ಹರುಷಗೈಸಿದೆ ಅನೇಕ ಪರಿಯಿಂದ ೪

ಹಾಲು ಬೆಣ್ಣೆ ಕದ್ದು ತಿಂಬು ನಿನ್ನಾಟ
ಬಾಲಗೋಪಾಲರ ಕೂಡಿ ನಿನ್ನೂಟ
ಚಲುವ ನಾರೇರ ನೋಡುವ ನಿನ್ನೋಟ
ಒಲಿದು ಕುಬ್ಜಿಯ ಬೆನ್ನ ಮಾಡಿದ್ಯೊ ನೀಟ ೫

ಗುರುಮಗನ ತಂದುಕೊಟ್ಯೋ ನೀ ಪ್ರಾಣ
ಸುರಬ್ರಹ್ಮಾದಿಗಳರಿಯರು ನಿನ್ನ ತ್ರಾಣ
ಶರಣಾಗತರ ವಜ್ರಪಂಜರು ಪೂರ್ಣ
ವರಮುನಿಗಳಿಗಾಗಿಹೆ ನೀ ನಿಧಾನ ೬

ಒಲಿದು ಪಾಂಡವರಿ ಗಾದಿ ಸಹಕಾರಿ
ಬಲವ ಮುರಿದ್ಯೊ ನೀ ಕೌರವರ ಸಂಹಾರಿ
ಹಲವು ಪರಿ ಆಟ ನಿನ್ನದೊ ಶ್ರೀ ಹರಿ
ಸಲಹುತಿಹೆ ಮಹಿಪತಿಗನೇಕ ಪರಿ ೭

## ೫೮

ಕೃಷ್ಣ ಕೃಪಾಲ ಕರುಣಾದಾಯಕ ಕರುಣಾದಾಯಕ
ದುಷ್ಟಮರ್ದನ ಶಿಷ್ಟಜನಪಾಲಕ ಧ್ರುವ

ಮುಕುಂದ ಮಾಧವ ಮಧುಸೂದನ ಮಧುಸೂದನ
ಪಂಕಜನಾಭ ಪತಿತಪಾವನ
ಶಂಖಚಕ್ರಧರ ಸಂಕರುಷಣ ಸಂಕುರಷಣ
ರುಕ್ಮಿಣಿ ಪತಿ ರಾಜೀವನಯನ ೧

ಕಸ್ತೂರಿತಿಲಕ ಕೌಸ್ತುಭಭೂಷಣ ಕೌಸ್ತುಭಭೂಷಣ.
ಮಸ್ತಕ ಮುಗುಟ ಮದನಮೋಹನ
ಭಕ್ತವತ್ಸಲ ಹರಿ ನಾರಾಯಣ ನಾರಾಯಣ
ವಸ್ತುಪರಾತ್ಪರ ನಿಜನಿರ್ಗುಣ ೨

ಗರುಡಗಮನ ಉರಗಶಯನ ಉರಗಶಯನ
ಸುರಬ್ರಹ್ಮಾದಿ ವಂದಿತಚರಣ
ಕರುಣಾನಂದ ಪರಿಪೂರಣ ಪರಿಪೂರಣ
ತರಳ ಮಹಿಪತಿ ಜೀವಜೀವನ ೩

೫೯

ಕೃಷ್ಣಾ ಎಣಿಕ್ಯಾಕೈಯ್ಯ ನಮ್ಮ ಕೂಡ
ತುಟ್ಟಿ ಮಿಸುಕಬಾರದು ನೋಡಬ್ಯಾಡ
ಗುಟ್ಟು ಒಡೆದ ಮ್ಯಾಲುಳಿಯದು ಗೂಢ
ಇಷ್ಟರಮೇಲೆ ತಿಳಿಯದ ನಾ ಮೂಢ ೧

ಅಂದು ಏನಾಗಿತ್ತೈಯ್ಯ ನಿಮ್ಮ ಬುದ್ಧಿ
ಬಂದು ಗೊಲ್ಲರೊಡನೆ ಕೂಡ್ಯಾಕಿದ್ದಿ
ಸಂಧಿಸ್ಯವರುಚ್ಚಿಷ್ಟವೆಂದು ನೀ ಮೆದ್ದಿ
ಇಂದು ಬ್ಯಾರೆ ನೋಡಲಿಕ್ಕೆ ಮರದ ಸುದ್ದಿ ೨

ಕುಬ್ಜೆ ಕೂಡಿಕೊಂಬಾಗ ನೋಡಲಿಲ್ಲಿ
ನಿಜಪದಕ ಯೋಗ್ಯಳ ಮಾಡಲಿಲ್ಲಿ
ಅಜಮಿಳನೆಷ್ಟೆಂದು ಅರಿಯಲಿಲ್ಲಿ
ಸೋಜಿಗೆಲ್ಲಾನು ನಿಮ್ಮದು ನಾ ಬಲ್ಲೆ ೩

ಸುಮ್ಮನಿರಬೇಕೆನ್ನ ನೀ ಕೂಡಿಕೊಂಡು
ನಿಮ್ಮ ಮಾತು ಒಡಿಯದು ಉದ್ದಂಡು
ಇಮ್ಮನಾಗದಲ್ಲಿಂದ ಮನಗಂಡು
ಬ್ರಹ್ಮಾನಂದ ಕೊಂಡಾಡುವೆ ಘನನುಂಡು ೪

ಹಿಂದೆ ಭಕ್ತರೇನು ತಾಂ ಕೊಟ್ಟರಯ್ಯ
ಇಂದು ನಾ ಕೊಡುವದೇನು ಹೇಳಯ್ಯ
ಕಂದ ಮಹಿಪತಿ ನಾ ನಿಮ್ಮ ನಿಶ್ಚಯ
ಎಂದು ಬಿಡದೆ ಸಲಹೊ ನೀ ನಮ್ಮಯ್ಯ ೫

## ೬೦

ಕಂಡಿರ್‍ಯಾ ನೀವು ಕಂಡಿರ್‍ಯಾ ಮಂಡಲದೊಳು ನಿಜ ಕಂಡಿರ್‍ಯಾ ಧ್ರುವ

ಮಂಡೆಯ ಮರೆಯಲ್ಯ ಖಂಡವಾಗಿಹುದು ೧

ಪಿಂಡಬ್ರಹ್ಮಾಂಡಕೆ ಭೇದದೋರದಿದು ೨

ಹಿಂಡದೈವಕ ತಾಪ್ರಚಂಡನಾಗಿಹುದು ೩

ಕಂಡವರಾಶ್ರಯ ಪಂಡಿತರಿಗೆ ಪ್ರಿಯ ೪

ಕಂಡವರಕಂಡು ಕೂಡಿಕೊಂಬುದಿದು ೫

ನೋಡಿದವರ ಕೂಡ ನೋಟಮಾಳಾಹುದು ೬

ಮೂಢ ಮಹಿಪತಿ ಪ್ರಾಣದೊಡೆಯನಾಗಿಹ್ಯ ನಿಜ ೭

## ೬೧

ತಪ್ಪು ಕ್ಷಮೆ ಮಾಡೊ ಕೃಪೆಯಿಂದ ನೋಡೊ ಧ್ರುವ

ನೀನೆ ದಯಾನಿಧಿ ನಾನೆ ಅಪರಾಧಿ
ಖೂನ ದೋರು ಹಾದಿ ಸ್ಥಾನ ನಿಜಗಾದಿ ೧

ಅನಾಥನೆಂದು ನೋಡಿ ಸುನಾಥ ಎನ್ನ ಮಾಡಿ
ಸ್ವಾನಂದ ಸುಖ ನೀಡಿ ಮನ್ನಾಥ ನಿಜಗೂಡಿ ೨

ಹೇಳಲಾರೆ ಬಹಳ ಕೇಳೋ ನೀ ದಯಾಳ
ತಾಳಿ ಎನ್ನ ತೋಳ ಬಾಳ ವಿಶ್ವಪಾಲ ೩

ಸೇವೆ ಇದೆ ನಮ್ಮ ಭಾವಿಸುದು ನಿಮ್ಮ
ಪಾವನಗೈಸು ವರ್ಮ ಸುವಿದ್ಯ ಪರಬ್ರಹ್ಮ ೪

ಬಂದ ಮ್ಯಾಲೆ ಶರಣಕುಂದಬ್ಯಾಕೊ ಪೂರ್ಣ
ಕಂದ ಮಹಿಪತಿ ಗುಣ ಚಂದಮಾಡೊ ಕರುಣ ೫

## ೬೨

ತಪ್ಪು ನೋಡುವರೇನೋ ಕೃಪಾಸಿಂಧು ಶ್ರೀಗುರು
ಒಪ್ಪಿಸಿಕೊಂಡರೆ ತಪ್ಪಾರಿಸುವರೆ ಧ್ರುವ

ಒಡಲಹೊಕ್ಕವರವಗುಣವ ನೋಡುವರೇನೊ
ಒಡಿಯನೆಂದವರ ತಾ ಕೈಯ್ಯ ಬಿಡುವರೆ
ಮಡದಿ ಮಕ್ಕಳೆನಿಸಿ ಕಡೆಗಣ್ಣ ನೋಡುವರೆ
ಒಡುಹುಟ್ಟಿದವರಿಗೆರಡ ಬಗೆವರೇನಯ್ಯ ೧

ಬಡವರ ಮಕ್ಕಳ ಮಡುವಿನೊಳು ಧುಮುಕಿಸಿ
ಕಡಿಯಲಿದ್ದು ನೆಲೆ ನೋಡುವರೇನಯ್ಯ
ಕುಡಗೋಲ ಕುಂಬಳ ಕೊಟ್ಟವರ ಕೈಯ್ಯ
ಒಡನೆ ಹೋಳುವದುಚಿತವೇನಯ್ಯ ೨

ಬಡವನಾಧಾರಿ ಎಂದು ನಾ ನಿಮ್ಮ
ಪೊಡವಿಯೊಳು ಶ್ರೀಪಾದ ದೃಢದಲಿ
ನೋಡು ಕರುಣಾಲೆನ್ನ ನೀಡಿ ಅಭಯ ಹಸ್ತದಿ
ಮೂಢ ಮಹಿಪತಿಗೆ ಕಡೆಗಾಣಿಸುವುದೈಯ್ಯ ೩

## ೬೩

ತಲೆ ಬೆಳಗಾಯಿತು ತಲೆ ಬೆಳಗಾಯಿತು
ಎನ್ನ ಬೆಳಗದೊಳು ಕೂಡಿ ಧ್ರುವ

ಹಿಂದೆ ಗೋವಿಂದನು ಮುಂದೆ ಮುಕುಂದನು
ಅಂದಿಗಿಂದಿಗೆ ಅನಿರುದ್ಧ
ತಂದೆ ತಾಯಿಯ ವೃಂದಾವನ ಪತಿಯು
ಮಂದರಧರ ಬಂಧು ಬಳಗ ೧

ಕುಂದ ನೋಡದೆ ಸಲಹುವ ಸಂಕರುಷಣಾ
ನಂದ ಮೂರುತಿ ತ್ರಿ ವಿಕ್ರಮನ
ಬಂದ ದುರಿತ ದೂರಮಾಡಿ ದಾಮೋದರ
ಚಂದ ಮಾಡುವ ಜನಾರ್ದನನು ೨

ಎಡಕ ಯಾದವ ನಾರಾಯಣ ಕೃಷ್ಣನು
ಬಲಕ ಬಾಲಮುಕುಂದ
ಎತ್ತ ನೋಡಿದರತ್ತ ಸುತ್ತ ಪುರುಷೋತ್ತಮ
ಚಿತ್ತ ಮನದೊಳು ಅಚ್ಯುತನು ೩

ಪ್ರಾಣಪತಿಕರಿಸಿಹ್ಯ ಪ್ರದ್ಯುಮ್ನ
ಆಭಯನಿತ್ತಿಹ ಪದ್ಮನಾಭ
ಸದಮಲ ಸುಖ ಮಾಧವ ಮಧುಸೂದನ
ಯದು ಕುಲೋತ್ತಮ ಶ್ರೀಧರನು ೪

ಅಷ್ಟದಿಕ್ಕಿನೊಳು ತುಂಬಿ ಹೃಷಿಕೇಶ
ದೃಷ್ಟಿಮೂರುತಿ ನರಸಿಂಹ
ದೃಷ್ಟಿಯೊಳಗೆ ಹರಿ ವಿಷ್ಣು ವಾಸುದೇವ
ಸೃಷ್ಟೇಶ ಗುರು ಕೇಶವನು ೫

ಲಕ್ಷ್ಮಿಯೊಳಗೆ ಗುರು ಲಕ್ಷುಮಿಕಾಂತನು
ರಕ್ಷಿಸುವ ಅಭೋಕ್ಷಜನು
ಉಪೇಕ್ಷವಿಲ್ಲದೆ ಹೊರೆವ ಉಪೇಂದ್ರನು
ಸಾಕ್ಷಾತ ಮೂರ್ತಿ ವಾಮನನು ೬

ತುಂಬಿದ ಬಳಗವು ಕಂಡ ಮೇದಿನಿಯೊಳು
ಕಂದ ಮಹಿಪತಿ ಸ್ತುತಿಸಿದನು
ಬಂದ ಜನ್ಮವು ಕಡೆ ಆಯಿತೆಂದು
ಮನದೊಳು ತ್ರಾಹಿ ತ್ರಾಹಿ ಎಂದ ೭

## ೬೪

ದಾಸನಾದೆನಯ್ಯ ನಿಮ್ಮ ಏಸು ಜನ್ಮಕೆ
ವಾಸನೆ ಪರಿದ್ಯೋ ಶ್ರೀ ಹರಿ ಎನ್ನ ಜೀವಕೆ ಧ್ರುವ

ಒಂದು ಮೊದಲಿಗಲ್ಲದೆ ಅನೇಕ ಜನ್ಮ ಜನಿಸಿ ಬಂದು
ನೊಂದು ಬೆಂದು ಕಂದಿ ಕಳದೆನಯ್ಯ ಭಕ್ತ ವತ್ಸಲ ೧

ವರ್ಮ ತಿಳಿಯಗೊಡದೆ ಎನ್ನ ಕರ್ಮಪಾಶ ಕಟ್ಟಿ ಕೊರಳ
ನಿರ್ಮಿಸಿ ನಿರ್ಮಿಸಿ ತಂದ್ಯೊ ನಿರ್ಮಳಾನಂತಾತ್ಮನೆ ೨

ತಪ್ಪಿಲ್ಲದೆ ತೆಪ್ಪು ಹೊರಸಿ ಕೊಂಡಾಡಿದಯ್ಯ
ಒಪ್ಪು ನಿಮಗಿದು ಕಪಟನಾಟಕ ಶ್ರೀ ಕೃಷ್ಣನೆ ೩

ಎನ್ನ ಹೃದಯದೊಳಗಿದ್ದು ಭಿನ್ನಭೇದ ಮಾಡಿದ್ಯೆಯ್ಯ
ಇನ್ನಾರ ಮುಂದುಸುರಲಾಗದೊ ಶ್ರೀ ಕಾಂತನೆ ೪

ಹೆಜ್ಜೆವಿಡಿದು ಬಂದ ನಿಜ ದಾಸ ಮಹಿಪತಿಗಿನ್ನು
ಸಜ್ಜನರಿಗೀವ ಪದವ ಕೊಟ್ಟು ಕಾಯೊ ಕರುಣನೆ ೫

**೬೫**

ದೀನ ದಯಾಳು ನೀನೆವೆ ನಮ್ಮ ಅನಾಥನಾಥಾ
ನಂದೊ ಬ್ರಹ್ಮನಂತುಗಾಣನುಪಮ ಧ್ರುವ

ಪರಮಾನಂದ ಪರಮ ಪಾವನ
ಶರಣ ಜನರಾಭರಣಾಗಿ ಹ್ಯ
ಕರುಣ ಸಾಗರ ಪೂರ್ಣನೆ ೧

ಅವ್ಯಕ್ತನಹುದೊ ವಿರಕ್ತ
ಶಕ್ತನಹುದೊ ಭಕ್ತವತ್ಸಲ
ಭೋಕ್ತರ ಮುಕ್ತಿದಾಯಕ ೨

ಭೇದಾತೀತ ಸದೋದಿತ ಪೂರ್ಣ
ಸಾಧುಹೃದಯನಿವೇದ ಪೂಜಿತ
ಅದಿದೇವ ಸದಾತ್ಮನೆ ೩

ವರ ಮುನಿಗಳ ಹರುಷವುದಯ
ತರಳ ಮಹಿಪತಿಯ ಹೊರೆವ
ಅನುದಿನ ಹರಿಯು ಪರಮ ದಯಾನಿಧೆ ೪

**೬೬**

ದೀನ ಬಂಧು ದೀನ ದಯಾಳ
ದೀನಾನಾಥ ನೀನೆವೆ ಕೃಪಾಲ ಧ್ರುವ

ಮನೋಹರ ಮಾಡುವ ನೀನೆ ಸಹಕಾರಿ
ಅನುದಿನ ಲೆವಕಲ (?) ನೀನೆ ಮುರಾರಿ ೧

ಅನೇಕಾಯಲಿ (?) ಪರಿ ನೀನೆ ಉದಾರಿ
ಅನಾಥರಿಗೊಲುವ ನೀನೆ ಶ್ರೀ ಹರಿ ೨

ಪತಿತಪಾವನ ಪೂರ್ಣ ನೀನೆ ನಿಶ್ಚಯ
ಹಿತದಾಯಕ ನೀನಹುದೊ ಮಹಿಪತಿಯ ೩

## ೬೭

ದೀನ ಬಂಧು ದೀನ ದಯಾಳ
ನೀನೆ ಪಾಲಿಸೊ ಘನ ಗುರು ಕೃಪಾಲ ಧ್ರುವ

ಪತಿತ ಪಾವನ ಸ್ವಾಮಿ ಯತಿ ಜನಪ್ರಿಯ
ಅತಿಶಯಾನಂದ ಸತತ ನಮ್ಮಯ್ಯ ೧

ಅನಾಥನಾಥ ಮನ್ನಾಥ ಶಾಶ್ವತ
ಸನಾಥ ಮಾಡೊ ಘನ ಸದೋದಿತ ೨

ದಾಸ ಮಹಿಪತಿ ಸ್ವಾಮಿ ಸಕಲಂತ್ರಯಾಮಿ
ಲೇಸು ಲೇಸಾಗಿ ಹೊರಿಯೊ ಭಕ್ತ ಪ್ರೇಮಿ ೩

## ೬೮

ದೇವನಹುದೊ ದೇವಾಧಿದೇವ
ಕಾವಕರುಣ ಶ್ರೀ ವಾಸುದೇವ
ಭಾವಿಕರಿಗೆ ಜೀವಕೆ ಜೀವ ಧ್ರುವ

ಸಾಮಜಪ್ರಿಯ ಸುರಲೋಕಪಾಲ
ಕಾಮಪೂರಿತ ನೀ ಸಿರಿಸಖಲೋಲ
ಸಾಮಗಾಯನಪ್ರಿಯ ಸದೋದಿತ
ಸ್ವಾಮಿನಹುದೊ ನೀನೆವೆ ಗೋಪಾಲ ೧

ಅಕ್ಷಯ ಪದ ಅವಿನಾಶ ಪೂರ್ಣ
ಪಕ್ಷಿವಾಹನ ಉರಗಶಯನ
ಪಕ್ಷಪಾಂಡವಹುದೊ ಪರಿಪೂರ್ಣ
ಲಕ್ಷುಮಿಗೆ ನೀ ಜೀವನಪ್ರಾಣ ೨

ದಾತನಹುದೊ ದೀನದಯಾಳ
ಶಕ್ತಸಮರ್ಥ ನೀನೆ ಕೃಪಾಲ
ಭಕ್ತವತ್ಸಲನಹುದೊ ಮಹಿಪತಿ ಸ್ವಾಮಿ
ಪತಿತಪಾವನ ನೀನವೆ ಅಚಲ ೩

## ೬೯

ದೇವ ನೀನಹುದ್ಯೆ ಭುವನತ್ರಯದ ಜೀವ
ಭಾವಿಕರಿಗೆ ಕಾವ ಶ್ರೀ ವಾಸುದೇವ ಧ್ರುವ

ದೇವಕಿಯ ಕಂದ ದೈತ್ಯಾರಿ ಶ್ರೀ ಗೋವಿಂದ
ಮಾವ ಕಂಸನ ಕೊಂದ ಮಾಧವ ಮುಕುಂದ ೧

ಮದನ ಮೋಹನಮೂರ್ತಿ ಯದುಕುಲೋದ್ಭವ ಕೀರ್ತಿ
ಆದಿ ಪಾಂಡವ ಸಾರ್ಥಿ ಬುಧಜನರ ಸ್ಫೂರ್ತಿ ೨

ಶರಣ ಜನರಾಭಣ ಸಿರಿಲೋಲನೆ ಪೂರ್ಣ
ತರಳ ಮಹಿಪತಿಸ್ವಾಮಿ ಘನಕರಣ ೩

## ೭೦

ದೇವಾಧಿ ದೇವನೀತ ಜೀವ ಪ್ರಾಣನಾಥ
ಕಾವ ಕರುಣನೀತ ಹಂಸನಾಥ ೧

ದೇಶಿಕರ ದೇವ ಭಾಸಿ ಪಾಲಿಸುವ
ವಾಸನೆ ಪೂರಿಸುವ ವಾಸುದೇವ ೨

ಸ್ಮರಿಸುವರ ಜೀವ ಹರಿ ಪರಂ ದೈವ
ಪರಮ ಭಕ್ತರಿಗೀವ ಹರುಷವ ೩

ಸಾಧು ಹೃದಯವಾಸ ಸದಮಲಾನಂದ ಘೋಷ
ಸದೋದಿತ ಪ್ರಕಾಶ ಯಾದವೇಶ ೪

ಇಹಪರ ಸಾಧ್ಯನೀತ ಬಾಹ್ಯಾಂತ್ರ ಸದೋದಿತ
ಮಹಿಪತಿ ಪ್ರಾಣನಾಥ ಅವಧೂತ ೫

## ೭೧

ದೇವಾಧಿದೇವನೀತನೆ ಸಾಕ್ಷಾತ ಕಾವ ಕರುಣ ಗುರುನಾಥ ಧ್ರುವ

ಈತ ತ್ರಿಗುಣಾತೀತ ಪಿತಾಮಹನು ಪಿತ ದಾತ
ಸುರಲೋಕನಾಥ
ಶ್ರುತಿಸ್ಮೃತಿ ಸನ್ಮತ ಯತಿಜನವಂದಿತ ಪತಿತಪಾವನನಹುದೀತ ೧

ಚಿನ್ಮಯ ಚಿದ್ರೂಪ ಜನವನದೊಳಗಿರ್ಪ
ಆನಂದೊ ಬ್ರಹ್ಮಸ್ವರೂಪ
ಮುನಿಜನ ಪಾಲಿಪ ಘನ ಕರುಣಾಕೃಪ
ಅನುದಿನ ಭಯಪಾಲಿಸ ೨

ಗುಹ್ಯಗುಪಿತನೀತ ಮಹಿಮಾನಂದ
ಶ್ರೀನಾಥ ಮಹಾಮಹಿಮರ
ಸ್ವಹಿತ ಸಾಧ್ಯ ಸದೋದಿತ ಬಾಹ್ಯಂತ್ರ ಸಾಕ್ಷಾತ
ಮಹಿಪತಿಗುರು ಪ್ರಾಣನಾಥ ೩

## ೭೨

ದೇವಾಧಿದೇವ ನೀನಹುದು ಸಾಕ್ಷಾತ
ಭಾವಿಸುವರಾತ್ಮ ಭಜಕರ ಪ್ರಾಣದಾತ ಧ್ರುವ

ನಿಜ ನಿರ್ವಿಕಾರ ಸುಜನ ಮನೋಹರ
ಮೂಜಗ ಆಧಾರ ಭಜಕ ಭಯಹರ ೧

ಕರುಣಸಾಗರ ಪರಮ ಉದಾರ
ಸುರಜನ ಸಹಕಾರ ದುರಿತ ಸಂಹಾರ ೨

ಬಾಹ್ಯಂತ್ರಲಿಪ್ಪ ಇಹಪರ ಕಾವ
ಮಹಿಪತಿಯ ರಕ್ಷಿಸುವ ಶ್ರೀ ದೇವ ದೇವ ೩

## ೭೩

ದೇವಾಧಿದೇವ ನೀನಹುದೊ ಶ್ರೀಹರಿ
ಕಾವಕರುಣ ನೀನೆ ಮುರಾರಿ ಧ್ರುವ

ಕಮಲಭವಾರ್ಜಿತ ಕಾರುಣ್ಯ ಶೀಲ
ವಿಮಲ ವಿರಾಜಿತ ಮದನಗೋಪಾಲ ೧

ಕನಕಾಂಬರಧರ ಕಸ್ತೂರಿತಿಲಕ
ಸನಕಾದಿವಂದ್ಯ ಶರಣ ರಕ್ಷಕ ೨

ಅಮಿತ ಪರಾಕ್ರಮ ಅಗಣಿತ ಮಹಿಮ
ಅವರುಜ ನೇತ್ರ ನೀನಹುದೊ ನಿಸ್ಸೀಮ ೩

ಮುನಿಜನ ಪಾಲಕ ಮಾಮನೋಹರ
ಘನಸುಖದಾಯಕ ಸು ಜನ ಸಹಕಾರ ೪

ಭಾನುಕೋಟಿತೇಜ ನೀನೆ ಸುಹೃದಯ
ದೀನದಯಾಳು ನೀನಹುದೊ ಮಹಿಪತಿಯ ೫

## ೭೪

ದೇಶಿಕರಿಗೆ ದೇವ ನೀನಹುದಯ್ಯ
ಲೇಸು ಲೇಸಾಗಿ ಪಾಲಿಸೊ ಎನ್ನಯ್ಯ ಧ್ರುವ

ಅನಾಥನಾಥ ನೀನೆ ಸಾನುಕೂಲ
ಅನುದಿನ ಮಾಡುವೆ ನೀ ಪ್ರತಿಪಾಲ ೧

ಅಣುರೇಣುಕ ಸಾಹ್ಯ ಮಾಡುವ ಸ್ವಾಮಿ
ನ್ಯೂನ ನೋಡದೆ ತಪ್ಪು ಮಾಡುವಿ ಕ್ಷಮೆ ೨

ನೀನೆ ಸಕಲಕೆಲ್ಲ ಸಲಹುವ ದಾತ
ಜನವನದೊಳು ಘನಗುರು ಸಾಕ್ಷಾತ ೩

ದೇವಾದೀದೇವ ಶ್ರೀದೇವ ಅವಧೂತ
ಭವ ಹರ ಗುರು ನೀನೆ ಸದೋದಿತ ೪

ದೀನಮಹಿಪತಿ ಸ್ವಾಮ್ಯಹುದೋ ಕೃಪಾಲ
ಭಾನುಕೋಟಿತೇಜ ನೀನೆ ಅಚಲ ೫

## ೭೫

ಧರ್ಮ ದೊಡ್ಡದಯ್ಯ ನಿಮ್ಮ ಸ್ವಾಮಿ ಸದ್ಗುರುರಾಯ
ಬ್ರಹ್ಮಾನಂದ ವಸ್ತು ನೀನೆ ಸಮಸ್ತ ಜನಪ್ರಿಯ ಧ್ರುವ

ಮೊರೆಯನಿಟ್ಟ ಧ್ರುವಗೆ ನೀನು ಕೊಟ್ಟ್ಯೋ ಪದ ಆಢಳ
ಕರಿಯ ಮೊರೆಯ ಕೇಳಿ ನೀನು ಸೆರಿಯ ಬಿಡಿಸಿದ್ಯೊ ದಯಾಳು
ಶರಣು ಹೊಕ್ಕ ತರಳಗಿನ್ನು ಪಡದ್ಯೊ ಪ್ರಾಣ ನಿಶ್ಚಳ
ಸ್ಮರಣೆಗೊದಗಿ ಬಂದ್ಯೊ ಪಾಂಡವರಿಗೆ ತಾತ್ಕಾಳ ೧

ಮೊರೆಯನಿಟ್ಟ ದ್ರೌಪದಿಗೆ ವಸ್ತ್ರ ಪೂರಿಸಿದ್ಯೊ ಪೂರ್ಣ
ಧರೆಯೊಳು ಶಿಲೆಯಾಗಿದ್ದ ಸತಿಗೆ ಮಾಡಿದ್ಯೊ ಉದ್ಧರಣ
ಪರಿ ಪರಿ ಹೊರೆವ ಪೂರ್ಣ ಭಕ್ತರ ಪ್ರಾಣ
ವರ್ಣಿಸಲಾಗದೊ ನಿಮ್ಮ ದಯವೃತ್ತಿ ನಿಜಗುಣ ೨

ದೇಶಿಕರ ದೇವ ನೀನೆ ವಾಸುದೇವ ನಿಶ್ಚಯ
ಭಾಸ್ಕರ ಕೋಟಿ ತೇಜ ಭಾಸುತಿಹ ನಿಮ್ಮ ದಯ
ಲೇಸಾಗಿ ಪಾಲಿಸೊ ಪೂರ್ಣ ದಾಸ ಮಹಿಪತಿಯ
ವಿಶ್ವದೊಳಾನಂದದಿಂದ ರಕ್ಷಿಸುವ ನಿಮ್ಮ ಭಯ ೩

## ೭೬

ನಡಿ ನೋಡುವ ಮನವೆ ಹರಿಯ ಧ್ರುವ

ಬೇಡಿಕೊಂಬುವೆ ಜೀವದ ಧೊರಿಯ
ಕೂಡಿಕೊಂಬುವ ಪ್ರಾಣದ ಸಿರಿಯ ೧

ಇಡಾಪಿಂಗಳ ಮಧ್ಯ ನಡುವ
ಜಾಡೆ ಪಿಡಿದು ಕೂಡಿಕೊಂಬುವ ೨

ದೃಢ ಪಿಡಿದು ಷಡಚಕ್ರ ಸೋಪಾನವೇರಿ
ಗೂಢವಾಗಿ ಹ್ಯ ನಿಜನೋಡುವ ೩

ಬ್ರಹ್ಮಾನಂದ ಸುಖಸಾಮ್ರಾಜ್ಯವಾಗಿಹ್ಯ
ನಿರ್ಮನದಲಿ ಬೆರೆದಾಡುವ ೪

ಸಹಸ್ರದಳದಲಿ ಹ್ಯ ಮಹಿಪತಿಸ್ವಾಮಿಯ
ಸೋಹ್ಯ ತಿಳಿದು ಸುಖದಲಿರುವ ೫

## ೭೭

ನಡಿರೆ ನಡಿರೆ ನೋಡುವ ಶ್ರೀ ಕೃಷ್ಣನ
ನಡಿರೆ ನಡಿರೆ ನೋಡುವ ಧ್ರುವ

ನಡಿರೆ ನೋಡುವ ಬನ್ನಿ ತುಡುಗ ಶ್ರೀ ಕೃಷ್ಣನ
ಅಡಿಗಳಾಶ್ರೀಯ ಹಿಡುವ ಮಂಡಲದೊಳು ೧

ತುಡಗತನದಿ ಬಂದು ಕದಿವ ಬೆಣ್ಣೆಯ ಮೆದ್ದು
ಒಡನೆ ಗೋಪೆರ ಕಾಡಿದ ನೋಡಮ್ಮ ೨

ಬಿಡದೆ ಕಾಳಿಂಗನ ಹೆಡೆಯ ಮೆಟ್ಟಿದ ನೋಡಿ
ತಡಿಯದೆ ಧುಮುಕಿದ ಮಡುವಿನೊಳು ೩

ಕ್ರೀಡಿಸಿ ಗೋಪೆರ ಉಡಿಗಿ ಸೆಳೆದುಕೊಂಡು
ಒಡನೆ ಗಿಡನೇರಿದ ನೋಡಮ್ಮ ೪

ಮಾಡದ ಮಾಡಿ ತಾ ಬಿಡದೆ ಬೇಡಿಸಿಕೊಂಡು
ಒಡನೆ ಉಡಿಗಿ ನೀಡಿದ ನೋಡಮ್ಮ ೫

ಬಡವರಿಗಳವಲ್ಲ ಪೊಡವಿಯೊಳಗಿದು
ಆಡಿದಾನಂದದಾಟ ನೋಡಮ್ಮ ೬

ಹಿಡಿಯ ಹೋಗಲು ಮೂಢ ಮಹಿಪತಿಯ ನೋಡಿ
ಒಡಲ ಹೊಕ್ಕು ಕೂಡಿದ ಒಡಿಯನಮ್ಮ ೭

## ೭೮

ನಮ್ಮ ಕುಲದೈವೀತ ಬೊಮ್ಮನ ಪಡೆದಾತ
ಸಾಮಗಾಯನ ಪ್ರೀತ ಸ್ವಾಮಿನೀತ ಧ್ರುವ

ವೇದ ಉದ್ಧರನೀತ ಮೇದಿನಿಯ ಪೊತ್ತಾತ
ಸಾಧುಜನ ವಂದಿತ ಸದ್ವಸ್ತುನೀತ ೧

ಧಾರುಣಿಯ ಗೆದ್ದಾತ ತರಳಗೊಲಿದಹನೀತ
ವರಮುನಿಗಳ ದಾತ ಕರುಣಿ ಈತ ೨

ಮೂರು ಪಾದಳಿದಾತ ಪರಶುಧರನಹುದೀತ
ಸುರಜನರ ಪೂಜಿತ ಸರ್ವೋತ್ತಮನೀತ ೩

ಪವನಸುತಗೊಲಿದಾತ ಮಾವನ ಮಡುಹಿದಾತ
ಭುವನತ್ರಯಲೀತ ದೇವನೀತ ೪

ಬೆತ್ತಲೆಯು ಸುಳಿದಾತ ಉತ್ತಮ ಹಯವನೇರಿದಾತ
ಭಕ್ತರಿಗೆ ಹೊರೆವಾತ ಶಕ್ತನೀತ ೫

ಅಣುರೇಣುದೊಳೀತ ಅನುಕೂಲವಾದಾತ
ಆನಂದೋ ಬ್ರಹ್ಮ ಅನಂತನೀತ ೬

ಮಹಾಮಹಿಮನಹುದೀತ ಬಾಹ್ಯಾಂತ್ರಪೂರಿತ
ಮಹಿಪತಿಯ ಸಾಕ್ಷಾತ ವಸ್ತುನೀತ ೭

## ೭೯

ನಮ್ಮ ದೈವ ದೇವನೀತನು ಧ್ರುವ

ನಮ್ಮ ದೈವ ದೇವನೀತ ನಮ್ಮ ಜೀವ ಪ್ರಾಣದಾತ
ನಮ್ಮ ಕಾವ ಕರುಣ ಶ್ರೀದೇವನೀತ ನೋಡಿರೊ ೧

ನಿರ್ವಿಕಲ್ಪ ನಿರ್ಗುಣೀತ ನಿರ್ವಿಕಾರ ನಿಷ್ಪತೀತ
ನಿರ್ವಿಶೇಷನಾದ ನಿರಾಳನೀತ ನೋಡಿರೊ ೨

ನಿತ್ಯ ಏಕಶ್ಯಾಂತನೀತ ನಿತ್ಯನಿರಂಜನೀತ
ನಿತ್ಯನಿಜ ಮಹಿಪತಿಯ ವಸ್ತುಗತಿಯ ನೋಡಿರೊ ೩

## ೮೦

ನಮ್ಮಪ್ಪನ ಕಂಡೆ ಅಪಾರ ಮಹಿಮೆಯುಳ್ಳನ ಧ್ರುವ

ಅಪ್ಪನ ಕಂಡೆನಗೆ ತಾ ಅಪಾರ ಸಂತೋಷವಾಯಿತು
ಅಪ್ಪಿಕೊಂಬ್ಹಾಗೆ ಎನಗೆ ಅರ್ಪಿಸಿ ಪ್ರಾಣವ ೧

ತುಂಬಿ ತುಳುಕಿತಾನಂದ ಗುಂಭಗುರುತ ಕಂಡಿನ್ನು
ಕುಂಭಿನಿಯೊಳಗೆ ಪೂರ್ಣ ಅಂಬುಜಾಕ್ಷನ ೨

ಗುಪ್ತಲಿದ್ದ ಧನ ತಾ ಪ್ರಾಪ್ತ ವ್ಯಾನಂತವಾಯಿತು
ತಪ್ಪದೆ ಮಹಿಪತಿಗೆ ತೃಪ್ತಿ ಹೊಂದಿತು ೩

## ೮೧

ನಮ್ಮಮ್ಮನ ಕಂಡೆ ಬೊಮ್ಮನ ಪಡೆದಿಹಳ ಧ್ರುವ

ಅಮ್ಮನ ಕಂಡೆನಗೆ ಸುಅಮೃತ ಪಾನವಾಯಿತು
ಸಂಭ್ರಮದಿಂದಲೆನಗೆ ಬ್ರಹ್ಮಾಂಡದೊಳು ೧

ಅಹ್ಲಾದವಾಯಿತಿಂದು ಫುಲ್ಲಲೋಚನೆಯ ಕಂಡು
ಉಲ್ಲಾಸ ತುಂಬಿತೆನಗೆ ಮೂಲೋಕದೊಳು ೨

ಮಾತೃ ಪಿತೃವೆಂಬುದು ಸೂತ್ರಧಾರಿ ತಾನೊಬ್ಬಳೆ
ಅಂತ್ರ ಬಾಹ್ಯದಲೆನಗೆ ಪುತ್ರ ಮಹಿಪತಿಗೆ ೩

## ೮೨

ನಾರಾಯಣ ನರಹರಿ ನಾರದಪ್ರಿಯ
ನರಸುರಮುನಿ ವರದಾಯಕ ಧ್ರುವ

ವೇದ ಕದ್ದೊಯ್ದವನ ಮರ್ದಿಸಲಿಕ್ಕೆ
ಸಾಧಿಸಿ ಬಂದ್ಯೊ ಮಚ್ಛರೂಪನೆ

ಮಾಧವ ನೀ ಬಂದು ಕೂರ್ಮನಾಗಿ ನಿಂದು
ಮೇದಿನಿಯ ಭಾರವ ತಾಳಿದೆ ೧

ಧರೆಯ ಕದ್ದಸುರನ ಕೋರದಾಡಿಂದ ಸೀಳಿ
ವರಾಹರೂಪಬಂದು ದೋರಿದೆ
ಹಿರಣ್ಯಕಶ್ಯಪ ವಿದಾರಣ ಮಾಡಿ ನೀ
ತರಳ ಪ್ರಲ್ಹಾದನ ರಕ್ಷಿಸಿದೆ ೨

ಬ್ರಾಹ್ಮಣನಾಗಿ ಬಂದು ಬಲಿಯ ಮನೆಯ ಮುಂದೆ
ವಾಮನ ರೂಪವದೋರಿದೆ
ನೇಮದಿಂದಲಿ ಪಿತನಾಜ್ಞೆಯ ನಡೆಸಲು
ಸ್ವಾಮಿ ಭಾರ್ಗವರೂಪ ತಾಳಿದೆ ೩

ದೇವತೆಗಳ ಸ್ಥಾಪಿಸಲಿಕ್ಕೆ ಬಂದು ದೈತ್ಯ
ರಾವಣನ ಕೊಂದ್ಯೊ ಶ್ರೀರಾಮ ನೀ
ದೇವಕಿ ಉದರದಲಿ ಜನಿಸಿ ಬಂದು ಕೃಷ್ಣ
ಗೋವಳರನ್ನು ಪ್ರತಿಪಾಲಿಸಿದೆ ೪

ಪತಿವ್ರತೆಗಳ ವ್ರತ ಅಳಿಯಲಿಕ್ಕಾಗಿ ಬಂದು
ಸುಳಹುದೋರಿದೂ ಬೌದ್ಧ್ಯರೂಪನೆ
ಹತ್ತಿ ಕುದರಿಯ ಒತ್ತಿ ಆಳಲಿಕ್ಕೆ
ಮತ್ತೆ ಬಂದೆಯ ಕಲ್ಕಿರೂಪನೆ ೫

ಹತ್ತವತಾರ ಧರಿಸಿ ಬಂದು ಕ್ಷಿತಿಯೊಳು
ಪತಿತರ ಪಾವನಗೈಸಿದೆ
ಭಕ್ತಜನರುದ್ಧರಿಸಲಿಕ್ಕೆ ಬಂದು
ಶಕ್ತಿಪರಾಕ್ರಮದೋರಿದೆ ೬

ಸಾವಿರ ನಾಮದೊಡೆಯ ಸ್ವಾಮಿ ನೀ ಬಂದು
ಭಾವಿಸುವರೊಡನೆ ಕೂಡಿದೆ
ಭವಭಂಧನ ತಾರಿಸಿ ಮಹಿಪತಿಯ ಪ್ರಾಣ
ಪಾವನ ನೀ ಮಾಡಿದೆ ೭

## ೮೩

ನಿಗಮ ಗೋಚರಾನಂತ ಮಹಿಮ ಶ್ರೀದೇವ
ಸಗುಣ ನಿರ್ಗುಣನಾಗಿ ತೋರುವ
ಸುಗಮಲಿಹ್ಯ ಸುಖದಾಯಕ ಧ್ರುವ

ಅಗಣಿತ ಗುಣಗಮ್ಯನುಪಮ ಶ್ರೀನಾಥ
ನಿಗಮ ತಂದು ನೀ ಪ್ರಕಟದೋರಿದೆ ನಗವು ಬೆನ್ನಿಲಿ ತಾಳಿದೆ
ಮಗುಟ ಮಣಿ ಮುಕುಂದ ಮಾಧವ
ಶ್ರೀ ಕಾಂತ ಜಗವನುಳಹಿದೆ
ನೆಗಹಿದಾಡಿಲೆ ಭಗತಗೊಲಿದು ನೀ ಕಾಯಿದೆ ೧

ಹರಿ ಸರ್ವೋತ್ತಮ ಪರಮಪುರಷ ಶ್ರೀ ವೇಷ
ಧರಿ ಮೂರಡಿ ಮಾಡಿದೆ ನೀ ಪರಶುಧರನಾಗ್ಯಾಡಿದೆ
ಪರಿಪರ್‍ಯಾಡುವಾ ನಂದಸ್ವರೂಪ ಶ್ರೀಧರ
ಶರಣ ರಕ್ಷಕನಾಗಿ ನೇಮದಿ ತುರುಗಳನ ನೀ ಕಾಯಿದೆ ೨

ಕರುಣಸಾಗರ ಸಾಮಜ ಪ್ರಿಯ ಶ್ರೀನಿಧೆ
ಬರಿಯ ಬತ್ತಲೆಯಾಗಿ ಸುಳಿದು ನೀ ಏರಿ
ಹಯವನು ತೋರುವೆ
ಸರಸಿಜೋದ್ಭವನುತ ಸಿರಿಲೋಲ ಎನ್ನಯ
ತರಳ ಮಹಿಪತಿ ಹೊರಿಯೊ ಅನುದಿನ
ಸೂರ್ಯಕೋಟಿ ಪ್ರಕಾಶನೆ ೩

## ೮೪

ನಿಗಮನುಳುಹಿಸಿ ನಗನೆಗದಿಹಗೆ
ಜಗದೋದ್ಧಾರ ಸುಭಗತ ಪ್ರಿಯಗೆ
ಸುಗಮ ಧರಿ ಮೂರಡಿಯ ಮಾಡಿ ಸುಗೊಡಲ ಪಿಡಿದಿಹಗೆ
ಬಗೆದು ಜಲಧಿಲಿ ಸೇತು ಗಟ್ಟಿದ
ಖಗವಾಹನ ಯದುಕುಲ ಲಲಾಮಗೆ
ಜಗಮೋಹಿಸುವ ಬೌದ್ಧಕಲ್ಕಿಗೆ ಶರಣು ಸುಶರಣು ೧

ಸಿರಿಯನಾಳುವ ದೊರಿಯೆ ನಿನ್ನ
ಮರೆಯ ಹೊಕ್ಕಿಹ ಚರಣಕಮಲ
ಸರಿಯ ಬಂದ್ಹಾಂಗೆನ್ನ ಹೊರವದು ನಿನ್ನ ದಯ ಘನವು
ಬಿರುದು ನಿನ್ನದು ಸಾರುತಿಹುದು
ಕರಿಯ ವರದಾನಂದ ಮೂರುತಿ
ಸುರಿಸಿ ಕರುಣಾಮೃತವುಗರೆವುದು ತರಳ ಮಹಿಪತಿಗೆ ೨

ಮನದ ಮಂಗಳ ಮೂರ್ತಿ ಸದ್ಗುರು
ನೆನೆವರನುದಿನ ಸಾರ್ಥ ಸದ್ಗುರು
ಜನವನದೊಳನುಕೂಲ ಸದ್ಗುರು ತಾನು ತಾಂ ಎನಗೆ
ಅನುಭವಾಮೃತ ಸಾರ ನೀಡುತ
ತನುಮನದೊಳನುವಾಗಿ ಸಲಹುವ
ದೀನಮಹಿಪತಿ ಸ್ವಾಮಿ ಭಾನುಕೋಟಿ ತೇಜನಿಗೆ ೩

ಶರಣಜನಾರಾಭರಣವಾಗಿಹ
ಕರುಣಸಾಗರ ಮೂರ್ತಿ ಸದ್ಗುರು
ತರಣೋಪಾಯದ ಸಾರಸುಖವಿರುವ ನಿಜದಾತ
ಪರಮಪಾವನ ಗೈಸುತಿಹ
ವರ ಶಿರೋಮಣಿ ಭಕ್ತವತ್ಸಲ
ಚರಣ ಸ್ಮರಣಿಲೆ ಪೊರೆವದನುದಿನ ತರಳ ಮಹಿಪತಿಗೆ ೪

ನೋಡದೆನ್ನವಗುಣದ ದೋಷವ
ಮಾಡುವದು ಸದ್ಗುರು ದಯ ಘನ
ನೀಡುವುದು ನಿಜ ಸಾರಸುಖವನು ಕರುಣದೊಲವಿಂದ
ಬೇಡುವದು ನಿನ್ನಲ್ಲಿ ಪೂರಣ
ಪ್ರೌಢ ಘನಗುರುಸಾರ್ವಭೌಮನೆ
ಮೂಢ ಮಹಿಪತಿ ರಕ್ಷಿಸನುದಿನ ಸರ್ವಕಾಲದಲಿ ೫

ಸ್ವಾಮಿ ಸದ್ಗುರು ಸಾರ್ವಭೌಮನೆ
ಕಾಮ ಪೂರಿತ ಕಂಜನಾಭನೆ
ಸಾಮ ಗಾಯನ ಪ್ರಿಯ ಸಲಹೆನ್ನಯ ಶ್ರೀ ನಿಧಿಯೆ
ಮಾಮನೋಹರ ಮನ್ನಿಸೆನ್ನ ನೀ
ನೇಮದಿಂದಲಿ ಹೊರೆವದನುದಿನ
ಕಾಮಧೇನಾಗಿಹ ಕರುಣದಿ ದೀನಮಹಿಪತಿಗೆ ೬

ಮಂದಮತಿಯ ನೀ ಕುಂದ ನೋಡದೆ
ಬಂದು ಸಲಹೆನ್ನಯ್ಯ ಪೂರ್ಣನೆ
ಇಂದಿರಾವಲ್ಲಭನೆ ತಂದಿ ತಾಯಿ ನೀ ಎನಗೆ
ಬಂಧು ಬಳಗೆಂದೆಂದು ನಿನ್ನನೆ
ಹೊಂದಿ ಕೊಂಡಾಡುವ ಮೂಢ ನಾ
ಬಂದ ಜನ್ಮವು ಚಂದಮಾಡು ನೀ ಕಂದ ಮಹಿಪತಿಗೆ ೭

ದೀನಬಂದು ದಯಾಬ್ಧಿ ಸದ್ಗುರು
ಭಾನುಕೋಟಿ ತೇಜಪೂರ್ಣನೆ
ನ್ಯೂನ ನೋಡದೆ ಪಾಲಿಸೆನ್ನ ನೀ ಘನಕರುಣದಲಿ
ನೀನೆ ತಾಯಿತಂದೆಗೆ
ನೀನೆ ಬಂಧುಬಳಗ ಪೂರಣ
ನೀನೆ ನೀನಾಗ್ಹೊರೆವದನುದಿನ ದೀನಮಹಿಪತಿಗೆ ೮

## ೮೫

ನಿಲ್ಲೊ ನಿಲ್ಲೊ ನವನೀತ ಚೋರ
ಎಲ್ಲರ ಭುಲ್ಲೈಸಿದಿ ನಂದಕುಮಾರ ಧ್ರುವ

ಪರಿಪರಿ ಅಡಿಸಿದಿ ನೀ ಪರನಾರಿಜಾರ
ಮರುಳು ಮಾಡಿದಿ ನಮ್ಮ ಗೊಲ್ಲತೇರ
ಕರಗೂಡುತಲಿ ತಿಂದ್ಯೋ ನೀ ಪಾಲ್ಕೊಸರ
ಆರಿಗೆ ಹೇಳಬೇಕು ನಿನ್ನ ದೂರ ೧

ಮಾಡದ ಮಾಡಿದಿ ನೀ ಮನಬಂದ್ಹಾಂಗೆ
ಪಡೆದು ಲೋಕದಲುಸುರಗುಡದ್ಹಾಂಗೆ
ಹಿಡಿದೇನಂದರ ನೀ ಕೈಗೂಡಿ ಬ್ಯಾಗೆ
ತುಡುಗತನ ಮಾಡಿದಿ ನಿನಗಕ್ಕು ಹಾಂಗೆ ೨

ಬಿಡಲರಿ ಯೆವು ನಿನ್ನ ತಿಳಿಕೊ ವಿಚಾರ
ಮಾಡಲಿಕ್ಕಾಗದು ಇದಕೆ ತಾ ಪರಿಹಾರ
ಹಿಡಿದೇವು ನಿನ್ನಾಟ ಕಂಡು ಕಣ್ಣಾರ
ಮೂಢ ಮಹಿಪತಿಗಾಯಿತು ತಾ ಮನೋಹರ ೩

## ೮೬

ನೀನಹುದೊ ಎನ್ನ ಸ್ವಾಮಿ ಧ್ರುವ

ಅನಾಥ ಬಂದು ನೀ ಜ್ಞಾನ ಶಿಖಾಮಣಿ
ಧ್ಯಾನಕ ಸಾಧನಿ ನೀನೆ ಎನ್ನ ಗುರುಮುನಿ ೧

ಜೀವಕ ಜೀವ ನೀ ಭಾವಕ ಭಾವ ನೀ
ದೇವಾಧಿದೇವ ನೀ ಕಾವ ನೀನೆ ಕರುಣಿ ನೀ ೨

ಬಾಹ್ಯಾಂತ್ರ ಪೂರ್ಣ ನೀ ಇಹಪರದಾತ ನೀ
ಮಹಿಗೆ ಮಹೀಪತಿ ನೀ ಸಾಹ್ಯಮಾಡೊ ಸಗುಣಿ ನೀ ೩

## ೮೭

ನೀನಹುದೋ ಘನ ಮಹಿಮ ಮುನಿಜನರೊಡಿಯ ಪೂರ್ಣ
ದೀನದಯಾಳು ನೀನೆ ಹರಿಯೆ ೧

ಪತಿತಪಾವನನೆಂದು ಶ್ರುತಿ ಸಾರುವರು ಕೇಳಿ
ಅತಿ ಹರುಷದಲಿ ಬಂದೆನೊ ಹರಿಯೆ ೨

ಮತಿ ಹೀನನವಗುಣವ ಕ್ಷಿತಿಯೊಳು ನೀ ನೋಡದೆ
ಪಥವಗೊಳಿಸುವದು ಎನಗೆ ಹರಿಯೆ ೩

ಮರೆಯ ಹೊಕ್ಕಿಹೆ ನಿಮ್ಮ ಚರಣಕಮಲಕೆ ಪೂರ್ಣ
ಕರುಣದ ಅಭಯ ತೋರೊ ಎನಗೆ ಹರಿಯೆ ೪

ಅರಿಯೆ ನಾ ನಿಮ್ಮ ವಿನಾ ಬ್ಯಾರೆ ಇನ್ನೊಂದು ಪಥ
ಶಿರವ ನಮಿಸಿಹೆನೊ ನಿಮಗೆ ಹರಿಯೆ ೫

ಶರಣಾಗತರ ಹೊರೆವ ಬಿರದು ನಿಮ್ಮದು ಪೂರ್ಣ
ಸಾರುವದು ತಿಳಿದುಕೊಳ್ಳೊ ಹರಿಯೆ ೬

ಬಿಡಲರಿಯೆ ನಾ ನಿಮ್ಮ ಪಿಡಿದು ಶ್ರೀಪಾದವನು
ನೋಡಿ ದಯಮಾಡೊ ಎನಗೆ ಹರಿಯೆ ೭

ಬ್ಯಾರೆ ಗತಿ ಕಾಣೆ ನಿಮ್ಮ ಚರಣಕಮಲದಾಣೆ
ಸಿರಿ ಸಕಲಪದವು ನೀನೆ ಹರಿಯೆ ೮

ಭಿನ್ನವಿಲ್ಲದೆ ನೋಡಿ ಚೆನ್ನಾಗಿ ಮಹಿಪತಿಯ
ಧನ್ಯಗೈಸೊ ಪ್ರಾಣವ ಹರಿಯೆ ೯

## ೮೮

ನೀನಹುದೊ ನಮ್ಮೊಡಿಯ
ಘನ ಗುರು ನಾ ನಿಮ್ಮ ಕಂಡೆ ಅಯ್ಯ ಧ್ರುವ

ನಾ ನಿಮ್ಮ ಪರಿವಾರ ನಾ ನಿಮ್ಮ ಕಿಂಕರ ನೀ ನಮ್ಮ ಸಹಕಾರ
ನೀ ನಮ್ಮ ಪರಿವಾರ ನಾ ನಿಮ್ಮ ಪಡಿಹಾರ ನೀ
ನಮ್ಮ ಬಡಿವಾರ ೧

ನಾ ನಿಮ್ಮ ಬಾಲಕ ನೀ ನಮ್ಮ ಪಾಲಕ
ನಾ ನಿಮ್ಮ ಸೇವಕ ನೀ ನಮ್ಮ ರಕ್ಷಕ ೨

ನಾ ನಿಮ್ಮ ಉದ್ಧೇಶ ನೀ ನಮ್ಮ ಪ್ರಾಣೇಶ
ನಾ ನಿಮ್ಮ ಸಹವಾಸ ನೀ ನಮ್ಮ ಅಭ್ಯಾಸ ೩

ನಾ ನಿಮ್ಮ ಅಣುಗ ನೀ ನಮ್ಮ ಸರ್ವಾಂಗ
ನಾ ನಿಮ್ಮ ಬಳಗ ನೀ ನಮ್ಮ ಬಳಗ ೪

ನಾ ನಿಮ್ಮ ಶರಣ ನೀ ನಮ್ಮ ಕರುಣ
ನಾ ನಿಮ್ಮ ನಿರ್ಗುಣ ನೀ ನಮ್ಮ ಭೂಷಣ ೫

ನಾ ನಿಮ್ಮ ನಿರ್ಮಿತ ನೀ ನಮ್ಮ ಸಹಿತ
ನಾ ನಿಮ್ಮ ಆಶ್ರಿತ ನೀ ನಮ್ಮ ಸುದಾತ ೬

ನಾ ನಿಮ್ಮ ಅಂಕಿತವೃತ್ತಿ ನಿಮ್ಮ ನಮ್ಮ ವಸ್ತುಗತಿ
ನಾ ನಿಮ್ಮ ಮಹಿಪತಿ ನೀ ನಮ್ಮ ಶ್ರೀಪತಿ ೭

## ೮೯

ನೀನಹುದೋ ಶ್ರೀ ಹರಿ
ಮುನಿಜನರ ಸಹಕಾರಿ
ಅನಾಥರಿಗಾಧಾರಿ
ನೀನೆವೆ ಪರೋಪರಿ ಧ್ರುವ

ಪತಿತ ಪಾವನ ಪೂರ್ಣ
ಅತಿಶಯಾನಂದ ಸುಗುಣ
ಸತತ ಸುಪಥ ನಿಧಾನ
ಯತಿ ಜನರ ಭೂಷಣ ೧

ಬಡವರ ನೀ ಸೌಭಾಗ್ಯ
ಪಡೆದವರಿಗೆ ನಿಜ ಶ್ಲಾಘ್ಯ
ದೃಢ ಭಕ್ತರಿಗೆ ಯೋಗ್ಯ
ಕುಡುವದೇ ಸುವೈರಾಗ್ಯ ೨

ಭಾಸ್ಕರ ಕೋಟಿ ಲಾವಣ್ಯ
ಭಾಸುತಿಹ್ಯ ತಾರ್ಕಣ್ಯ
ದಾಸ ಮಹಿಪತಿ ಜನ್ಮ ಧನ್ಯ
ಲೇಸುಗೈಸಿದಿ ನಿನ್ನ ಪುಣ್ಯ ೩

## ೯೦

ನೀನಾರೊ ನಿನ್ನ ಪೆಸರೇನೊ
ನಿಗಮ ತಂದುಸುವುಸಿ ಜಗದೊಳಗೆ ಧ್ರುವ

ನಗ ಬೆನ್ನೆಲಿ ತಾಳಿದ ನೀನಾರೋ
ಜಗವ ಕದ್ದೊಯಿದಸುರನ ನೀ ಕೊಂಡು
ಬಗೆದು ತರಳಗೊಲಿದವ ನೀನಾರೊ ೧

ಧರಣಿ ನೀ ಮೂರಡಿಯನೆ ಮಾಡಿ
ಹಿರಿಯಳ ಶಿರ ಹರಿಗಡಿದವನಾರೊ
ಪರ ದೇವತೆಗಳ ಸೆರೆಯ ಬಿಡಿಸಿ
ತುರುಗಳಗಾಯ್ದ ಗೋವಳ ನೀನಾರೊ ೨

ನಾರಿಯರ ವ್ರತಗಳನೆ ಹಳಿದು
ಏರಿ ಹಯವನು ಸುಳಿವವನಾರೊ
ತರಳ ಮಹಿಪತಿ ಮನೋಹರವ ಮಾಡಿ
ಗುರುತುತೋರಿದ ಗುರು ಮಹಿಮ ನೀ ಬಾರೊ ೩

## ೯೧

ನೀನೆ ಎನಗಾಗಿ ಬಂದು ನೀನೆ ನೀನಾಗೆನಗಿಂದು ಧ್ರುವ

ಅಪ್ಪನಾಗೆನಗೆ ನೀ ಬಂದು ತಪ್ಪು ಕ್ಷಮೆ ಮಾಡಿದಿಂದು
ಒಪ್ಪಿಸಿಕೊಳಲೆನ್ನ ಬಂದು ಅಪ್ಪಳಿಸಿದೆ(?) ಜನ್ಮವಿಂದು ೧

ಅಮ್ಮನಾಗೆನಗೆ ನೀ ಬಂದು ರಂಬಿಸಿದೆ ಎನಗಿಂದು
ಸಮ್ಯಜ್ಞಾನದಲಿ ನೀ ಬಂದು ಸುಮ್ಮನೆದೋರಿದೆನಗಿಂದು ೨

ಅಣ್ಣನಾಗೆನಗೆ ನೀ ಬಂದು ಕಣ್ಣಿನೊಳಗೆ ಸುಳಿದಿಂದು
ಸುಗುಣ ಸಹಕಾರದಲಿ ಬಂದು ಪುಣ್ಯಚರಣದೋರಿದಿಂದು ೩

ಅಕ್ಕನಾಗೆನಗೆ ನೀ ಬಂದು ಅಕ್ಕಿದೆ ಆತ್ಮದಲಿಂದು
ಸಾಕಿ ಸಲಹಲೆನ್ನ ಬಂದು ಸಿಕ್ಕಿದಕ್ಕಿದೆ ಎನಗಿಂದು ೪

ತಮ್ಮನಾಗೆನಗೆ ನೀ ಬಂದು ತಮ್ಮೊಳರ್ಪಿಸಿಕೊಂಡೆ ಇಂದು
ತಮ್ಮ ನಿಜವಾದಾರ(?) ಬಂದು ತನುವಿನೊಳಗೆ ಸುಳಿದಿಂದು ೫

ತಂಗಿಯಾಗೆನಗೆ ನೀ ಬಂದು ಹಿಂಗಿಸಿದೆ ಭವವಿಂದು
ಸಂಗ ಸುಖವದೋರ ಬಂದು ಅಂತರಂಗದಿ ಸುಳಿದಿಂದು ೬

ಈಸು ಪರಿಯಲೆನಗಿಂದು ಆಶೆಪೂರಿಸಿದೆನಗಿಂದು
ಭಾಸ್ಕರ ಗುರುವಾಗಿ ಬಂದು ಭಾಸಿ ಪಾಲಿಸಿದೆನಗಿಂದು ೭

## ೯೨

ನೀನೆ ಎನಗಾಧಾರಿ ಶ್ರೀಹರಿ
ನೀನೆ ಎನಗಾಧಾರಿ ಧ್ರುವ

ಸಕಲ ಸುಖವ ಬೀರುವ ಉದಾರಿ
ಭಕುತ ವತ್ಸಲ ಮುಕುಂದ ಮುರಾರಿ ೧

ಅಂತರ್ಬಾಹ್ಯದ ಲೀಹ ನರಹರಿ
ಕಂತುಪಿತನೆ ಪೀತಾಂಬರಧಾರಿ ೨

ಹಿತದಾಯಕ ನೀನೆವೆ ಪರೋಪರಿ
ಪತಿತಪಾವನ ಮಹಿಪತಿ ಸಹಕಾರಿ ೩

## ೯೩

ನೀನೆ ದಯಾನಿಧಿಯು ಶ್ರೀ ಗುರುರಾಯ
ನೀನೆ ದಯಾನಿಧಿಯು ಧ್ರುವ

ಕರುಣದಿ ಕುಂತಿಯ ಪುತ್ರರಿಗೆ ಒಲಿದು
ಕಾಳ ನಿರ್ಮಿಸಿ ಕೌರವರಳಿದು
ಉಳಿಯದೆ ಇಳೆಯೊಳು ವಂಶವ ಸವರಿದ
ಶೇಷಶಯನ ಶ್ರೀ ಕೇಶವ ನೀನೆ ೧

ನರಗೊಲಿದು ನರಕಾಸುರನ ಮರ್ದಿಸಿ
ನಾರಗನೆಂದಜಮಿಳನ ನೀ ತಾರಿಸಿ
ನಾರದಗೊಲಿದು ನಾಟ್ಯವನಾಡಿದ
ನರಹರಿಯು ನಾರಾಯಣ ನೀನೆ ೨

ವೇದವ ಕದ್ದೊಯಿದಸುರನ ಸೀಳಿ
ಮಚ್ಛವತಾರದ ರೂಪವ ತಾಳಿ
ಮಾವನ ಕೊಂದ ಮಾನ್ಯರ ಮಡುಹಿದ
ಮೈದುನಗೊಲಿದ ಶ್ರೀ ಮಾಧವ ನೀನೆ ೩

ಗೋಕುಲದಲಿ ಪುಟ್ಟಿ ಧರೆಯೊಳು
ಬೆರಳಲಿ ಗೋವರ್ಧನ ಗಿರಿಯನೆತ್ತಿ
ಗೋಕುಲ ಕಾಯ್ದಿ ಗೋಪಿಯರಿಗೊಲಿದ
ಗೋಪಾಲಕೃಷ್ಣ ಗೋವಿಂದನು ನೀನೆ ೪

ಸೃಷ್ಟಿನೆಲ್ಲ ಬೆನ್ನಿಲಿ ತಾಳಿದ ಶೇಷನ ಸಂ
ಕಷ್ಟವ ಪರಿಹರಿಸಿದ
ಶಿಷ್ಟ ವಿಭೀಷಣಗೊಲಿದು
ಪಟ್ಟವಗಟ್ಟವು ವಿಷ್ಣುವು ನೀನೆ ೫

ಮದನನೊಲಿದು ಕಾಳಿಂಗನ ತುಳಿದು
ಕದನದಲಿ ಬಾಣಾಸುರನಳಿದು
ಮೇದಿನಿಯೊಳು ಮರೆ ಇಲ್ಲದೆ ದೈತ್ಯರ
ಮರ್ದಿಸಿದ ಮಧುಸೂದನನು ನೀನೆ ೬

ತ್ರಿಪುರವನಳಿದು ತ್ರಿಗುಣವ ತಾಳಿದ
ತೆತ್ತೀಸ ಕೋಟಿ ದೇವರುಗಳಿಗಾಳಿದ
ಅಕ್ರೂರಗೊಲಿದು ಚರಿತ್ರವದೋರಿದ
ತ್ರಿಜಗಪತಿ ತ್ರಿವಿಕ್ರಮ ನೀನೆ ೭

ವಾಲಿಯನಳಿದು ವಾಲ್ಮೀಕಿಗೊಲಿದು
ಬಲಿಚಕ್ರನ ಮುನಿಮುಂದಲಿ ಸುಳಿದು
ಬ್ರಾಹ್ಮಣನಾಗಿ ದಾನವ ಬೇಡಿದ
ಮಾನ್ನವಗೊಲಿದ ಶ್ರೀ ವಾಮನ ನೀನೆ ೮

ಸೃಷ್ಟಿನೆಲ್ಲ ನಿರ್ಮಿಸಿ ವಕ್ಷ
ಸ್ಥಳದಲಿ ಶ್ರೀ ಮಹಾಲಕ್ಷ್ಮಿಯ ಧರಿಸಿದ
ಶ್ರೀನಿಧಿ ಶ್ರೀಪತಿ ಶ್ರೀಗುರುಮೂರುತಿ
ಶ್ರೀದೇವಿಗೊಲಿದಿಹ ಶ್ರೀಧರ ನೀನೆ ೯

ದಾಸರ ಕ್ಲೇಶಕಿಲ್ಮಿಷಗಳ ತೊಳೆದು
ಅಂಬರಿಷ ರುಕ್ಮಾಂಗದಗೊಲಿದು
ಶುಕ ಶೌನಕ ಪರಾಶರ ಮುನಿಗಳಿಗೆ
ಹರುಷನಿತ್ತ ಹೃಷಿಕೇಶನು ನೀನೆ ೧೦

ಕ್ಷಿತಿಯೊಳು ದೃಢ ಪತಿವ್ರತೆಗೊಲಿದು
ಯತಿ ಮುನಿಗಳಿಗಿನ್ನು ಗತಿಗಳನಿತ್ತು
ಪತಿತರ ತಾರಿಸಿ ಪಾವನಗೈಸಿದ
ಪರಂಜ್ಯೋತಿ ಪದ್ಮನಾಭನು ನೀನೆ ೧೧

ದೇವಕಿಗೊಲಿದು ಸ್ಥಾಪಿಸಿ ಧರೆಯೊಳು
ದ್ವಾರಕಿಯಲಿ ನಿಜ ಲೀಲೆಯು ತೋರಿದ
ದಾರಿದ್ರ್ಯಭಂಜನ ದುರಿತ ವಿಧ್ವಂಸನ
ದೇವಕಿ ಪುತ್ರ ದಾಮೋದರ ನೀನೆ ೧೨

ಸಿದ್ಧ ಶರಣರಿಗೊಲಿದ ಸದ್ಗತಿ
ಸುಖಸಾಧನ ಸಹದೇವಗದೋರಿದ
ಸಂಭ್ರಮದಿ ಸುಧಾಮಗ ಒಲಿದು
ಸಂತೋಷವನಿತ್ತ ಸಂಕರುಷಣ ನೀನೆ ೧೩

ವಸುಧಿಯೊಳು ಭಸ್ಮಾಸುರನ ಮರ್ದಿಸಿ
ಭಾಷೆಯನಿತ್ತು ಭಕ್ತರ ಪಾಲಿಸಿ
ಋಷಿ ವೇದವ್ಯಾಸಗೊಲಿದಾತನು
ವಸುದೇವಸುತ ವಾಸುದೇವನು ನೀನೆ ೧೪

ವಿದುರುದ್ಧವ ಗರುಡಗೊಲಿದು
ಭೃಗುಮುನಿ ಕಪಿಲ ಯೋಗೇಂದ್ರನ ಸಲಹಿದ
ಸ್ಥಿರಪದವಿತ್ತರೊಂದು ಮಂದಿಗೆ
ಪ್ರಸನ್ನವಾದ ಪ್ರದ್ಯುಮ್ನನು ನೀನೆ ೧೫

ಸೀತಾ ಸುದ್ದಿಯ ತಂದವಗೊಲಿದು
ಹತ್ತು ತಲೆಗಳ ಇದ್ದವನಳಿದು
ಕದ್ದುಬೆಣ್ಣೆಯ ಮುದ್ದೆಯ ಮೆದ್ದು
ಉದ್ಧವಗೊಲಿದ ಅನಿರುದ್ಧನು ನೀನೆ ೧೬

ಸೋಕಿಸಿ ಪೂತಣಿಯ ಕಾಯವು ಹೀರಿದ
ಭಕ್ತ ಪುಂಡಲೀಕನ ಸಲಹಿದ
ಭಕ್ತಿಗೆ ಒಲಿದು ಮುಕ್ತಿಯನಿತ್ತ
ಪರಮ ಪರುಷ ಪುರುಷೋತ್ತಮನು ನೀನೆ ೧೭

ಅಕ್ಷಯವೆಂದು ರಕ್ಷಿಸಿ ಸಭೆಯೊಳು
ದ್ರೌಪದಿ ಕರುಣಕಟಾಕ್ಷದಿ ಸಲಹಿದ
ಭಕ್ತವತ್ಸಲನಾಗಿ ಗಜೇಂದ್ರಗೆ
ಮೋಕ್ಷವನಿತ್ತ ಅಧೋಕ್ಷಜ ನೀನೆ ೧೮

ನರನಾರಿಯು ನಾಂಟೀಶರನಾಗಿ
ನಖಮುಖದಲಿ ಹಿರಣ್ಯಕನ ಸೀಳಿ
ಭಕ್ತಪ್ರಹ್ಲಾದಗ ಒಲಿದು ಸ್ತಂಭದಿ
ಪ್ರಕಟಿಸಿದ ನರಸಿಂಹನು ನೀನೆ ೧೯

ಅನಿಳ ಸ್ನೇಹಿತ ಅಜಗ್ನಾನಗ ಒಲಿದು
ಅಹಲ್ಯಾ ಶಾಪ ವಿಮೋಚನ ಮಾಡಿದ
ನೆಚ್ಚಿದ ಧ್ರುವನ ನಿಜ ಭಕ್ತಿಗೆ ಒಲಿದು
ಅಚಲ ಪದವಿತ್ತುಚ್ಯುತ ನೀನೆ ೨೦

ಜಗದೊಳು ಭಕ್ತಜನರಿಗೆ ಒಲಿದು
ಜಾಹ್ನವಿ ನಿರ್ಮಿಸಿ ಜನಕನ ಸಲಹಿದ
ಸಾಧು ಸಜ್ಜನ ಮುನಿ ಸಂಜೀವನ
ಜಾನಕೀಪತಿ ಜನಾರ್ಧನನು ನೀನೆ ೨೧

ಅಂಗದಗೊಲಿದಾನಂದವನಿತ್ತು
ಕುಂದದೆ ಕರೆದುಪಮನ್ಯುನ ಸಲಹಿದ
ದಿನಕರ ಚಂದ್ರ ಕಳಿಯಗಳಿತ್ತು
ಇಂದ್ರಗೆ ಒಲಿದ ಉಪೇಂದ್ರನು ನೀನೆ ೨೨

ಹಯವದನದವತಾರವ ಧರಿಸಿ
ಧರೆಯೊಳು ಭಕ್ತನ ಜನ್ಮವು ಹರಿಸಿ
ಹರಿಶ್ಚಂದ್ರನ ಕ್ಲೇಶವು ಪರಿಹರಿಸಿದ
ಸುರಮುನಿಗೊಲಿದ ಶ್ರೀ ಹರಿಯು ನೀನೆ ೨೩

ಕಾಳಿ ಮಥನವು ಮಾಡಿ ಕರುಣದಿ
ಸುರರಿಗೆ ಅಮೃತವನಿತ್ತು ಸಲಹಿದ
ಕಲ್ಕ್ಯಾವತಾರದ ಲೀಲೆಯ ತೋರಿದ
ಕಪಟ ನಾಟಕ ಶ್ರೀ ಕೃಷ್ಣನು ನೀನೆ ೨೪

ಸಂಧ್ಯಾನದ ಸಾಹಾಯವನಿತ್ತು
ಕಾಯದಿ ಸದ್ಗತಿ ಸಾಧನದೋರಿದ
ನರಕೀಟಕ ಮಹಿಪತಿ ತಾರಕ ಗುರುಮೂರ್ತಿಯ
ಪರಮ ದಯಾನಿಧಿಯು ನೀನೆ ೨೫

## ೯೪

ನೀನೆ ನಮ್ಮ ಕಾವ ಕರುಣನು ಶ್ರೀನಾಥ ಪೂರ್ಣ
ನೀನೆ ನಮ್ಮ ಕಾವ ಕರುಣನು ಧ್ರುವ

ನೀನೆ ನಮ್ಮ ಕಾವ ಕರುಣ ಭಾನುಕೋಟಿತೇಜಪೂರ್ಣ
ದೀನಜನರ ದಾತ ಶ್ರೀನಾಥ ಸದ್ಗುರುರಾಯ ರನ್ನ ೧

ನೇಮದಿಂದ ಭೋರ್ಗರೆವ ನಾಮ ನಿಮ್ಮ ಕಾಮಧೇನು
ಕಾಮ್ಯ ಪೂರಿಸುವ ನಿಮ್ಮ ಕರುಣ ಕಲ್ಪವೃಕ್ಷವಯ್ಯ ೨

ಹೇಮರೌಪ್ಯ ರತ್ನವಾದ ದಯವೆ ನಿಮ್ಮ ನವನಿಧಿಯ
ನಿಮ್ಮ ಅಭಯಪೂರ್ಣವೆನಗೆ ಅಷ್ಟಮ ಸಿದ್ಧಿವಯ್ಯ ೩

ಅಖಿಳ ಭುವನದೊಳಗೆ ನಿಮ್ಮ ಸಾಹ್ಯ ಸಂಜೀವ ನಮಗೆ
ಸೌಖ್ಯನಿತ್ತು ಹೊರೆವ ನಿಮ್ಮ ಸ್ಮರಣೆ ಚಿಂತಾಮಣಿಯ ೪

ಕುಂದ ನೋಡದೆ ಸಲುಹುತಿಹ್ಯ
ತಂದೆಯಹುದೊ ಮಹಿಪತಿಯ
ಚೆಂದಮಾಡುವ ಬಂದು ಜನ್ಮ ಬಂಧು ಬಳಗೆ ನೀನೆ ಅಯ್ಯ ೫

## ೯೫

ನೀನೆ ನಮ್ಮ ಕುಲದೈವ ಅನುದಿನಾರಾಧಿಸುವ
ಮುನಿಜನರೊಂದಿಸುವ ಘನಗುರು ದೇವಾದಿ ಶ್ರೀದೇವ ೧

ಮೂಢ ಅಜ್ಞಾನಿ ನಾ ಮಂದಮತಿ
ಮಾಡಲರಿಯೆ ನಿಮ್ಮ ನಿಜಭಕ್ತಿ
ನೋಡದೆ ನೀ ನ್ಯೂನಪೂರ್ಣ ಸ್ಥಿತಿ
ಕೂಡಿಕೊಳ್ಳಯ್ಯ ಸೇವೆ ಶ್ರೀಪತಿ ೨

ನಿಮ್ಮ ವಿನಾ ಅರಿಯೆ ಅನ್ಯಪಥ ಈ
ಮಾತಿಗಿಲ್ಲವೊ ಅನ್ಯಥಾ
ಸ್ವಾಮಿ ನೀನೆವೆ ನಮ್ಮ ದೈವತ ಬ್ರಹ್ಮಾದಿಗಳಿಗೆ ಸನ್ನುತ ೩

ಅಯ್ಯ ನಿಜಬಾಲಕ ನಾ ನಿಮ್ಮ ತಾಯಿತಂದೆಯು ನೀನೆ ನಮ್ಮ
ದಯಾಸಿಂಧು ಸದ್ಗುರು ಪರಬ್ರಹ್ಮ
ಸಾಹ್ಯಮಾಡುವ ಸರ್ವೋತ್ತಮ ೪

ದೈವ ನೀನಹುದೊ ಸಾಕ್ಷಾತ ಕೈವಲ್ಯನಿಧಿಯು ಶ್ರೀನಾಥ
ಭಾವಿಸುವರ ಭಾವಪೂರಿತ ಮಹಿಪತಿಯ ಪ್ರಾಣನಾಥ ೫

## ೯೬

ನೀನೆ ರಕ್ಷಿಸೊ ಎನ್ನ ಪೂರ್ಣ ನೀ ಸ್ವಾನುಭವಸುಖದಾಯಕ
ಅನುದಿನಪಾಲಕ ಅನಾಥಜನ ನೀ ರಕ್ಷಕ ೧

ನ್ಯೂನಪೂರ್ಣಕಾಗುತಿಹ್ಯ ನಿಜದೀನಬಂಧು ಶಾಶ್ವತ
ಘನ ದಯ ಸದೋದಿತ ನೀನೆಮ್ಮ ಸುಸ್ವಹಿತ ೨

ತಂದೆತಾಯಿಯು ನೀನೆ ಸದ್ಗುರು ಬಂಧುಬಳಗ ಸನಾತನ
ಸಾಂದ್ರ ಸದ್ಘನ ಕರುಣ ಕಂಡ ಮಹಿಪತಿ
ಭೂಷಣ ನೀನೆ ಪಾಲಿಸೊ ೩

## ೯೭

ನೀನೆ ಸಕಲವೆನ್ನ ಸ್ವಾಮಿ ಶ್ರೀ ಹರಿಯೆ
ದೀನ ದಯಾಳು ನೀನೆವೆ ನಿಜಧೊರಿಯೆ ಧ್ರುವ

ತಂದೆ ತಾಯಿಯು ನೀನೆ ಬಂಧುಬಳಗ ನೀನೆ
ಹೊಂದಿಕೆ ಹೊಲಬು ನೀ ಎನ್ನ ನೀನೆ

ಎಂದೆಂದು ಸಲಹುವಾನಂದ ಮೂರುತಿ ನೀನೆ
ಕುಂದ ನೋಡದಿಪ್ಪ ಮಂದರಧರ ನೀನೆ ೧

ಕುಲದೈವವು ನೀನೆ ಮೂಲಪುರಷ ನೀನೆ
ಒಲಿವ ಭಾಗ್ಯದ ಫಲಶ್ರುತಿಯು ನೀನೆ
ಸಾಲವಳಿಯು ನೀನೆ ಹಲವು ಭೂಷಣ ನೀನೆ
ಕುಲಕೋಟಿ ಬಳಗಾದ ಭಕ್ತವತ್ಸಲ ನೀನೆ ೨

ಧನದ್ರವ್ಯಾರ್ಜಿತ ನೀನೆ ಘನಸೌಖ್ಯಾಕರ ನೀನೆ
ಅನುದಿನಲಿಗನುಕೂಲ ನೀನೆ
ದೀನ ಮಹಿಪತಿಸ್ವಾಮಿ ಭಾನುಕೋಟಿ ತೇಜನೆ
ಮನೋಹರ ಮಾಡುವ ಮಹಾಮಹಿಮ ನೀನೆ ೩

## ೯೮

ನೆನವಿಗೊಮ್ಮೆ ಹರಿನಾಮಘೋಷ ಮಾಡಿ
ಜನುಮ ಸಾರ್ಥಕಾಗುವುದು ಪೂರ್ಣ ನೋಡಿ ಧ್ರುವ

ಜನವನ ದೊಳು ಹರಿಯ ಕೊಂಡಾಡಿ
ಅನುಮಾನ ಹಿಡಿದು ಕೆಡಬ್ಯಾಡಿರೊ
ನೆನವಿಗೊಮ್ಮೆ ನಾಮಘೋಷವ ಮಾಡಿ
ನೆನವಿನೊಳು ನೀವು ಘನ ಬೆರದಾಡಿರೊ ೧

ಹರಿಯ ನಾಮ ನೆನವುತಿಕ್ಕಿ ಚಪ್ಪಾಳಿ
ದೂರಮಾಡಿ ಮನದ ಚಿಂತೆ ಮುಮ್ಮಳಿ
ಸಾರಿ ದೂರುತಿದೆ ವೇದ ಪೂರ್ಣ ಕೇಳಿ
ಅರಿತು ಹರಿಯ ನಾಮ ನೀವು ಬಲಗೊಳ್ಳಿರೊ ೨

ಹರಿನಾಮಕಾಗಬ್ಯಾಡಿ ವಿಮುಖ
ಅರಿತು ಮಾಡಿಕೊಳ್ಳಿ ಪ್ರಾಣಪದಕ
ತರಳ ಮಹಿಪತಿಯ ತಾರಕ
ತೋರುತಿಪ್ಪ ದು ಬ್ರಹ್ಮಸುಖವೊ ೩

## ೯೯

ನೆನಿಯಬಾರದೆ ಮನವೆ ಹರಿಯ ನಾಮವ
ನೆನವು ಸೆಲೆಗೊಳ್ಳಲಿಕ್ಕೆ ಘನಪದವನೀವ ಸ್ವಾಮಿ ಧ್ರುವ

ಅಂತು ಇಂತು ಎಂತು ಎನದೆ ತಂತು ಪಿಡಿದು ತನುವಿನೊಳು
ಅಂತರಾತ್ಮ ಕಂತುಪಿತನ ಸಂತತ ಪಿಡಿದು ಪಾದ ೧

ಶ್ರವಣ ಕೀರ್ತನೆ ಮೊದಲಾದ ನವವಿಧ ಭಕುತಿಯಿಂದ
ಸವಿದು ಸವಿದು ಸವಿದುಂಬ ಸಾರವಾದ ದಿವ್ಯನಾಮ ೨

ಧನ್ಯ ಧನ್ಯನಾಗೊ ಮನವೆ ನೆನೆದು ಪತಿತಪಾವನನಾಮ
ಪುಣ್ಯಗತಿಯನೀವ ಮಹಿಪತಿಯ
ಧನ್ಯಗುರುವಿನ ದಿವ್ಯನಾಮ ೩

## ೧೦೦

ನೆರೆನಂಬು ಮನವೆ ಹರಿಯ ಸಿರಿಯನಾಳುವ ದೊರಿಯ ಧ್ರುವ

ಸ್ಮರಿಸಿದಾಕ್ಷಣ ಕರಿಯ ಸೆರೆಯಬಿಡಿಸಿದನರಿಯ
ಮರಿಯದೆ ಜಗದೊಳು ಹರಿಯ
ಚರಣಕಮಲಯುಗ್ಮಮರಿಯ ೧

ಧರಿಯೊಳು ದ್ರೌಪದಿ ಮೊರಿಯ ಹರಿ ಕೇಳಿದ ನೀನರಿಯ
ಅರಿತು ನಡೆವನೀ ಪರಿಯ ಸಾರುತಿದೆ ಶ್ರುತಿ ಖರಿಯ ೨

ಅರವಿನೊಳು ಮನ ಹರಿಯ ತೋರುವ ಘನ ಅಶ್ಚರ್ಯ
ತರಳ ಮಹಿಪತಿದೊರಿಯ ನೆರೆನಂಬಿರೊ ಈ ಪರಿಯ ೩

## ೧೦೧

ನೋಡಬಾರದೆ ಹರಿಯ ಮನವೆ ಧ್ರುವ

ಸುಲಲಿತವಾಗಿ ಸುಲ್ಲಭವಾಗ್ಹಾನೆ
ನೆಲೆ ನಿಭವಾಗಿ ತನ್ನೊಳು ತುಂಬ್ಯಾನೆ ೧

ಹೃದಯಕಮಲದೊಳು (ಕರೆಗುಡು)ತ್ತಾನೆ
ಸದೋದಿತ ಸವಿಸುಖ ಬೀರುತಲ್ಯಾನೆ ೨

ಹಲವು ಪರಿಯಲಿ ತಾ ಸಲಹುತಲ್ಯಾನೆ
ಕುಲಕೋಟಿ ಬಂಧು ಬಳಗಾಗ್ಹಾನೆ ೩

ಕಣ್ಣಿನ ಮುಂದೆವೆ ತಾನೆ ಕಟ್ಯಾನೆ
ಬಣ್ಣ ಬಣ್ಣದಲಿ ತಾ ಭಾಸುತಲ್ಯಾನೆ ೪

ಸ್ವಹಿತ ಸುಖದ ಸುಮೂರುತಿ ಆಗ್ಯಾನೆ
ಮಹಿಪತಿಯೊಳು ಶ್ರೀಪತಿ ಆಗ್ಯಾನೆ ೫

## ೧೦೨

ನೋಡುವ ಬನ್ನಿ ಸ್ವಾಮಿಯ ಅಂತರ್ಯಾಮಿಯ
ನೀಡಿ ಪ್ರೇಮ ಪ್ರೀತಿಯ ಮಾಡುವ ಬನ್ನಿರೊ
ಭಕ್ತಿಯ ದೃಢಯುಕ್ತಿಯ ೧

ದೇವದೇವನ ಪೂರ್ಣ ನೋಡುವ
ಸೇವೆಮಾಡುವ ಸರ್ವದಾ ಕೊಂಡಾಡುವ
ನವವಿಧ ಭಕ್ತಿಯ ಮಾಡುವ ಭಾವವಿಡುವ ೨

ತನು ಮನಧನ ಅರ್ಪಿಸಿ ಬಿಡುವ
ಮನಗೂಡುವ ಪ್ರಾಣಾಯಾಮ ಮಾಡುವ
ಅನುದಿನ ಸಾಧಿಸಿ ನೋಡುವ ಘನಗೂಡುವ ೩

ಇಡಾಪಿಂಗಳ ಮಧ್ಯ ನೋಡುವ
ನಡೆವಿಡುವ ನಡುಹಾದಿಗೂಡುವ
ಒಡನೆ ಸ್ವಸುಖ ಪಡೆವ ಗೂಢ ನೋಡುವ ೪

ಸವಿಸುಖಸಾರ ಸುರುತದೆ
ದ್ರವಿಸುತದೆ ಠವಠವಿಸುತದೆ
ರವಿಕೋಟಿಪ್ರಭೆ ಭಾಸುತದೆ ಆವಾಗಲ್ಯದೆ ೫

ಏನೆಂದನಬೇಕನುಭವ
ಖೂನದೋರುವ ಘನ ಮಳೆಗರೆವ
ಸ್ವಾನುಭವದಲಿ ಸೇವಿಸುವ ಅನುಸರಿಸುವ ೬

ಜಾಗಿಸುತ್ತದೆ ವಸ್ತುಮಯ
ಬಗೆಬಗೆಯ ಯೋಗ ಇದೆ ನಿಶ್ಚಯ
ಸುಗಮಸಾಧನ ಮಹಿಪತಿಯ ಸುಜ್ಞಾನೋದಯ ೭

## ೧೦೩

ನಂದಕಂದ ಬಾಲಮುಕುಂದ ನಂದಕಂದ ಧ್ರುವ

ನಂದಕಂದಾ ನಂದ ಘನ ನಿ
ರ್ದ್ವಂದ್ವ ನಿರ್ಗುಣ ನಿಜಸ್ವರೂಪ ೧

ವಿದುರವಂದ್ಯ ವಿರಾಜಿತರೂಪ
ಮದನಮೋಹನ ಮಾಮನೋಹರ ೨

ಮುರಹರ ಮಾಧವ ಕರುಣಾಕರ ಗುರು
ಶ್ರೀವರ ಪೂರ್ಣ ಸದಾ ಸಹಕಾರಿ ೩

ಶರಣರಕ್ಷಕ ಸುಜನರ ಪಾಲಕ
ಸರಸಿಜೋದ್ಭವನುತ ಶ್ರೀ ಹರಿ ೪

ಶ್ರೇಯ ಸುಖದಾಯಕ ಸದೋದಿತ ಸಾಂದ್ರ
ಮಹಿಪತಿ ಸ್ವಾಮಿ ಸದ್ಘನ ಚಿದ್ರೂಪ ೫

## ೧೦೪

ನಂಬಿ ನೋಡಿರೋ ಅಂಬುಜಾಕ್ಷನ
ಗುಂಭಗುರುತ ಹಂಬಲಿಸದೆ ಇಂಬುದೋರುದು ಧ್ರುವ

ಒಂದು ಮಾಡಿ ಬಂದ ಮ್ಯಾಲ ಎಂದು
ಬಿಡದೆ ವಂದಿಸಿ ನೋಡಿ
ಇಂದಿರೇಶನ ಹೊಂದಿ ನಿಜವು
ಸಂಧಿಸಿದರೆ ಭಿನ್ನವಿಲ್ಲದೆ ನೋಡಿ
ಚೆನ್ನಾಗಿ ಕೂಡಿಕೊಂಬ ಧನ್ಯಗೈಸಿ ಜೀವ
ಪ್ರಾಣ ಪಾವನ ಮಾಡುವ ೧

ಅಂತು ಇಂತು ಎಂತು ಎನದೆ ತಂತುವಿಡಿದು ಕಂತು ಪಿತನ
ಅಂತರಂಗದಿ ಸಂತತವಾಗಿ ಚಿಂತಿಸಿದರೆ ನಿತ್ಯ ಯೋಗಕ್ಷೇಮ
ತಾ ಹೊತ್ತು ನಡೆಸುವ ಹತ್ತಿಲೆ
ತಂದು ತಪ್ಪದೆ ತುತ್ತು ಮಾಡ್ಯುಣಿಸುವ ೨

ಸಣ್ಣ ದೊಡ್ಡದೆನ್ನ ಗುಡದೆ ಕಣ್ಣದೆರಿಸಿ ಚಿನ್ನುಮಯದ
ಬಣ್ಣ ಭಾಸುತ ಪುಣ್ಯಮಹಿಮೆ ಕಾಣಿಸುವದು ವಾಸನೆ ಪೂರಿಸಿದ
ವಾಸುದೇವ ನಿಶ್ಚಯ ಲೇಸಾಗಿ
ಪಾಲಿಸುತಿಹ್ಯ ದಾಸ ಮಹಿಪತಿಯ ೩

## ೧೦೫

ಪತಿತಪಾವನಹುದೋ ಸ್ವಾಮಿ ಧ್ರುವ

ಯತಿಮುನಿಜನವನ ಅತಿಶಯಾನಂದ ನೀ
ಶ್ರುತಿಗಗೋಚರನಹುದೋ ಸ್ವಾಮಿ ೧

ಕ್ಷಿತಿಯೊಳು ಗೌತಮ ಸತಿಯಳುದ್ಧರಿಸಿದ
ಅತಿ ದಯಾಳನಹುದೋ ಸ್ವಾಮಿ ೨

ನಷ್ಟಾ ಜಮಿಳನ ದೃಷ್ಟಿಸಿ ನೋಡಿನ್ನು
ಶಿಷ್ಟತನವ ಮಾಡಿದ್ಯೋ ಪ್ರಾಣಿ ೩

ಎಷ್ಟೆಂದು ಪೊಗಳಲಿ ಸೃಷ್ಟಿಯೊಳಗೆ ನಿಮ್ಮ
ದುಷ್ಟಮರ್ದನನಹುದೋ ಸ್ವಾಮಿ ೪

ಅತಿ ಮಂದಮತಿ ಮಹಿಪತಿಗೆ ಸದ್ಗೈಸಿನ್ನು
ಪತಿತಪಾವನ ಮಾಡಿದ್ಯೋ ಸ್ವಾಮಿ ೫

## ೧೦೬

ಪತಿತಪಾವನ ಪರಮದಯಾಳು ಶ್ರೀನಾಥ
ಅತಿಶಯಾನಂದಾತ್ಮ ಸದ್ಗುರು ಭಕ್ತಹೃತ್ಕಮಲಾಂಕಿತ ಧ್ರುವ

ನಿತ್ಯಾನಂದ ನಿಜಗುಣ ನಿರ್ಗುಣರೂಪ ಶ್ರೀದೇವ
ಉತ್ತಮೋತ್ತಮ ಸತ್ಯಶಾಶ್ವತ ಭಕ್ತಜನ ಉದ್ಧಾರಕ
ಯತಿಜನಾಶ್ರಯಾನಂತಮಹಿಮ ಕೃಪಾಲ
ಶ್ರುತಿಗಗೋಚರ ಅತೀತ ತ್ರಿಗುಣ ಸತತ ಸುಪಥದಾಯಕ ೧

ಅಚ್ಯುತಾನಂತ ಮುಚುಕುಂದವರದ ಮುಕುಂದ
ನಿಶ್ಚಯಾನಂದೈಕ್ಯ ನಿರ್ಗುಣ ನಿಶ್ಚಲಾತ್ಮ ಕನುಪಮ
ಸಚ್ಚಿದಾನಂದ ಸದ್ಗುಣ ಸಾಂದ್ರ ಸರ್ವಾತ್ಮ
ಮಚ್ಛ ಕೂರ್ಮಾನಂತರೂಪ ಭಕ್ತವತ್ಸಲ ಶ್ರೀಧರ ೨

ಅಕ್ಷಯದ ಅವಿನಾಶ ಪೂರ್ಣ ಅಚ್ಯುತ ಪಕ್ಷಪಾಂಡವ
ಪಕ್ಷಿವಾಹನ ರಕ್ಷರಕ್ಷ ಜನಾರ್ದನ
ಮೋಕ್ಷದಾಯಕ ಕರಿರಾಜವರದ ಕೇಶವಾಲಕ್ಷ ನಿಜ ಸು-
ಬಿಕ್ಷ ಮಹಿಪತಿಗಿತ್ತು ಕಾಯೋ ಲಕ್ಷ್ಮೀಪತೆ ೩

## ೧೦೭

ಪರಮ ಸಂಜೀವನವು ಗುರು ನಿಮ್ಮನಾಮ
ಸುರಮುನಿಯು ಸೇವಿಸುವ ದಿವ್ಯನಾಮ ಧ್ರುವ

ಕರಿಯ ಮೊರೆಯನು ಕೇಳಿ ದುರಿತ ಹರಿಸಿದ ನಾಮ
ಮೊರೆಯ ಹೊಕ್ಕವರ ಸ್ಥಿರ ಹೊರೆವ ನಾಮ
ತರಳ ಪ್ರಲ್ಹಾದನವಸರಕೆ ಒಲಿದಿಹ ನಾಮ
ಸ್ಮರಿಸುವರ ವಜ್ರಪಂಜರ ನಿಮ್ಮ ನಾಮ ೧

ಧರೆಯೊಳಗೆ ದ್ರೌಪದಿಯ ಸ್ಮರಣೆಗೊದಗಿದ ನಾಮ
ಕರುಣದಿಂದಭಿಮಾನಗಾಯ್ದ ನಾಮ
ದಾರಿದ್ರ್ಯವನು ಸುಧಾಮನಿಗಿಂಗಿಸಿದ ನಾಮ
ಸಿರಿ ಸಂಪತ್ತವು ಅಯಿತೀ ನಾಮ ೨

ಹರುಷಕರವಿತ್ತು ಉಪಮನ್ಯಗೊಲಿದ ನಾಮ
ಕ್ಷೀರಸಾಗರದ ನಾಮ
ಶರಣುಹೊಕ್ಕವರ ಪರಿಪರಿ ಕಾಯ್ದ ನಾಮ
ಧೀರ ಧ್ರುವಗಚಳ ಪದವಿತ್ತ ನಾಮ ೩

ಕರೆದು ನಾರಗ ನೆಂದವನ ತಾರಿಸಿದ ನಾಮ
ಪರಮಪಾತಕ ಪರಿಹರಿಸಿದ ನಾಮ
ವರ ಮುನಿಜನರ ತೃಪ್ತಿಗೈಸುವ ನಾಮ
ಪರಮ ಭಕ್ತರ ಪ್ರಾಣಪ್ರಿಯ ನಾಮ ೪

ದುರಿತ ದಾರಿದ್ರ್ಯ ವಿಧ್ವಂಸಗೈಸುವ ನಾಮ
ಕರುಣಸಾಗರ ಪರಿಪೂರ್ಣ ನಾಮ
ನರಕೀಟಕ ಮಹಿಪತಿಯ ತಾರಕ ನಾಮ
ಪರಮ ಸಾಯೋಜ್ಯ ಗುರು ದಿವ್ಯ ನಾಮ ೫

## ೧೦೮

ಪಾಲಿಸಯ್ಯ ಪೂರ್ಣ ಲೋಲ ಲಕ್ಷುಮಿರಮಣ ಧ್ರುವ

ಮುನಿವರ ಪಾಲಕ
ಘನ ಸುಖದಾಯಕ
ಕನಕಾಂಬರಧರ ಕಸ್ತೂರಿ ತಿಲಕ
ಅನಾಥ ಬಂಧು ಅರ್ತ ರಕ್ಷಕ ೧

ಸಮಸ್ತಕೆ ನೀ ದಾತ
ವಿಮಳ ವಿರಾಜಿತ
ಕಮನೀಯಾನನ ಕಮಲ ಸಂಭವಸುತ
ಸೋಮಜು ವರಪ್ರಿಯ ಕಾಮಪೂರಿತ ೨

ಅನಂಗಜನಕ ಅಣುರೇಣುವ್ಯಾಪಕ
ದೀನ ಮಹಿಪತಿಗೆ
ನೀ ಬೀರೊ ಸ್ವಾನಂದಸುಖ
ಅನಂತಕೋಟಿ ಬ್ರಹ್ಮಾಂಡನಾಯಕ ೩

## ೧೦೯

ಪಾಲಿಸೊ ದೇವ ಮೂಲೋಕ ಕಾವ
ಎಲ್ಲರೊಳ ಗೀವ ಶ್ರೀ ಲಕ್ಷುಮಿಯ ಜೀವ ಧ್ರುವ

ಮುನಿಜನ ಪಾಲ ಘನಸುಖಲೋಲ
ಅನಾಥರನುಕೂಲ ದೀನದಯಾಳ ೧

ಕರುಣಾಸಾಗರ ಪರಮ ಉದಾರ
ಸುರಜನ ಸಹಕಾರ ದುರಿತ ಸಂಹಾರ ೨

ಸಿರಿಲೋಲ ಭೂಷಣ ಹರಿನಾರಾಯಣ
ತರಳ ಮಹಿಪತಿ ಪ್ರಾಣ ಹೊರಿಯೋ ನೀ ಪೂರ್ಣ ೩

## ೧೧೦

ಬಲುದೊಡ್ಡ ಧೊರಿ ದೊರಕಿದೆನಗೊಬ್ಬ ನೋಡಿ
ಸಲಹುತಿಹ್ಯ ಸಕಲಾರ್ಥ ಸಾರಾಯ ನೀಡಿ ಧ್ರುವ

ದೊರೆಗಳಾದವರಿಗೆಲ್ಲ ಈತನೆ ದೊರೆಯು
ಚರಣಸೇವೆಯಲ್ಲಿಹಳು ಅಖಂಡ ಸಿರಿಯು
ಸುರಮುನಿಜನರ ಪಾಲಿಸುತಿಹ್ಯ ಪರೋಪರಿಯು
ಸರಿಸಿಜೋದ್ಭವನುತಗಿಲ್ಲ ಸರಿಯು ೧

ಅನಂತಕೋಟಿ ಬ್ರಹ್ಮಾಂಡ ನಾಯಕನೆಂದು
ಅನಂತಸಿದ್ಧಿ ವಾಲ್ಗೈಸುತಿಹವು
ಅನಂತಗುಣ ಪರಿಪೂರ್ಣ ಶ್ರೀ ಹರಿಯೆಂದು
ಅನಂತಶ್ರುತಿ ಸ್ಮೃತಿ ಸಾರುತಿಹ್ಯವು ೨

ಅನೆಮೊದಲಿರುವೆ ಕಡೆ ಅನುದಿನಾಹಾರವಿತ್ತು
ಜನವನವಿಜನದಿ ರಕ್ಷಿಸುತಿಹನು
ದೀನ ಮಹಿಪತಿಸ್ವಾಮಿ ಭಾನುಕೋಟಿತೇಜ
ತಾನೆ ತಾನಾಗೆನಗೆ ಸಲಹುತಿಹ್ಯನು ೩

## ೧೧೧

ಬಲು ದೊಡ್ಡಸ್ವಾಮಿ ಮೂಲೋಕದೊಡಿಯ ನಮ್ಮ ಧ್ರುವ

ಅನಂತಕೋಟಿ ಬ್ರಹ್ಮಾಂಡ ಅನುದಿನನಾಳುತ ಪ್ರಚಂಡ
ತಾನೆ ಆಗ್ಯಾನೆ ಅಖಂಡ ಘನಗುರು ಮಾರ್ತಾಂಡ ೧

ದಿಟ್ಟ ಧ್ರುವಗೆ ಅಚಲಪದದಲಿಟ್ಟ ದೃಷ್ಟಿಸಿ
ವಿಭೀಷಣಗೆ ಸ್ಥಿರಕೊಟ್ಟ
ದುಷ್ಟರ ಜನರ ಕುಟ್ಟಿ ನಿಷ್ಠುರ ನಿಜಶ್ರೇಷ್ಠ ೨

ಕೊಟ್ಟರೆ ಕೊಡುವ ಸೂರ್‍ಯಾಡಿ
ಶಿಷ್ಟರಜನರಿಗಭಯವ ನಿಜನೋಡಿ
ಮುಟ್ಟಿ ಮುದ್ರಿಸಿ ದಯಮಾಡಿ ಪೃಷ್ಠದಲಿ ನೋಡಿ ೩

ಇತ್ತ ಭಾಷೆಗೆ ತಾ ಎಂದಿಗೆ ತಪ್ಪ ತುತ್ತುತುತ್ತಿಗೆ
ಗ್ರಾಸವು ತಂದಿಪ್ಪ
ಚಿತ್ರಕಾಶದ ಸ್ವರೂಪ ಭಕ್ತರ ಪಾಲಿಪ ೪

ನೇಮಿಸಿ ಮಹಿಪತಿಗೆ ಶ್ಲಾಘ್ಯ
ನಾಮದೊಲವಿಲೆ ತನುನಿಜಭಾಗ್ಯ
ಸ್ವಾಮಿಸೇವೆಗೆ ಮಾಡಿದ ಯೋಗ್ಯ ಪ್ರೇಮದಂತಾಭೋಗ್ಯ ೫

## ೧೧೨

ಬಿರದುದಾರದು ಗೋವಿಂದ
ಅರಿತು ನೋಡಯ್ಯ ಶ್ರೀ ಹರಿ ಮುಕುಂದ ಧ್ರುವ

ಪತಿಯ ಕಣ್ಣಿನ ಮುಂದೆಳಿಯಲು ಸತಿಯ
ಗತಿಗೊತ್ತಿಹ್ಯದು ದಾರಿಗೆ ಕೊರತಿಯ (ತೆಯು?) ೧

ಒಡಿಯನ ಮುಂದೆ ಬಂಟಗಾಗಿರೆ ಕುಂದು
ಒಡನೆ ಬೀಳುದು ತೊಡಕಾರಿಗೆ ಬಂದು ೨

ನಿನ್ನವನೆನಿಸಿ ಮಹಿಪತಿಗೆ ಪೂರ್ಣ
ಇನ್ನರಹುವರೆ ಎನ್ನವಗುಣ ೩

## ೧೧೩

ಭಕ್ತವತ್ಸಲನೀತ ಶಕ್ತ ಸದ್ಗುರುನಾಥ
ಸಕಲ ಸಮ್ಮತ ಏಕೋದೇವನೀತ ಧ್ರುವ

ಬಲಿಯಬಾಗಿಲ ಕಾಯ್ದು
ಒಲಿದ ಫಲುಗುಣಗೀತ
ತಲೆಗಾಯ್ದು ಪ್ರಹ್ಲಾದನ ಪ್ರಾಣಪಡದಾತ
ಸಲಹಿ ಪಾಂಡವರ ರಕ್ಷಿಸಿದಾತ ೧

ದಿಟ್ಟ ಧ್ರುವಗೊಲಿದು ನಿಜಪಟ್ಟಗಟ್ಟಿದಾತ
ನಷ್ಟಾಜಮಿಳನ ನಿಷ್ಠೆಮಾಡಿದಾತ
ಕೊಟ್ಟು ವಿಭೀಷಣಗೆ ಇಟ್ಟ ಲಂಕೆಯ ಲೀತ
ಶಿಷ್ಟಜನಪಾಲಕ ಸೃಷ್ಟೇಶ ೨

ಶಿಲೆಗೆ ಉದ್ಧರಗತಿಯ ಇಳಿಯೊಳಗೆ ಇತ್ತಾತ
ಮೂಲೋಕದೊಡೆಯ ಶ್ರೀಹರಿಯು ಈತ
ಪಾಲಿಸುವ ಮಹಿಪತಿಯ ಲೋಲಲಕ್ಷ್ಮೀಕಾಂತ
ಕುಲಕೋಟಿ ಬಂಧು ತಾ ಬಳಗವೀತ ೩

## ೧೧೪

ಭಜಿಸಬಾರದೆ ಮನವೆ ಭಜಿಸಬಾರದೆ
ಭಜಿಸಲಿಕ್ಕೆ ಭಾವದಿಂದ ನಿಜವಾ ಗೊಲಿವ ಹರಿ ಮುಕುಂದ ಧ್ರುವ

ನಿಜವಬಿಟ್ಟು ದಣವದ್ಯಾಕೆ ತ್ರಿಜಗಪತಿಗೊಂದಿಸದೆ ತಾನು
ಭಜನ ಮುಖ್ಯವೆಂದು ಸುಜನರೆಲ್ಲ ಪೇಳುತಿರಲಿಕ್ಕಾಗಿ ೧

ಪ್ರೀತಿಯಿಂದರ್ಜುನ ನೋಡಿ ಗೀತೆಯಲ್ಲಿ ಶ್ರೀಕೃಷ್ಣತಾನು
ನೀತಿಹಿತವ ಭಕ್ತಿಯೋಗದಲ್ಲಿ ಸಾರತಿರಲಿಕ್ಕಾಗಿ ೨

ಪ್ರಕಟಭಾವಕೊಲಿದ ನೋಡಿ ಅಖಿಲದೊಳು ಸುಲಭದಿಂದ
ಭಕುತಿ ಸುಖವನಿತ್ತು ಸಲಹುತಿಹ್ಯ ಮಹಿಪತಿಸ್ವಾಮಿಗಿನ್ನು ೩

## ೧೧೫

ಭಜಿಸಿ ನೋಡಿರೋ ಭಾವಭೋಕ್ತನ
ಅಜಸುರೊಂದ್ಯ ಸುಜನಪಾಲ ತ್ರಿಜಗದಾತ್ಮನ ಧ್ರುವ

ಭಾವಕ ಸುಲಭ ಜೀವದ ನೆಲೆನಿಭ
ಕಾವಕರುಣ ದೇವನೀತ ಪ್ರಾಣವಲ್ಲಭ ೧

ರಾಜಿಸುತಿಹ್ಯನು ತೇಜೋಮಯದಲಿ
ಭಜಕ ಪ್ರಿಯನಾಗಿ ಒಲಿವ ನಿಜಸುಮನದಲಿ ೨

ಡಂಭಭಕುತಿಗೆ ಇಂಬದೋರನು
ನಂಬಿನಡೆವ ಭಕ್ತಜನರ ಮನೆಯೊಳಿಹ್ಯನು ೩

ಭಕುತಿ ಭಾವಕ ನೆಲಿಯುಗೊಂಬನು
ಮಕುಟಮಣಿ ಸುಭಾನುಕೋಟಿ ಪ್ರಕಟ ಹೊಳೆವನು ೪

ಒಂದು ಮನದಲಿ ಹೊಂದಿ ಸುಖಿಸಿರ್‍ಯೊ
ಎಂದೆಂದು ಬಿಡದೆ ಸಲಹುತಿಹ್ಯ ಮಹಿಪತಿ ಸ್ವಾಮಿಯ ೫

## ೧೧೬

ಭಜಿಸು ಮನವೆ ಭಜಿಸು ಮನವೆ
ಅಜ ಸುರ ಮುನಿ ವಂದಿತ ಪಾದ
ಪೂಜಿಸು ನಿಜಸ್ವರೂಪ ನಿತ್ಯ
ಸುಜನ ಮನೋಹರನ ೧

ಪರಮಪುರುಷ ಪರಂಜ್ಯೋತಿ
ಪಾರಾವಾರ ಹರಿಗೋಪಾಲ
ಕರುಣಾಕೃಪಾಲ ಮೂರುತಿ
ಸ್ವಾಮಿ ಸಿರಿಲೋಲನ ೨

ಅತೀತ ಗುಣಾನಂತಮಹಿಮ
ಪತಿತಪಾವನ ಪೂರ್ಣ
ಸತತ ಸದೋದಿತ ಪಾದ
ಅತಿಶಯಾನಂದನ ೩

ಅವ್ಯಕ್ತ ಅವಿನಾಶ ಸು
ದಿವ್ಯ ಸುಪವಿತ್ರದಾಗರ
ಘವಘವಿಸುವ ದಿವ್ಯ ತೇಜ
ರವಿಕೋಟಿ ಕಿರಣನ ೪

ಅನಾಥಬಂಧು ಅನುದಿನ
ಅಣುರೇಣು ತೃಣಪೂರ್ಣ
ಪ್ರಾಣದೊಡೊಯ ಮಹಿಪತಿ
ದೀನದಯಾಳುನಾ ೫

## ೧೧೭

ಭಜಿಸೊ ಮನವೆ ಪೂರ್ಣ ಅಜಸುರೊಂದಿತ ಚರಣ
ಸುಜನ ಹೃದಯ ಪ್ರಾಣ ಗಜಭಯ ನಿವಾರಣ ೧

ಹಿಡಿಯ ಬ್ಯಾಡನುಮಾನ ಜಡಿಯೊ ನಿಜಧ್ಯಾನ
ಪಡಿಯೊ ಗುರು ಕರುಣ ಕುಡಿಯೊ ಅಮೃತ ಪೂರ್ಣ ೨

ಸಾಧಿಸಬೇಕೊಂದೇ ಮನ ಬುಧಜನರ ಜೀವನ
ಸದಮಲಾನಂದ ಸದ್ಗತಿ ಸುಖಸಾಧನ ೩

ಪಾವನಗೈಸುವದಾ ಭಾವಿಸೊ ಗುರುಪಾದ
ಜೀವಜೀವದ ಬೋಧ ಸೇವಿಸು ನಿಜ ಸುಸ್ವಾದ ೪

ತ್ಯಜಿಸಿ ತನುಮನ ದ್ವಂದ್ವ ಭಜಿಸೊ ಭಾವಾರ್ಥದಿಂದ
ಪೂಜಿಸೊ ಮಹಿಪತಿ ಆನಂದ ನಿಜಗುರು ಪಾದಾರವಿಂದ ೫

## ೧೧೮

ಭಾವಭಕ್ತಿಗೊಲಿವ ತಾಂ ಶ್ರೀಹರಿ
ಕಾವ ಕರುಣದಲಿ ಪರೋಪರಿ ಧ್ರುವ

ಕಂದ ಪ್ರಹ್ಲಾದನ ಸದ್ಭಾವಕಾಗಿ
ಸಂಧಿಸೊದಗಿ ಬಂದ ನರಸಿಂಹನಾಗಿ
ತಂದೆ ತಾಯಿ ಬಂಧು ಸಮಸ್ತವಾಗಿ
ಬಂದು ರಕ್ಷಿಸಿದ ಪ್ರತ್ಯಕ್ಷವಾಗಿ ೧

ಭಾವದಿಂದ ದ್ರೌಪದಿಗಾಗ್ಯಧ್ಯಕ್ಷ
ತಾವತಾವಿಲಿ ಕಾಯಿದೆ ಪ್ರತ್ಯಕ್ಷ
ಭುವನದೊಳಾಗಿ ಪಾಂಡವಪಕ್ಷ
ಜೀವ ಪ್ರಾಣಾಗಿ ಮಾಡಿದ ಸಂರಕ್ಷ ೨

ಭಾವದಿಂದಾಗುವ ಭಕ್ತರಾಧೀನ
ದೇವೋತ್ತಮದ ಬಿಟ್ಟು ಹಿರಿಯತನ
ದಾವದೊಂದೇಕಾಗಿ ತಾಂ ಸಾವಧಾನ
ಈವ್ವಾಭಕ್ತರ ಮನಿಲ್ಯನುದಿನ ೩

ಭಾವದಿಂದುದಿಸುವ ಸ್ವಯಂಭಾನು
ಭಾವಿಕರಿಗಾಗುವ ಶ್ರಯಧೇನು
ಭಾವದಿಂದಾಗುವ ಸಫಲ ತಾನು
ಭಾವದಿಂದ ಭಾವ ಪೂರಿಸಿದನು ೪

ಭಾವವೆಂಬಂಜನ ಕಣ್ಣಿಲೂಡಿ
ಭಾವದಲುಂಬುದನು ಒಡಮೂಡಿ
ಭಾವದಿಂದ ಮಹಿಪತಿ ಕೈಯಗೂಡಿ
ಜೀವ ಪಾವನ್ನಗೈಸುತಿಹ್ಯ ನೋಡಿ ೫

## ೧೧೯

ಭಾಮೆ ನೀ ತಂದು ತೋರೆ ದೇವ
ದೇವೆನಿಸುವ ಶ್ರೀ ಹರಿ ವಾಸುದೇವನ ಧ್ರುವ

ಬ್ರಹ್ಮಾದಿ ವಂದ್ಯನ ಹೊಮ್ಮುಕುಟದವನ
ರಮ್ಯದೋರುವ ಜಗನ್ಮೋಹನನ
ಘಮ್ಮನೆ ಹೊಳಿವ ಕತ್ತುರಿ ತಿಳಕನ
ಸುಮ್ಮನೆ ಸುಸ್ವರದಿ ಕೊಳಲೂದುವನ ೧

ಹದ್ದೆ ಅಡುವನ ಮುದ್ದು ಮಾತಿನವನ
ಗೆದ್ದು ಸಿದ್ಧಿಯ ಮಣಿತಂದವನ
ತಿದ್ದಿ ಕುಬಜಿಗೊಲಿದು ಶುದ್ಧಮಾಡಿದವನ
ಉದ್ಧವಪ್ರಿಯ ಶ್ರೀ ಆದಿಕೇಶವನ ೨

ಸುಂದರ ವದನನ ಸಾಂದ್ರಸುಖದವನ
ಕಂದರ್ಪಕೋಟಿ ಸುಲಾವಣ್ಯನ
ಎಂದೆಂದು ಕರುಣನ ಇಂದಿರೆ ರಮಣನ
ಬಂದು ಮಹಿಪತಿ ಮನೋಹರ ಮಾಡುವನ ೩

## ೧೨೦

ಮದನಮೋಹನ ಮಾಧವ ಮುರಾರಿ
ವಿದುರವಂದ್ಯ ಸದಾನಂದ ಶ್ರೀಹರಿ ಧ್ರುವ

ಗೋಪವೇಷಧರ ಗೋಪ ಕೀಶೋರ
ಗೋಪೀಜನ ಮುಖಚಂದ್ರ ಚಕೋರ ೧

ಯದುಕುಲತಿಲಕ ವಿರಾಜಿತ ಪೂರ್ಣ
ಸದೋದಿತ ಸುಖಸಾಂದ್ರ ಸದ್ಗುಣ ೨

ಭಾಸ್ಕರಕೋಟಿ ತೇಜ ಮಾಮನೋಹರ
ದಾಸ ಮಹಿಪತಿ ಸ್ವಾಮಿ ಸಕಲ ಸಹಕಾರ ೩

## ೧೨೧

ಮದನಮೋಹನ ಮಾಮನೋಹರ ಶ್ರೀದೇವ
ಸಾಧುಪಾಲನಕಾಗಿ ಬಂದು ಮೇದಿನಿಯ ಭಾರಿಳುಹಿದೆ ಧ್ರುವ

ಬಂದು ಯದುಕುಲದಲಿ ಜನಿಸಿದೆ ಶ್ರೀ ಕೃಷ್ಣನು
ತಿಂದು ಮೊಲಿಯನು ಕೊಂದು
ಪೂತಣಿ ನಂದಗೋಕುಲಲ್ಯಾಡಿದೆ

ಮಂದರಧರ ಸುಂದರರೂಪ ಮುಕುಂದ
ವೃಂದಗೋಪರ ನಂದದಲಿ ಕೂಡಿ ಚಂದ ಚಂದದಲ್ಯಾಡಿದೆ ೧

ದೇವಕೀ ಕಂದ ದೇವಾಧಿದೇವ ಗೋವಿಂದ
ಹಾವನ್ಹಿಡಿದಿ ನೀ ಮೆಟ್ಟಿ ಫಣಿಯಲಿ ಮಾವನ ಮರ್ದಿಸಿದೆ
ಸಾವಿರನಾಮ ಪಡೆದ ನೀ ಪೂರ್ಣ ಶ್ರೀಹರಿ
ದೇವ ಇಂದ್ರನು ಮಳಿಯಗರೆ ಗೋವರ್ಧನವ ನೀನೆತ್ತಿದೆ ೨

ವಿದುರವಂದ್ಯ ಸದಾ ಪಾಂಡವಪಕ್ಷ ಶ್ರೀಧರ
ಹೆದರದೀಹ್ಯ ದುರುಯೋಧನನ ನೀ ಕದನ
ನಿರ್ಮಿಸಿ ಮಡುಹಿದೆ
ಬುಧಜನಪ್ರಿಯ ಶ್ರೀ ವಾಸುದೇವ ನಮ್ಮಯ್ಯ
ಸಾಧಿಸ್ಯನುದಿನ ಸಲಹುತಿಹ್ಯ
ಮಹಿಪತಿಯ ಘನಸುಖದಾಯಕ ೩

## ೧೨೨

ಯಾಕೆ ಬಾರನೇ ರಂಗಯ್ಯ ಯಾಕೆ ಬಾರನೇ ।
ಲೋಕವೀರೇಳು ವ್ಯಾಪಕ ಸುಖವವಿರಲು ಮನೆಗೆ ಧ್ರುವ

ಸ್ಮರನ ಬಾಣದ ಮೊನಿಗೆ । ಗುರಿಯಮಾಡಿ ತಾಯೆನೆಗೆ ।
ಸಾರುವರೇ ಎನ್ನಗಲಿ ತರಳೆಯಂದರುವುತಲಿ ೧

ಕಡೆಗೆ ಕರುಣಾಳು ನಮ್ಮ ವಡಿಯಾನೊಳೂ ತಪ್ಪಿಲ್ಲಮ್ಮಾ ।
ಪೊಡವಿಲೆ ಪೆಣ್ಣೊಡಲೆ ವಿಡಿಯಬಾರದು ಬಾಲೆ ೨

ಎನ್ನ ಮನಾ ಎನೊಲ್ಲದು ಕಣ್ಣಿಗೆ ನಿದ್ರೆಬಾರದು ।
ಇನ್ನು ಬಾರದೇನೆದಯಾ ಸನ್ನುತ ಮಹಿಪತಿ ಪ್ರೀಯಾ ೩

## ೧೨೩

ಯಾಕೆ ಬಾರಯ್ಯ ನೀ ಏಕೋ ದೇವನೆ ಎನ್ನ
ಏಕಾಕಾರದಲೆನ್ನ ಹೊರಿಯಲಾರೇನಯ್ಯ ಧ್ರುವ

ನೀರ ಥೆರಿಯ ಕಡಿದು ಹೃದಯದಕರ ಚರಣದಿ
ಭರದಿ ಮುಣಗಿ ನೀರ ನಡಿಗಿ ದಣದೇನಯ್ಯ ೧

ವಾರಿಧಿಮಥನದಿ ಮೇರುಪರ್ವತವನ್ನು
ಭಾರ ಬೆನ್ನಲಿ ಪೊತ್ತು ಬೆವರಿ ದಣಿದೇನಯ್ಯ ೨

ಧರಿಯ ಕದ್ದಸುರನ ಕೋರೆದಾಡಿಂದ ಸೀಳಿ
ಭರದಿಂದ ಹೊಯಿದಾಡಿ ಹೋರಿ ದಣಿದೇನಯ್ಯ ೩

ತರಳಗೊಲಿದು ಪ್ರಕಟಿಸಿ ದೈತ್ಯನ ಸೀಳಿ
ಕರಳೊನಮಾಲಿಯ ಧರಿಸಿ ದಣಿದೇನಯ್ಯ ೪

ಧರಿಯು ಮೂರಡಿ ಮಾಡಿ ಎರೆದು ದಾನವ ಬೇಡಿ
ನರನ ಪಾತಾಳಕೊತ್ತಿ ಬಳೆದು ದಣಿದೇಯನಯ್ಯ ೫

ಹಿರಿಯಳ ಶಿರವನು ಹರಿದು ಕತ್ತರಿಸಿನ್ನು
ಕರದಲ್ಲಿ ಪರಶುವ ಪಿಡದು ದಣಿದೇನಯ್ಯ ೬

ಶಿರಗಳ ಚೆಂಡಾಡಿ ರಾವಣೀಂದ್ರ ಜಿತನ
ಶರದಿ ಕುಂಭಕರ್ಣನ ಎಚ್ಚದು ದಣಿದೇನಯ್ಯ ೭

ಷತುರುಗಳ ಕಾಯಿದು ಉರುಗನ ತುಳದಿನ್ನು
ಗಿರಿಯ ಬೆರಳಲೆತ್ತಿ ತೋರಿ ದಣಿದೇನಯ್ಯ ೮

ಬರಿಯ ಬತ್ತಲೆ ಅಗಿ ಅರಿಯದೆ ತ್ರಿಪುರವ
ಸೇರಿ ನಾರೇರ ವ್ರತವಳಿದು ದಣಿದೇನಯ್ಯ ೯

ಏರಿ ಕುದುರಿಯ ತಿರುಹು ರಾಹುತನಾಗಿ
ಪರಿ ಪರಿ ರೂಪವ ತಾಳಿ ದಣಿದೇನಯ್ಯ ೧೦

ಸರ್ವಾಪರಧವು ಕ್ಷಮೆಯಿಂದ ಮಹಿಪತಿಯ
ಮನದೊಳು ಬಂದು ನಿಂದು ಹೊರೆದು ರಕ್ಷಿಸಯ್ಯ ೧೧

## ೧೨೪

ರಕ್ಷಿಸೊ ಸ್ವಾಮಿ ನೀ ಪಕ್ಷಿ ಸುವಾಹನ
ಭಿಕ್ಷೆ ಸುನೀಡೊ ನೀ ಲಕ್ಷ ಸುಸಾಧನ
ಅಕ್ಷಯಾನಂದ ನೀ ಲಕ್ಷುಮಿ ಜೀವನ
ಪಕ್ಷ ನೀ ಪ್ರಾಣಕ ಈಕ್ಷಿಸಿದವನ ೧

ಸೃಷ್ಟಿಗಧಿಕ ನೀ ವಿಷ್ಣು ಜನಾರ್ಧನ
ಕಷ್ಟ ನೀ ಹಿಂಗಿಸೊ ದುಷ್ಟರ ಮರ್ದನ
ಶಿಷ್ಟರ ಪಾಲಕ ಶ್ರೇಷ್ಠ ನಾರಾಯಣ
ದೃಷ್ಟಿಸಿ ನೋಡೊ ನೀ ಕೃಷ್ಣ ಕೃಪಾಘನ ೨

ಈಶನೆಂದರಿಯದೆ ದೋಷದ ರಾಶಿ ನಾ
ವಾಸನೆ ಪೂರಿಸೊ ದಾಸರ ದಾಸ ನಾ
ಏಸು ತಾ ಜನ್ಮಕೆ ಬಂದು ಸೂಸಿದೆನೊ
ಹೇಸಿತು ಜೀವನ ಸ್ಮರಿಸಬೇಕೆಂದು ನಾ ೩

ನಿಮ್ಮನೆ ನೋಡಬೇಕೆಂದು ಬಂದೆ ನಾ
ಘಮ್ಮನೆ ಪೂರಿಸೊ ಭಾವನೆ ಕಂದನ
ತಮ್ಮನೆ ಬೇಡಿಕೊಂಬುದು ತಾ ವಂದನ
ಅಮ್ಮ ನಮ್ಮಪ್ಪನೆ ಬಂಧು ನೀ ಎಂದೆ ನಾ ೪

ಕಾಣದ ಪಾಮರ ಹೀನ ಸೂಕರ
ಏನು ತಾ ಬಲ್ಲದು  ಲೂನದ ಸೂಕರ
ನೀನೆ ದಯಾನಿಧೆ ಜ್ಞಾನದ ಸಾಗರ
ನ್ಯೂನ ನೋಡದೆ ತಾರಿಸೊ ಶ್ರೀಧರ ೫

ಪಾರ ನೀ ಗೆಲಿಸೊ ದ್ವಾರಕಿನಾಥನೆ
ಸಾರಿ ನೀ ಬೋಧವ ತಾರಿಸೊ ದಾತನೆ
ತೋರಿ ನೀ ಪಾದವ ಬೀರು ಸ್ವಹಿತನೆ
ಸಿರಿ ಲೋಲನೆ ನೀಕರುಣಿಸಿ ಮಾತನೆ ೬

ಪಾಲಿಸೊ ಪ್ರಾಣವ ಬಾಲಮುಕುಂದನೆ
ಲಾಲನೆ ನೋಡು ಗೋಪಾಲ ಗೋವಿಂದನೆ
ತ್ಯಕ್ತ ನಾ ತಾಳು ನೀ ಸಚ್ಚಿದಾನಂದನೆ
ಕೀಲನೆ ಹೇಳು ನೀ ಭಕ್ತಿಯ ವಂದನೆ ೭

ದೇವರ ದೇವನೆ ಕಾವ ಕರುಣನೆ
ಜೀವದ ಜೀವ ನೀ ಸ್ವಾಮಿ ಸರ್ವೇಶನೆ
ಭಾವದ ಭಾವ ನೀ ಸಾವಿರ ನಾಮನೆ
ಸೇವೆಗೆ ಯೋಗ್ಯನ ಮಾಡು ಸರ್ವೋತ್ತಮನೆ ೮

ಹಿಂಡ ದೈವಕೆ ಪ್ರಚಂಡ ಪರೇಶನೆ
ಗಂಡು ಹೆಣ್ಣಿಗೆ ತಾ ಒಬ್ಬ ಸರ್ವೇಶನೆ
ಮಂಡಿ ಮರೆಯಲಿಹನೆ ಮಹೇಶನೆ
ಕಂಡುಕಾಂಬ ಸುಖದೋರು ದೇವನೆ ೯

ವೇದಕ ನಿಲ್ಕದಾಭೇದ್ಯ ಪುರುಷನೆ
ಸ್ವಾದಕೆ ಸಿಲ್ಕದ ಸಾರ ಸುರಸನೆ
ಅದಿಗಿಂದತ್ತಲ್ಯಾನಾದಿ  ನಿರ್ವಿಶೇಷನೆ
ಹಾದಿದೋರಿಕೊಡೊ  ಭಕ್ತಿಗೊಂದೀಶನೆ ೧೦

ಮಹಿಪತಿಗೆ ನೀ ಸ್ವಾಮಿ ಶ್ರೀನಾಥನೆ
ಬಾಹ್ಯ ಅಂತ್ರಕೆ ನೀನೆವೆ ಸುದಾತನೆ
ಸೋಹ್ಯದೋರಿಕೊಡೊ ಸಾಹ್ಯವುಳ್ಳಾತನೆ
ತ್ರಾಹಿಯಂದವನ ಮಾಡು ಸನಾಥನೆ ೧೧

## ೧೨೫

ರಾಮರಾಮೆನ್ನಿರೋ ಮುಖ್ಯ ತಾ ಕಾರಣ
ನೇಮದಿಂದಾಯಿತು ಅಹಲ್ಯೋದ್ಧರಣ
ರೋಮರೋಮಕೆ ತಾ ಪ್ರೇಮ ಬಾಹಗುಣ
ನಾಮಸ್ಮರಿಸಿ ದಶರಥಾತ್ಮಜನ ೧

ಒಮ್ಮೆ ಸ್ಮರಿಸಿರೊ ರಾಮರಾಮೆಂದು ತಾ
ಸುಮ್ಮನೆ ಬಾಹುದು ಸಾರದ ಅಮೃತ
ತಮ್ಮನ ಜೀವ ಪಡೆದ ಸಂಜೀವ ತಾ
ಝುಮ್ಮನೆ ಹಾದಿಮಾಡಿತು ಸಮುದ್ರ ತಾ ೨

ರಾಮರಾಮೆನ್ನಲು ಸಾಮರಾಜ್ಯಹುದು
ನೇಮದಿಂದೆನ್ನಿರೊ ಶ್ರಮ ನೀಗೋಗುದು
ನಾಮ ಕೊಂಡಾಡಲು ರಾಮನಂತಾಹುದು
ಸುಮ್ಮನೆಯಾದರೆ ತಾಮಸ ಬಾಹುದು ೩

ರಾಮರಾಮೆಂದರೆ ಬ್ರಹ್ಮರಾಕ್ಷಸ ತಾ
ಸುಮ್ಮನೆ ಓಡಿಹೋಗುದು ತಾತ್ಕಾಲತಾ
ನಾಮ ಸೇವಿಸಲು ಸುಮ್ಮಲ್ಹೊಳೆದು ತಾ
ಝುಮ್ಮನೆ ಬಾಹುದು ಭಾಗ್ಯ ಕೈಕೊಟ್ಟು ತಾ ೪

ರಾಮನಾಮವೆ ತಾ ಪಾಪಕೆ ತಾ
ನಾಮ ತೇಲಿಸಿತು ನೀರೊಳು ಪರ್ವತ
ನೇಮದಿಂದಾದರ ಭಕ್ತರರಹುತಾ
ಸೀಮಿ ಕೈಕೊಟ್ಟಿತು ಭಕ್ತಗೆ ಶಾಶ್ವತ ೫

ನಾಮವೆ ಕಪಿಕುಲವ ತಾರಿಸಿತು
ಸೋಮಶೇಖರಗೆ ತಾನೆ ಪ್ರಿಯಾಯಿತು
ಗ್ರಾಮನಂದಿಯಲಿ ನೇಮಪೂರಿಸಿತು
ರೋಮರೋಮೆಲ್ಲ ಭರತಗ ಸುಖವಾಯಿತು ೬

ಸ್ವಾಮಿ ಶ್ರೀರಾಮನಾಮ ಸುಅಮೃತ
ಕಾಮಪೂರಿಸುವ ಕಾಮಧೇನುವೆ ತಾ
ನೇಮದಿಂದಾಗುವ ಮಹಿಪತಿಗಿಂತ
ರಾಮರಾಜ್ಯವೆ ಎನ್ನೊಳಗಾಗೆದ ತಾ ೭

## ೧೨೬

ರಾಮ ಸಲಹಯ್ಯ ಪುಣ್ಯನಾಮ ಶ್ರೀ ರಾಘವೇಂದ್ರ
ಪೂರಿತಕಾಮ ನೇಮ ಶ್ಯಾಮ ಪರಮಗುಣ ರತ್ನಧಾಮ ಧ್ರುವ

ವನಜಾಂತಕ ಕುಂದರದನ ಅನುಪಮ ಸುಂದರವದನ
ರಣದಲಿ ಜಿತದಶವದನ ಅನಂತ ಮದನಲಾವಣ್ಯ ಸದನ ೧

ಕರುಣ ಶರಣ ಭರಣ ಭರಣ ಧರಣೋದ್ಧಾರಣ
ಸ್ಫುರಣ ಕಿರಣದೊರಣ ಚರಣ ಅರುಣಾಂಬುಜಾಲಯರಮಣ ೨

ವೀರಗುಣಗಂಭೀರ ಕ್ರೂರಾಸುರ ಸಂಹಾರ
ಶೂರ ಜನ್ಮವಿದೂರ ಮಹಿಪತಿ ಧೀರ ಕೃಷ್ಣೊಡಿಯ ಉದಾರ ೩

## ೧೨೭

ವಾಸುದೇವನನಾ ಶ್ರೈಸದಿಹ ಉಪಾಸನ್ಯಾತಕೆ
ಧ್ಯಾಸ ಬಲಿಯದಿಹ ಮಿಗಿಲಭ್ಯಾಸವ್ಯಾತಕೆ ಧ್ರುವ

ಹೃದಯ ಶುದ್ಧವಾಗದೆ ಉದಯಸ್ನಾನವ್ಯಾತಕೆ
ಬದಿಯಲೀಹ್ಯ ವಸ್ತುಗಾಣದ ಜ್ಞಾನವ್ಯಾತಕೆ

ಉದರ ಕುದಿಯು ಶಾಂತ ಹೊಂದದ ಸಾಧನ್ಯಾತಕೆ
ಬುಧರ ಸೇವೆಗೊದಗದೀಹ ಸ್ವಧನವ್ಯಾತಕೆ ೧

ಭಾವ ನೆಲಿಯುಗೊಳ್ಳ ದೀಹ್ಯ ಭಕುತಿದ್ಯಾತಕೆ
ಕಾವನಯ್ಯನ ಕಾಣದೀಹ್ಯ ಯುಕತದ್ಯಾತಕೆ
ದೇವದೇವನ ಸೇವೆಗಲ್ಲದ ಶಕುತ್ಯದ್ಯಾತಕೆ
ಹ್ಯಾವ ಹೆಮ್ಮೆ ಅಳಿಯದೀಹ್ಯ ವಿರುಕಿತ್ಯಾತಕೆ ೨

ತತ್ವ ತಿಳಿಯದಿಹದೀ ವಿದ್ವತ್ವವ್ಯಾತಕೆ
ಸತ್ವಗುಣದ ಲಾಚರಿಸದಿಹ್ಯ ಕವಿತ್ವವ್ಯಾತಕೆ
ಚಿತ್ತಶುದ್ಧವಾಗದಿಹ ಮಹತ್ವವ್ಯಾತಕೆ
ವಿತ್ತ ಆಶೆಯು ಅಳಿಯದಿಹ ಸಿದ್ಧತ್ವವ್ಯಾತಕೆ ೩

ನೀತಿಮಾರ್ಗವರಿಯದೀ ಹ ರೀತ್ಯದ್ಯಾತಕೆ
ಮಾತುಮಿತಿಗಳಿಲ್ಲದವನು ಧಾತುವ್ಯಾತಕೆ
ಪ್ರೀತಿ ಆದರಳಿದ ಅಮೃತ ಊಟವ್ಯಾತಕೆ
ಜ್ಯೋತಿ ತನ್ನೊಳರಿಯದಲೆ ಉತ್ತಮದ್ಯಾತಕೆ ೪

ಮನವು ಸ್ಥಿರಗೊಳದ ನಿತ್ಯ ಶ್ರವಣವ್ಯಾತಕೆ
ನೆನವು ನೆಲೆಯಾಗೊಳ್ಳದಿಹ ಮನನವ್ಯಾತಕೆ
ತನುವಿನಲ್ಲಿ ಘನವು ಕಾಣದನುಭವ್ಯಾತಕೆ
ದೀನಮಹಿಪತಿಸ್ವಾಮಿಗಾಣದ ಜನಮವ್ಯಾತಕೆ ೫

## ೧೨೮

ವೆಚ್ಚಕುಂಟು ನಮಗೆ ಅಚ್ಯುತನಾಮ ನಿಶ್ಚಯದ ಧನವು ಧ್ರುವ

ವೆಚ್ಚಮಾಡಿದರೆಂದಿಗೆ ಅಚ್ಚಳಿಯದು ನಿಶ್ಚಯದ ಬದಕು
ಬಚ್ಚಿಟ್ಟುಕೊಂಡು ನಿಜ ಎಚ್ಚರಿಕಿಂದ ನಿಶ್ಚಿಂತದಲಿ ಉಂಬೆನು ೧

ಕೊಡಲುಂಟು ಕೊಳ್ಳಲುಂಟು ಮೊಡವಿಯೊಳು
ಪಡೆದ ಸಂಚಿತ ಧನವು
ಬಡತನವನು ಹಿಂಗಿಸಿತು ಒಡಿಯನಖಂಡ ಕೃಪೆಯಿಂದಲಿ ೨

ಸಾದ್ಯವಾಯಿತು ಎನಗೆ ಸದ್ಗುರು ಕೃಪೆಯಿಂದ ನಿಜಧನವು
ಬುದ್ಧಿವಂತರು ಕೇಳಿರೊ ಸಾಧನವ
ಮಾಡಿ ಸಾಧಿಸೊಕೊಂಬುವದು ೩

ಕಟ್ಟಬಿಡಲಾಗುದು ವಿಟ್ಟಿ ಹ್ಯಧನಕೊಟ್ಟರೆಂದಿಗೆ ತೀರದು
ಇಟ್ಟಿಹ ತನುಮನದಲಿ ಘಟ್ಯಾಗಿ ಕೇಳಿರೊ ಈ ಮಾತವ ೪

ಅರುಹು ಅಂಜನವಿಟ್ಟಿ ತೋರಿದ ಗುರುಕರದಲಿ ಈ ಧನವು
ಹರುಷವಾಯಿತು ಎನಗೆ ಧರೆಯೊಳು ತರಳಮಹಿಪತಿಗೆ ೫

## ೧೨೯

ವೈಷ್ಣವನಾರೆಂದು ದೃಷ್ಟಿಸಿ ಸೃಷ್ಟಿಯೊಳು
ವಿಷ್ಣುನರಿತವನೆ ವೈಷ್ಣವನು। ೧

ಭಕ್ತಿರಸದೊಳು ಮುಣುಗಿ ಭಕ್ತಿಗೈದುವ ಗತಿಯ
ಯುಕ್ತಿ ತಿಳಿದವನೆ ವೈಷ್ಣವನು ೨

ಹರಿ ಪರಂದೈವೆಂದು ಹರಿಯ ಕೊಂಡಾಡುತಲಿ
ಹರಿಯ ನೆನೆಯುವನೆ ವೈಷ್ಣವನು ೩

ಹರಿ: ಓಂ ತತ್ಸದಿತಿಯೆಂಬ ಹರಿವಾಕ್ಯವನು
ಅರಿತವನೆ ಪರಮ ವೈಷ್ಣವನು ೪

ಹರಿಧ್ಯಾನ ನೆಲೆಗೊಂಡು ಹರಿನಾಮ ಬಲಗೊಂಡು
ಹರಿಯ ಸ್ಮರಿಸುವವನೆ ವೈಷ್ಣವನು ೫

ಪರದೆ ಇಲ್ಲದೆ ಪಾರ ಬ್ರಹ್ಮಸ್ವರೂಪನು
ಗುರುತ ಕಂಡವನೇ ಪರಮ ವೈಷ್ಣವನು ೬

ಗುರುಕೃಪೆಯಿಂದ ಪರಗತಿ ಸಾಧನವು ಮುಟ್ಟಿ
ಅರಿತು ಬೆರೆದನೆ ಪರಮ ವೈಷ್ಣವನು ೭

ಮೂಲ ಮೂರುತಿಗ್ಯಾಗಿ ಮೇಲಗಿರಿಯನೇರುವ
ಕೀಲ ತಿಳಿದವನೆ ವೈಷ್ಣವನು ೮

ಉಂಟಾಗಿ ಇರುಳ್ಹಗಲಿ ಗಂಟ್ಹಾಕಿ ಹರಿಪಾದ
ಬಂಟನಾದವನೆ ವೈಷ್ಣವನು ೯

ಅರು ಕಂಟಕ ನೀಗಿ ಮೂರು ಬಲೆಯನು ದಾಟಿ
ಮೀರಿ ನಿಂದವನೇ ವೈಷ್ಣವನು ೧೦

ಆಶಿಯನೆ ಜರಿದು ನಿರಾಶೆಯನು ಬಲಿದು
ಹರಿದಾಸನಾದವನೆ ವೈಷ್ಣವನು ೧೧

ದ್ವಾದಶನಾದವನು ಸಾಧಿಸಿ ಕೇಳುತಲಿ
ಭೇದಿಸಿದವನೆ ವೈಷ್ಣವನು ೧೧

ಅನಿಮಿಷ ನೇತ್ರದಲಿ ಅನುದಿನ ಘನಸುಖವು
ಅನುಭವಿಸುವನೆ ವೈಷ್ಣವನು ೧೨

ವಿಷ್ಣುಭಕ್ತಿಯ ಸುಖವು ಮುಟ್ಟಿ ಮುದ್ರಿಸಿ
ಪುಷ್ಟವಾಗಿದೋರುವನೆ ವೈಷ್ಣವನು ೧೩

ವಿಷ್ಣುಮೂರ್ತಿಯ ಧ್ಯಾನ ದೃಷ್ಟಾಂತ ಮಹಿಪತಿಗೆ
ಕೊಟ್ಟಾ ಗುರು ಪರಮ ವೈಷ್ಣವನು ೧೪

## ೧೩೦

/

ಶರಣ ರಕ್ಷಕನಹುದೋ ಶ್ರೀ ಹರಿಯೆ ಶರಣರಕ್ಷಕನೆ ಧ್ರುವ

ನಕ್ರ ಗಜೇಂದ್ರಗೆ ವಕ್ರಾಗಿ
ತ್ರಿ ವಿಕ್ರಮನೆಂದಂದು ಮೊರೆ ಇಡಲು
ಚಕ್ರದಿಂದಲಿ ನೀ ವಕ್ರನೆ ಹರಿಸಿ
ಅಕ್ರದಲೊದಗಿ ಕಾಯ್ದವ ನೀನಹುದೊ ೧

ತರಳ ಪ್ರಹ್ಲಾದನು ಮೊರೆ ಇಡುವದು ಕೇಳಿ
ಭರದಿಂದ ಸ್ಥಂಭದಲುದ್ಭವಿಸಿ
ದುರುಳದೈತ್ಯನ ಕರುಳೊನಮಾಲೆಯನ್ನು ಮಾಡಿ
ಕರುಣಿಸಿ ಭಕ್ತ ಗೊಲಿದವ ನೀನಹುದೊ ೨

ಸೆರಗಪಿಡಿದು ಸೀರೆ ಸೆಳೆವ ಸಮಯದಲಿ
ಹರಿಯೆಂದು ದ್ರೌಪದಿ ಮೊರೆ ಇಡಲು
ತ್ವರದಿಂದೊದಗಿ ಬಂದು ಪೂರಿಸಿ ವಸ್ತ್ರವ
ಧರೆಯೊಳು ಲಜ್ಜೆಗಾಯ್ದವ ನೀನಹುದೊ ೩

ಮಂಡಿಸಿರಲು ಕೌರವ ಅರಗಿನ ಮನೆ
ಪಾಂಡವರದರೊಳು ಸಿಲ್ಕಿರಲು
ಕಂಡು ನೀ ಅದರೊಳು ವಿವರವ ತೋರಿ
ಪೊರವಂಡಿಸಿದ ಪ್ರಚಂಡ ನೀನಹುದೊ ೪

ಎಸೇಸು ಭಕುತರ ಅವರಸಕ್ಕೊದಗುತ
ಲೇಸಾಗಿ ಕಾಯ್ದುವ ನೀನಹುದೊ
ದಾಸ ಮಹಿಪತಿ ಮನದವಸರಕ್ಕೊದಗುತ
ಭಾಸುತಲಿಹ್ಯ ಭಾಸ್ಕರ ಕೋಟಿ ತೇಜ ೫

## ೧೩೧

ಶರಣ ರಕ್ಷಕನಹುದೊ ಸಿರಿಯಲೋಲನೆ ಪೂರ್ಣ ಧ್ರುವ

ವರ ಪಾಂಡವರ ಮಿತ್ರ ಕರುಣಾನಂದದ ಗಾತ್ರ
ಅರವಿಂದ ನೇತ್ರ ಸುರಮುನಿ ಸ್ತೋತ್ರ
ಹರಿ ನಿನ್ನ ಚರಿತ್ರ ಪರಮ ಪವಿತ್ರ ೧

ವಿದುರ ವಂದಿತ ದೇವ ಬುಧಜನ ಪ್ರಾಣಜೀವ
ಯದುಕುಲೋದ್ಭವ ನೀನೆ ಶ್ರೀಮಾಧವ
ಸದಾ ಸದ್ಗೈಸುವ ಆದಿ ಕೇಶವ ೨

ಅನಂದ ಘನಲೋಲ ನೀನೆ ಸರ್ವಕಾಲ
ಅನಾಥರನುಕೂಲ ಶರಣಾಗತ ವತ್ಸಲ
ದೀನ ಮಹಿಪತಿ ಸ್ವಾಮಿ ನೀನೆ ಕೃಪಾಲ ೩

## ೧೩೨

ಶ್ರೀಧರ ನೀ ಎನ್ನಾಧಾರ
ಬುಧಜನ ಸಹಕಾರ ಮಾಮನೋಹರ ೧

ಮಾಧವ ನೀ ಎನ್ನ ಜೀವ
ಯದುಕುಲೋದ್ಭವ ನೀನೆವೆ ಎನ್ನ ದೈವ ೨

ಕೇಶವ ನೀ ಎನಗೊಲುವ
ದಾಸ ಮಹಿಪತಿ ಕಾವ ಶ್ರೀ ವಾಸುದೇವ ೩

## ೧೩೩

ಶ್ರೀರಾಮ ರಾಮ ಧ್ರುವ

ಜಯ ಜಯಾತ್ಮಾರಾಮ ದಯಗುಣದಿ ನಿಸ್ಸೀಮ
ಮಾಯಾರಹಿತನುಪಮ ಕಾಯ ಕೃಪಾನಿಧಿ ನಮ್ಮ ೧

ಮುನಿಜನರ ಪ್ರತಿಪಾಲ ದೀನಬಂಧು ದೀನ ದಯಾಳ
ಘನಸುಖದ ಕಲ್ಲೋಳ ನೀನಹುದೈ ಅಚಲ ೨

ಕರುಣಾಬ್ಧಿ ನೀನೆ ರಾಮ ಹರಹೃದಯ ವಿಶ್ರಾಮ
ತರಳ ಮಹಿಪತಿ ನಿಮ್ಮ ಸ್ಮರಿಸುವ ಪಾದಪದ್ಮ ೩

## ೧೩೪

ಶ್ರೀ ರಾಮ ನಾಮಾ ಧ್ರುವ

ಶರಣಾಗತರಕ್ಷಕನೇಮ ಸುರ ಮುನಿಜನಪೂರಿತಕಾಮ
ಹರ ಹೃದಯಕಾಗಿಹುದು ವಿಶ್ರಾಮ ಶ್ರೀ ರಾಮನಾಮ ೧

ತರಣೋಪಾಯಕತಿ ಸುಗಮ ವರ್ತಿಸುತೀಹದಾಗಮ ನಿಗಮ
ಪುರತ್ರಯ ಪಾವನ ಮಾಡುತಿಹುದು ಪರಮ ೨

ಕರುಣಾರ್ಣವ ಕಲ್ಪದ್ರುಮ ವರಪ್ರತಾಪದಿ ನಿಸ್ಸೀಮ
ತರಳ ಮಹಿಪತಿ ಪಾವನ ಮಾಡಿತು ಜನ್ಮ ೩

## ೧೩೫

ಶ್ರೀ ಗುರುರಾಯ ನಿಮ್ಮ ಕರುಣ ಭಯಕೃದ್ಭಯ ನಾಶನ ಧ್ರುವ

ಕಂದ ಪ್ರಹ್ಲಾದಗಾಗಿ ಸಂದು ವಿಗ್ರಹದೊಳು
ಬಂದು ರಕ್ಷಿಸಿದೆ ಪ್ರಾಣ ಚೆಂದವಾಗಿ ನೀ ೧

ದ್ರೌಪದಿಯ ಅಭಿಮಾನ ಕೃಪೆಯಿಂದ ನೀ ಪೂರ್ಣ
ಉಪಾಯದಲಿ ಕಾಯಿದೆ ಅಪಾರ ಮಹಿಮೆ ೨

ಕರಿಯ ಮೊರೆಯ ಕೇಳಿ ಕರಿಯ ಬಿಡಿಸಿದೆಂದು
ಮೊರೆಯ ಹೊಕ್ಕೆ ನಾ ನಿಮಗೆ ಹರಿ ಹರಿಯೆಂದು ೩

ಸ್ಮರಿಸಿದಾಕ್ಷಣ ಬಂದು ಕರುಣದಿಂದ ನೆರೆದೆ
ಪರಿ ಪರಿಯಿಂದ ಹೊರೆದೆ ವರಮುನಿಗಳ ೪

ಶರಣು ಹೊಕ್ಕಿಹೆ ನಿಮ್ಮ ತರಳ ಮಹಿಪತಿ ಪ್ರಾಣ
ಹೊರೆದು ರಕ್ಷಿಸೊ ಎನ್ನ ಪರಮಪಾವನ ೫

## ೧೩೬

ಶ್ರೀರಂಗನಾಟದ ಪರಿಯ ತೋರುದು ನೋಡಚ್ಚರಿಯ
ದೇವಕಿಕಂದ ದೇವಮುಕುಂದ ಮಾವಕಂಸನ ಕೊಂದ ಧ್ರುವ

ಹಾವಿನ ಫಣಿ ಮೆಟ್ಟ್ಯಾಡಿದ ಚಂದ ಕಾವನಯ್ಯ ಗೋವಿಂದ ೧

ಪೊಸಪರಿ ಆದುದು ಕುಲಶಿಖಾಮಣಿಯ
ಆಸುಹೀರಿದ ಪೂತಣಿಯ
ಶಿಸುವಾಗಿ ನಂದಯಸೋದೆಯ ಮನಿಯ
ಮೊಸರು ಹಾಲು ಬೆಣ್ಣಿಗೆ ದಣಿಯ ೨

ವಸುದೇವಾತ್ಮಜ ಪಶುಪತಿಪ್ರಿಯ
ಕುಸುಮನಾಭನೆ ಶೇಷಶಯ್ಯ
ಭಾಸ್ಕರಕೋಟಿ ಪ್ರಕಾಶ ನಮ್ಮಯ್ಯ
ಲೇಸಾಗ್ಹೊರೆವ ಮಹಿಪತಿಯ ೩

## ೧೩೭

ಶ್ರೀರಾಮರಾಮನೇ ಸಾರ್ವಭೌಮ
ಪರಮಪುರುಷೋತ್ತಮಾನಂತ ಮಹಿಮ ಧ್ರುವ

ಹರ ಹೃದಯ ವಿಶ್ರಾಮ ಸುರಜನರಿಗೆ ಪ್ರೇಮ
ಕರುಣ ಸಾಗರ ಸಕಲಾತ್ಮರಾಮ ೧

ಸುರಭಿಕಲ್ಪದ್ರುಮ ಸಾರ ಸ್ವಹಿತ ನಾಮ
ಖರದೂಷಣಾರಿ ಪೂರಿತ ಕಾಮ ೨

ವರದಯದಿ ನಿಸ್ಸೀಮ ಹೊರೆವ ಶರಣರ ನೇಮ
ತರಳ ಮಹಿಪತಿ ಸ್ವಾಮಿ ಘನಮಹಿಮ ೩

## ೧೩೮

ಶ್ರೀ ಹರಿ ಸೇವೆಯ ಮಾಡುವ ಬನ್ನಿ
ಮಹಾ ಮಹಿಮೆಯ ಕೊಂಡಾಡು ಬನ್ನಿ
ಸಹಕಾರದ ಸುಖ ನೋಡುವ ಬನ್ನಿ
ಪರದೊಳು ನಲಿದಾಡುವ ಬನ್ನಿ ೧

ನೋಡುವ ಬನ್ನಿ ಸದ್ಗುರು ಪಾದ
ಬೇಡುವ ಬನ್ನಿ ನಿಜ ಹಿತವಾದ
ಕೂಡುವ ಬನ್ನಿ ನಿಜಬೋಧ
ಮಾಡುವ ನಿಜ ಭಕ್ತಿಯು ನವವಿಧ ೨

ಜಯ ಜಯಕಾರ ಮಾಡುವ ಬನ್ನಿ
ಕೈಮುಗಿದು ವರ ಬೇಡುವ ಬನ್ನಿ
ಮಹಿಪತಿಸ್ವಾಮಿಯ ನೋಡುವ ಬನ್ನಿ
ದಯಾನಿಧಿಯ ಕೊಂಡಾಡುವ ಬನ್ನಿ ೩

## ೧೩೯

ಸಕಲವೆನಗೆ ನೀನೆ ಶ್ರೀಹರಿಯೆ ಧ್ರುವ

ತಂದೆತಾಯಿ ಸ್ವಹಿತಾತ್ಮನು ನೀನೆ
ಬಂಧು ಬಳಗ ಸರ್ವಾತ್ಮನು ನೀನೆ ೧

ದೈವಗುರು ಕುಲಗೋತ್ರನು ನೀನೆ
ಕಾವ ಕರುಣ ಸೂತಾಂತ್ರನು ನೀನೆ ೨

ದ್ರವ್ಯ ಧನವು ಸಕಲಾಶ್ರಯ ನೀನೆ
ದಿವ್ಯಾಲಂಕೃತ ಭೂಷಣ ನೀನೆ ೩

ಭಾಸುತ ಬಾಹ್ಯಾಂತ್ರದೊಳಿಹ ನೀನೆ
ಭಾಸ್ಕರಕೋಟಿ ಸುತೇಜರೂಪನು ನೀನೆ ೪

ಮಹಿಪತಿ ಮನೋಹರ ಮೂರ್ತಿಯ ನೀನೆ
ಸಾಹ್ಯ ಸಕಲ ಸಾರ್ಥಿಯು ನೀನೆ ೫

## ೧೪೦

ಸಕಲವೆಲ್ಲವು ಹರಿಸೇವೆ ಎನ್ನಿ
ಯಕುತಿವಂತರು ಹರಿಭಕುತಿ ಯೆನ್ನಿ ಧ್ರುವ

ಹುಟ್ಟಿ ಬಂದಿಹ್ಯದೆ ವಿಠ್ಠಲನ ಸುಸೇವೆಗೆನ್ನಿ
ಸೃಷ್ಟಿಯೊಳಿಹ್ಯದೆ ಶ್ರೀ ವಿಷ್ಣು ಸಹವಾಸವೆನ್ನಿ ೧

ಬದುಕಿ ಬಾಳುದೇ ಇದು ಶ್ರೀಧರ ಉದ್ದೇಶವೆನ್ನಿ
ಸಾಧನ ಸಂಪತ್ತು ಶ್ರೀ ಮಾಧವನದು ಎನ್ನಿ ೨

ಉಂಬುಂತಿಂಬುದೆಲ್ಲ ಅಂಬುಜಾಕ್ಷನ ನೈವೇದ್ಯವೆನ್ನಿ
ಕೊಂಬುಕೊಡುವ ಹಂಬಲ ಶ್ರೀ ಹರಿಯದೆನ್ನಿ ೩

ಇಡುವ ತೊಡುವದೆಲ್ಲ ಪೊಡವಿಧರನಾಭರಣವೆನ್ನಿ
ಉಡುವ ಮುಡಿವದೆಲ್ಲ ಹರಿಯ ಸಡಗರವೆನ್ನಿ ೪

ನುಡಿವ ನುಡಿಗಳೇ ಹರಿಬಿಡದೆ ಕೊಂಡಾಡುದೆನ್ನಿ
ಬಡುವ ಹರುಷವೆಲ್ಲ ವಸ್ತುದೇ ಎನ್ನಿ ೫

ನಡೆವ ನಡಿಗೆಯಿಲ್ಲ ಹರಿಯ ಪ್ರದಕ್ಷಿಣಿ ಎನ್ನಿ
ಎಡವಿ ಬೀಳುದು ಹರಿನಮವೆನ್ನಿ ೬

ಏಳುವ ಕೂಡುವದೆಲ್ಲ ಹರಿಯ ಊಳಿಗವೆನ್ನಿ
ಹೇಳಿ ಕೇಳುದೆಲ್ಲ ಹರಿಪುರಾಣವೆನ್ನಿ ೭

ನೋಡುವ ನೋಟಗಳೆಲ್ಲ ಹರಿ ಸುಲಕ್ಷಣವೆನ್ನಿ
ಮಾಡುವ ಮಾಟಗಳೆಲ್ಲ ಹರಿಯದೆನ್ನಿ ೮

ಮಲಗಿ ನಿದ್ರೆಗೈವದೇ ಹರಿಯ ಕಾಲಿಗೆರಗುದೆನ್ನಿ
ಬಲಕ ಎಡಕ ಹೊರಳುದೇ ಲೋಟಾಂಗಣ(?) ವೆನ್ನಿ ೯

ವನಿತೇರ ಸಂಗವೇ ತಾ ಹರಿಯ ಲೀಲೆಯು ಎನ್ನಿ
ತನುಮನವೆಲ್ಲಾ ಹರಿಸ್ಥಾನವೆ ಎನ್ನಿ ೧೦

ಸತಿಸುತ ಮಿತ್ರರೆಲ್ಲ ಹರಿಸೇವೆ ದೂತರೆನ್ನಿ
ಮತ್ತೆ ಬಂಧುಬಳಗೆಲ್ಲ ಹರಿಯದೆನ್ನಿ ೧೧

ಸುಖದು:ಖವೆಂಬುದೇ ಶ್ರೀಹರಿಯ ಸಂಕಲ್ಪವೆನ್ನಿ
ನಕ್ಕು ನುಡುವುದೆಲ್ಲ ಹರಿ ಆಖರವೆನ್ನಿ ೧೨

ಹೆಣ್ಣು ಹೊನ್ನಾರ್ಜಿತವೆಲ್ಲ ಹರಿಯ ಕಾಣಿಕೆ ಎನ್ನಿ
ನಾನೀನೆಂಬುದೆಲ್ಲ ಹರಿಚೇತನವೆನ್ನಿ ೧೩

ಸ್ವಾರ್ಥ ಹಿಡಿವದೆಲ್ಲ ಪಾರ್ಥನ ಸ್ವಾಮಿಗೆ ಎನ್ನಿ
ಅರ್ತು ಮರ್ತು ನಡೆವ ಹರಿಕರ್ತೃತ್ವವೆನ್ನಿ ೧೪

ಅಂತ್ರಬಾಹ್ಯವೆಲ್ಲ ಹರಿಗುರು ಮಾತೃಪಿತೃವೆನ್ನಿ
ಗುರ್ತುವಾದದ್ದೆಲ್ಲ ತೀರ್ಥಕ್ಷೇತ್ರವೆನ್ನಿ ೧೫

ಲಾಭಾಲಾಭವೆಲ್ಲ ಹರಿಪಾದಕರ್ಪಿತವೆನ್ನಿ
ಶುಭಾ ಶುಭವೆಲ್ಲ ಹರಿಶೋಭೆಯು ಎನ್ನಿ ೧೬

ಕನಸು ಮನಸುಗಳೆಲ್ಲ ಹರಿಯ ನೆನೆವ ಸೇವೆನ್ನಿ
ಧೇನಿಸಿ ಬಯಸುದೇ ಹರಿಧ್ಯಾನವೆನ್ನಿ ೧೭

ನಿತ್ಯಕರ್ಮವೆಲ್ಲ ಹರಿಪಾದಕ ಸಮರ್ಪಣವೆನ್ನಿ
ಸತ್ಯಾಸತ್ಯವೆಲ್ಲ ಹರಿ ಅಗತ್ಯವೆನ್ನಿ ೧೮

ಹೆಜ್ಜೆಗೊಮ್ಮೆ ಬೆಜ್ಜರ್ಹಿಡಿದು ರಾಜೀವನಯನನೆನ್ನಿ
ಸಜ್ಜನರೊಡೆಯ ಗಜವರದ ಎನ್ನಿ ೧೯

ಸೋಹ್ಯ ಸೂತ್ರವೆಲ್ಲ ಹರಿಯ ಮಹಾಮಹಿಮೆ ಎನ್ನಿ
ಗುಹ್ಯಗೂಢವೆಲ್ಲ ಹರಿಯಗುರುತ ಎನ್ನಿ ೨೦

ಇಹಪವೆಲ್ಲ ಹರಿಸೇವೆಗನುಕೂಲ ವೆನ್ನಿ
ಸೋಹ್ಯ ಮಾಡುದೆಲ್ಲ ಹರಿಯ ದಯವೆನ್ನಿ ೨೧

ಸಕಲ ಧರ್ಮಗಳೆಲ್ಲ ಹರಿಯ ಶಿಖಾಮಣಿಯೆನ್ನಿ
ಪ್ರಕಟವಾಗಿ ದೋರುದೇ ಪ್ರತ್ಯಕ್ಷವೆನ್ನಿ ೨೨

ನೇಮನಿತ್ಯ ಇದೇ ಮಹಿಪತಿಯ ಸ್ವಾಮಿಯದೆನ್ನಿ
ಪ್ರೇಮದಿಂದ ಒಪ್ಪಿಸಿಕೊಂಬ ದಯಾಳುವೆನ್ನಿ ೨೩

## ೧೪೧

ಸರ್ವದಾ ಕಾವ ದೈವ ನೀ ಶ್ರೀಹರಿ ಸರ್ವದಾ ಕಾವ ದೈವ ನೀ ಧ್ರುವ

ಶರಣಾಗತ ವತ್ಸಲ ಕರುಣಾನಿಧಿ ಅಚಲ ೧

ಭಾವಕ ನೀ ಸುಲಭ ಜೀವ ಪ್ರಾಣದೊಲ್ಲಭ ೨

ದೀನಬಂಧು ಶಾಶ್ವತ ಅನುದಿನ ಸದೋದಿತ ೩

ಅನುಕೂಲದ ಸಾಧನಿ ಭಾನುಕೋಟಿ ತೇಜ ೪

ಸ್ವಹಿತ ಸುಖದಾಯಕ ಮಹಿಪತಿ ಪ್ರಾಣನಾಯಕ ೫

## ೧೪೨

ಸರ್ವ ಸಹಕಾರಿ ಶ್ರೀಹರಿ ಸರ್ವ ಸಹಕಾರಿ ಧ್ರುವ

ಸುರಜನ ಪಾಲ ಸಕಲಕಾಧಾರಿ
ಪರಮ ಪುರುಷ ಪೀತಾಂಬರಧಾರಿ ೧

ಶರಣ ರಕ್ಷಕ ಸುದಯದಲ್ಯುದಾರಿ
ಗರಡು ವಾಹನ ಮುಕುಂದ ಮುರಾರಿ ೨

ತೋರುವ ನಿತ್ಯಾನಂದದ ಲಹರಿ
ಬೀರುವ ಸುಖ ಸಾಧನೆ ಪರೋಪರಿ ೩

ಕರುಣದಾಕ ಮಹಿಪತಿ ಸಹಕಾರಿ
ಸಿರಿಯನಾಳುವ ಸ್ವಾಮಿಯು ನರಹರಿ ೪

## ೧೪೩

ಸರ್ವೋತ್ತಮ ಸರ್ವಜೀವನ ಪ್ರಾಣ
ಸರ್ವೋತ್ತಮ ಪರಿಪೂರ್ಣ ಸರ್ವೋತ್ತಮ ಧ್ರುವ

ಸತ್ಯಜ್ಞಾನ ಅನಂತ ಬ್ರಹ್ಮ
ಶ್ರುತಿ ಸಾರುತಲ್ಯದೆ ನೇಮ
ಮತ್ತಾತಕ ಹಿಡಿವುದು ಬರಿ ಭ್ರಮೆ
ನಿತ್ಯನಾಗಿರೋ ಘನಮಹಿಮ ೧

ಸರ್ವೋತ್ತಮ ಶ್ರೀ ಹರಿ ಸಾಕ್ಷಾತ
ಪೂರ್ವಾಪರ ಪ್ರಖ್ಯಾತ
ದೋರ್ವನು ತಾ ಘನಮಯ ಸದೋದಿತ
ಸರ್ವಾನಂದಭರಿತ ೨

ವಾಸುದೇವನೊಬ್ಬನೆ ಸರ್ವೇಶ
ಭಾಸ್ಕರಕೋಟಿ ಪ್ರಕಾಶ
ಭಾಸುತಲೀಹ್ಯ ವರ ಗುರುದೇವೇಶ
ದಾಸ ಮಹಿಪತಿ ಪ್ರಾಣೇಶ ೩

## ೧೪೪

ಸರಸಿಜೋದ್ಭವನುತ ಸಿರಿಲೋಲ
ಹರಿ ಸರ್ವರೊಳಿಹ ಶ್ರೀ ಗೋಪಾಲ
ಶರಣಾಗತವತ್ಸಲ ಕರುಣಾನಿಧಿ ಕೃಪಾಲ
ಸುರಜನ ಸಾನುಕೂಲ ವರಮುನಿಪಾಲ ೧

ಮಾಮನೋಹರ ಮಾರಪಿತನೀತ
ಕಾಮಪೂರಿತ ವಿಮಲ ಚರಿತ

ಸಾಮಗಾಯನಪ್ರಿಯ ಸೋಮಶೇಖರ ಧೇಯ
ಸಾಮಜ ವರದ ಸಮಸ್ತಹೃದಯ ೨

ಸಾಹ್ಯಸಕಲಕೆ ಸನ್ನಿಧನೀತ
ಇಹ ಸರ್ವಾನಂದ ಸರ್ವಭರಿತ ಸ್ವಹಿತ ಸುಖದಾತ
ಬಾಹ್ಯಾಂತ್ರ ಸದೋದಿತ
ಮಹಿಪತಿ ಪ್ರಾಣನಾಥ ಶ್ರೀಹರಿ ಸಾಕ್ಷಾತ ೩

## ೧೪೫

ಸ್ಮರಿಸುಮನವೆ ನೀ ದೇವಕಿ ಕಂದನ ಧ್ರುವ

ಶರಣರ ಪಾಲನ ಕುರುಳರ ನಾಶನ ೧

ಉರಗಶಯನನ ಗರುಡವಾಹನನ ೨

ಸಿರಿಯ ಲೋಲನ ಪರಮ ಪಾವನನ ೩

ಸುರರಾಜವಂದ್ಯನ ಕರಿರಾಜಪ್ರಿಯನ ೪

ಗಿರಿಯನೆತ್ತಿದನ ತುರುಗಳಗಾಯದ್ದವನ ೫

ಹರಿನಾಮ ಧ್ಯೇಯನ ಸಾರ ಸಂಜೀವನ ೬

ದಾರಿದ್ರ್ಯ ಭಂಜನ ದುರಿತ ನಿವಾರಣ ೭

ಸರ್ವಾರ್ಥಕಾರಣ ಹರುಷದ ಜೀವನ ೮

ಪರಿಪೂರ್ಣವಿಹನ ಪೂರಿತ ಕಾಮನ ೯

ಗುರುಶಿರೋರತ್ನನ ಕರುಣಲೋಚನ ೧೦

ಸ್ಮರಿಸು ಮನವೆ ನೀ ಮಹಿಪತಿ ಈಶನ ೧೧

## ೧೪೬

ಸ್ಮರಿಸು ಮನವೆ ಶ್ರೀಹರಿಯಚರಣ ಕಮಲಯುಗವರಿಯಾ
ಮೂರುಲೋಕದ ನಿಜಧೊರಿಯ ಮರೆಯದಿರು ನರಹರಿಯ ಧ್ರುವ

ತಂತು ಪಿಡಿದನುದಿನ ಚಿಂತಿಸೊ ಕಂತಿಪಿತನ
ನಿತ್ಯ ನಿಜಾನಂದ ಘನ ಸಂತತ ನೆರಿಯ ಪೂರ್ಣ ೧

ಕರ್ತು ಶ್ರೀ ಸದ್ಗುರುವಿನ ಗುರ್ತುಮಾಡಿಕೊ ನಿಧಾನ
ನಿತ್ಯ ನಿಜಾನುಸಂಧಾನ ಪ್ರಾರ್ಥಿಸೋ ಪರಮಾತ್ಮನ ೨

ಇಹ್ಯ ಪರಾನಂದಘನ ಬಾಹ್ಯಾಂತ್ರ ಸದೋದಿತನ
ಧ್ಯಾಯಿಸೋ ನೀ ಪರಿಪೂರ್ಣ ಮಹಿಪತಿ ಪ್ರಾಣನಾಥನ ೩

## ೧೪೭

ಸ್ಮರಿಸು ಮನವೆ ಸ್ಮರಿಸು ಮನವೆ
ಹರಿಯ ಚರಣ ಕಮಲವ ಪೂರ್ಣ
ಶರಣ ಜನರನಾ ಹೊರೆದು ರಕ್ಷಿಸುವ ಉರಗಶಯನನಾ ೧

ಇರುಳ ಹಗಲ ಸೆರಗವಿಡಿದು
ಅರಿತು ಸ್ಮರಿಸು ಬೆರಿಸಿ ಚಿತ್ತವ
ಕರೆವ ಕಾಮಧೇನುವಾಗಿ ಹೊರೆವ ಕಪ್ಪುತರುವಿನ ೨

ಬಿಡದೆ ಸ್ಮರಿಸು ಗೂಡಿನೊಳಗೆ
ಪೊಡವಿಧರನ ಪಾದ ಪೂರ್ಣ
ಕುಡುವ ಭಕ್ತಿ ಮುಕ್ತಿದಾತ ಮಹಿಪತಿಯ ಒಡಿಯನ ೩

## ೧೪೮

ಸ್ಮರಿಸೊ ಮನವೇ ಹರಿಯ ನರಹರಿಯ
ಅರಸಾಗ್ಯಾಳುವ ಸಿರಿಯ ಧ್ರುವ

ಕರಿಯ ಕೇಳಿದ ಮೊರಿಯ
ನೀನರಿಯ ಸುರರ ಬಿಡಿಸಿದ ಸರಿಯ
ಧರೆಯೊಳಗಿದು ಖರಿಯ
ಯುಗಮೊರಿಯ ಹೊರೆವನು ತಾ ಪರೋಪರಿಯ ೧

ಸರ್ವದೈವಕೆ ಹಿರಿಯ
ಮುರ ಅರಿಯ ಹರ ಹೃದಯದಲಿ ಪರಿಯ
ಸ್ಮರಿಸುವದೀ ಪರಿಯ
ದುರಿತಾರ್ಯಾ ( ದುರಿತ ನಿವಾರ್ಯಾ)
ಕರುಣಕಿಲ್ಲೀತನ ಸರಿಯ ೨

ಸೆರಗವಿಡಿದು ಹರಿಯ
ಪರಿಪರಿಯ ಅರಿಯೋ ನವವಿಧ ಪರಿಯ
ಶರಣಾಗತರ ಸಿರಿಯ
ಸುರವರ್ಯಾ ತರಳಮಹಿಪತಿ ದೊರೆಯ ೩

## ೧೪೯

ಸ್ಮರಿಸೊ ಮನವೆ ಸಿರಿಲೋಲ ಶ್ರೀ ಕೃಷ್ಣನ
ಸ್ಮರಿಸಲೊದಗುವ ಸ್ವಾಮಿ ಶ್ರೀ ವಿಷ್ಣುವಿನ ಧ್ರುವ

ಸ್ಮರಿಸಿ ಕರಿರಾಜ ಸೆರೆಯಿಂದ ಬಿಡಲಿಲ್ಲವೆ
ದುರಿತವನು ಗೆದ್ದರುಷಬಡಲಿಲ್ಲವೆ ೧

ಸ್ಮರಿಸಿ ಪ್ರಹ್ಲಾದನ ಪ್ರಾಣುಳಿಯಲಿಲ್ಲವೆ
ಪರಿ ಪರಿ ಹರಿ ಮಹಿಮೆ ತಿಳಿಯಲಿಲ್ಲವೆ ೨

ಸ್ಮರಿಸಿ ದ್ರೌಪದಿ ಅಪತ್ತುಗಳಿಲಿಲ್ಲವೆ
ಮೊರೆಯಗೇಳಿ ಕೃಷ್ಣ ಸುಳಿಯಲಿಲ್ಲವೆ ೩

ಸ್ಮರಿಸಿ ಪಾಂಡವ ಸತ್ವವು ನಡೆಲಿಲ್ಲವೆ
ಅರಗಿನ ಮನೆಯೊಳು ಉಳಿಲಿಲ್ಲವೆ ೪

ಸ್ಮರಿಸು ಮಹಿಪತಿ ಮನವ ನಿಜಗೊಲಿಲ್ಲವೆ
ಗುರು ಚರಣ ಸ್ಮರಿಸಿ ನೆಲೆಗೊಳಲಿಲ್ಲವೆ ೫

## ೧೫೦

ಸ್ಮರಿಸೊ ಮನವೆ ಹರಿಯ ಧರೆಯೊಳು
ಸಿರಿಯನಾಳುವ ದೊರೆಯ
ಅರಿತು ಚರಣ ಕಮಲ್ಹೊಕ್ಕುಗು ಮೊರೆಯ
ಮರೆಯದೆ ಮುರಾರಿಯ ೧

ಕರುಣದಾಯಕನೀತ ಶರಣಜನರ ಸುಶೋಭಿತ
ವರಮುನಿಗಳ ಹೃದಯ ಸದೋದಿತ ಹರಿಯ ಸಾಕ್ಷಾತ ೨

ನಂಬಿದವರ ಕಾವ ಬಿಂಬಿಸುವ ಮನದೊಳಗೀವ
ಹಂಬಲಿಸುವರ ಜೀವನದ ಜೀವ ಇಂಬು ಅಗಿಹ್ಯ ದೈವ ೩

ದೇಶಿಕರಿಗೆ ದೇವ ವಸುದೇವಸುತ ವಾಸುದೇವ
ಲೇಸಾಗಿ ಸುಭಕ್ತರ ಪಾಲಿಸುವ ಈಶ ಶ್ರೀಕೇಶವ ೪

ದೃಢ ಭಕ್ತರಿಗೊಲಿವ ಮೂಢ ಮಹಿಪತಿ ಮನದೈವ
ಪಿಡಿದು ಕೈಯ ಕಡೆಗಾಣಿಸುವ ಬಿಡದೆ ಸಲಹುವ ೫

## ೧೫೧

ಸಾರ್ವಭೌಮ ನೀರಾಮ ಶರಣರಕ್ಷಕ ನೇಮ ಧ್ರುವ

ಸೀತಾಮನೋಹರ ಸೇತುಗಟ್ಟಿದ ಶೂರ
ಹತ್ತು ತಲಿಯವನ ಮಾಡಿದೊ ಸಂಹಾರ
ಖ್ಯಾತಿಗೆ ತಂದ್ಯೊ ವಿಭೀಣಗೆ ಸ್ಥಿರ ೧

ಕುಡುವೆ ನೀ ವರಪೂರ್ಣ ದೃಢ ಭಕ್ತರ ಪ್ರಾಣ
ಆಡುದೊಂದೆ ವಚನ ಬಿಡುವದೊಂದೆ ಬಾಣ
ಜಡವಾಗಿದ್ದ ಶಿಲೆಯೆ ಮಾಡಿದ್ಯುದ್ಧರಣ ೨

ಸಮಸ್ತ ಜನಪ್ರಿಯ ಸೋಮಶೇಖರ ಧ್ಯೇಯ್ಯ
ನಾಮ ಸ್ಮರಿಸುವರಿಗಿಹೆ ಹೃದಯ
ಸ್ವಾಮಿ ನೀನಹುದೊ ದಾಸ ಮಹಿಪತಿಯ ೩

## ೧೫೨

ಸ್ವಾಮಿ ತಪ್ಪಾರಿಸುವರೆ ನೀ ನಮ್ಮ
ಸುಮ್ಮನುಂಡಾಡುವ ಬಾಲಕ ನಿಮ್ಮ
ಅಮ್ಮ ಅಪ್ಪನೆಂದಾಡುದೆ ನಾ ತಮ್ಮ
ಕಂ ಕಿಮೆಂದಾಡಕರಿಯೆ ನಾವಮ್ಮ ೧

ಓದಿ ತಿಳಿಯಲರಿಯೆ ಶಾಸ್ತ್ರವೇದ
ಭೇದಿಸಲರಿಯೆ ನಾ ನಿಮ್ಮ ಬೋಧ
ಹಾದಿ ತಿಳಿಯುದೆ ಬಲು ತಾ ಅಗಾಧ
ಇದೆ ಪಾಲಿಸಬೇಕಯ್ಯ ಸುಪ್ರಸಾದ ೨

ಭಕ್ತಿ ಮಾಡಲರಿಯೆ ನಿಮ್ಮ ದೃಢ
ಯುಕ್ತಿ ತಿಳಿಯಲರಿಯದೆ ನಾ ಮೂಢ
ಶಕ್ತಿ ಸಾಮರ್ಥ್ಯನ್ನೊಳು ನೋಡಬ್ಯಾಡ
ಯುಕ್ತಾಯುಕ್ತ ನೋಡದಿರು ಎನ್ನ ಕೂಡ ೩

ಪತಿತಪಾವನನೆಂಬ ನಿನ್ನ ಬಿರುದು
ಎತ್ತ ಓಡಿಹೋಗಬಲ್ಲದದು
ಚಿತ್ತ ನೆಲೆಗೊಂಡು ಬಂದು ನಿಮ್ಮ ಬೆರೆದು
ಮತ್ತ ಒರೆದು ನೋಡುವದಿದೆ ಅರೆದು ೪

ಶರಣ ಹೊಕ್ಕ ಮ್ಯಾಲೆಲ್ಲಿಹುದೈಯ ಮರಣ
ಚರಣಕಮಲಕೊಪ್ಪಿಸಿಹೆ ನಾ ಹರುಣ
ಅರಿತು ಮಾಡುವ ನಿಮ್ಮ ದಯ ಕರುಣ
ತರಳ ಮಹಿಪತಿ ನಿಮ್ಮಣುಗ ಪೂರ್ಣ ೫

## ೧೫೩

ಸ್ವಾಮಿ ನೀನೆ ಸಾರ್ವಭೌಮ ಶ್ರೀ ರಘುರಾಮ
ಸೋಮಶೇಖರ ಪ್ರಿಯ ದಿವ್ಯ ನಿನ್ನ ನಾಮ ಧ್ರುವ

ಕಾಕುಸ್ಥತಿಲಕ ಕಾರುಣ್ಯನಿಧಿ ಕೃಪಾಲ
ಪ್ರಕಟ ಪ್ರಖ್ಯಾತಲಿಹ ಸತ್ಯಶೀಲ
ನಾಕಜರ ಸೆರೆಬಿಡಿಸ್ಯಾದೆ ಸಾನುಕೂಲ
ಸಕಲ ಸುಖದೀವ ಮೂಲೋಕಪಾಲ ೧

ಖರದೂಷಣಾರಿ ಶರಣಾಗತರ ಸಹಕಾರಿ
ಸರ್ವರಾಧಾರಿ ಕೋದಂಡ ಧಾರಿ
ದುರಿತ ದುಷ್ಕೃತ ದುರುಳ ದುಷ್ಟ ಜನಸಂಹಾರಿ
ವರಪೂರ್ಣವೀವ ಪರಮ ಉದಾರಿ ೨

ಅನುದಿನದಲಿ ನಿನ್ನ ನಡಿನುಡಿಗಳೊಂದವೆ ನೇಮ
ಅನಂತಗುಣ ಪೂರ್ಣಾನಂದ ಮಹಮಹಿಮ
ದೀನ ಮಹಿಪತಿ ಅತ್ಮಾರಾಮ ಪೂರಿತ ಕಾಮ
ಭಾನುಕೋಟಿ ತೇಜ ಘನದಯ ನಿಸ್ಸೀಮ ೩

## ೧೫೪

ಸ್ವಾಮಿ ನಿಮ್ಮ ಕರುಣ ನಮ್ಮ ಸರ್ವಾಭರಣ
ಸ್ವಾಮಿ ನಿಮ್ಮ ಚರಣ ನಮ್ಮ ಜನ್ಮೋದ್ಧಾರಣ ಧ್ರುವ

ಸ್ವಾಮಿ ನಿಮ್ಮ ದಯ ನಮ್ಮ ಹಿತೋಪಾಯ
ಸ್ವಾಮಿ ನಿಮ್ಮ ಭಯ ನಮ್ಮ ಪುಣ್ಯೋದಯ ೧

ಸ್ವಾಮಿ ನಿಮ್ಮ ಖೂನ ನಿಜಸ್ಥಾನ
ಸ್ವಾಮಿ ನಿಮ್ಮ ಜ್ಞಾನ ನಿಜಧ್ಯಾನ ೨

ಸ್ವಾಮಿ ನಿಮ್ಮ ನೋಟ ನಮ್ಮ ಮನದೂಟ
ಸ್ವಾಮಿ ನಿಮ್ಮ ಮಾಟ ನಮ್ಮ ಸುಖದಾಟ ೩

ಸ್ವಾಮಿ ನಿಮ್ಮ ನಾಮ ನಮ್ಮ ಅತಿಪ್ರೇಮ
ಸ್ವಾಮಿ ನಿಮ್ಮ ನೇಮ ನಮ್ಮ ನಿಜಾಶ್ರಮ ೪

ಸ್ವಾಮಿ ನಿಮ್ಮ ಸೋಹ್ಯ ನಮ್ಮ ನಿಜಾಶ್ರಯ
ಸ್ವಾಮಿ ನಿಮ್ಮ ಸಾಹ್ಯ ಮಹಿಪತಿ ಮನೋತ್ರಾಹ್ಯ ೫

## ೧೫೫

ಸ್ವಾಮಿ ನೀ ಎನಗಿರೆ ಧೀನಬಂಧು
ಭ್ರಮೆಗೊಂಬ ಸಾಯಾಸವ್ಯಾಕಿನ್ನೊಂದು ಧ್ರುವ

ನೀನಿರಲು ನಿಧಾನದ ಸುರಾಶಿ
ಹೆಣ್ಣು ಹೊನ್ನಿಗಿಡುವುದ್ಯಾಕಾಶಿ
ಅನುಭವಿಸುತಿರೆ ನೀ ಕೊಟ್ಟ ಭಾಸಿ
ಅನುಮಾನಿಸಲ್ಯಾಕೆ ಭ್ರಮಿಸಿ ೧

ಎನ್ನ ಸ್ವಹಿತಕಿರಲು ನೀನೆ ಸಾಹ್ಯ
ಇನ್ನೊಬ್ಬರಿಗೆದೆರುವದ್ಯಾಕೆ ಬಾಯಿ
ಚೆನ್ನಾಗಿದೆ ನೀನೆ ಎನಗಾಯುರ್ದಾಯ
ಇನ್ನೊಂದಕ ಯೋಚಿಸಲ್ಯಾಕುಪಾಯ ೨

ನೀನಾಗಿರೆ ಕಾಮಧೇನು ಕಲ್ಪವೃಕ್ಷ
ನನಗಿನ್ನೊಂದ್ಹಿಡಿಯಲ್ಯಾಕಪೇಕ್ಷ
ಭಾನುಕೋಟಿತೇಜವೆನಗೆ ಅಪೇಕ್ಷ
ಅನುದಿನ ಮಹಿಪತಿಗೆ ಸುಭಿಕ್ಷ ೩

## ೧೫೬

ಸ್ವಾಮಿ ನೀನಹುದೋ ಶ್ರೀಗುರು ಸಾರ್ವಭೌಮ
ನೇಮದಿಂದಲಿ ಹೊರೆವ ದಯಗುಣನಿಸ್ಸೀಮ ಧ್ರುವ

ಜಗತ್ರಯಕ ಜೀವಭಗತ ಜನಕಾವ
ಸುಗಮ ಸುಪಥವೀವ ಸುಗುಣ ಶ್ರೀದೇವ ೧

ಅನಾಥನಾಥ ಮುನಿಜನರ ದಾತ
ದೀನದಯಾಳು ನೀನಹುದು ಶ್ರೀನಾಥ ೨

ನಿಜದಾಸರ ಪಕ್ಷ ಸುಜನರ ಸಂರಕ್ಷ
ಗಜವರ ಸಮೋಕ್ಷ ಭಜಕರಿಗೆ ಸುಭಿಕ್ಷ ೩

ತೇಜೋಮಯ ಸಾಂದ್ರ ನಿಜಸುಖ ಸಮುದ್ರ
ರಾಜಾಧಿರಾಜ ಮಹಾ ರಾಜರಾಜೇಂದ್ರ ೪

ಶರಣಜನಪಾಲ ಸಿರಿಯ ಸುಖಲೋಲ
ತಗಳ ಮಹಿಪತಿ ಸ್ವಾಮಿ ನೀನಹುದೊ ಕೃಪಾಲ ೫

## ೧೫೭

ಸ್ವಾಮಿ ನೀನೆ ಸಕಲಾಧಾರ ಸದ್ಗುರುದಾರ ಧ್ರುವ

ಅಣುರೇಣು ಪರಿಪೂರ್ಣ ನೀನೆ ಶ್ರೀನಾರಾಯಣ
ತನುಮನಕರಣ ಪ್ರಾಣದೊಳು ವ್ಯಾಪಕ
ಗುಣಜನಮನ ಸ್ಥಾನದೊಳು ನಿಜಾಧಿಷ್ಠಾನ
ನಾನಾ ಪರಿಯ ಖೂನ ನೀನೆ ಚೈತನ್ಯ ಘನ ೧

ಪಾರಾವಾರ ದೂರ ಸುರಜನರ ಮಂದಾರ
ಕರುಣಾಕರ ಸ್ಥಿರ ಪರಮ ಜ್ಞಾನ ಗಂಭೀರ
ಕರಿವರ ಶೂರ ದುರುಳ ಜನ ಸಂಹಾರ
ತರಣೋಪಾಯದ ಸಾರ ಗುರು ನೀನೆ ಸಾಕಾರ ೨

ಅನಾಥನಾಥ ದಾತ ನೀನೆ ವಿಶ್ವವಂದಿತ
ಗುಣಾತೀತ ಸ್ವತ: ಮುನಿಜನರ ಸ್ವಹಿತ
ಅನುಭವಾಮೃತಾಚ್ಯುತ ಅನುದಿನ ಸದೋದಿತ
ಭಾನುಕೋಟಿತೇಜ ತಾ ದೀನ ಮಹಿಪತಿ ದಾತ ೩

## ೧೫೮

ಸ್ವಾಮಿ ನೀನೆ ಸ್ವಹಿತ ಗುರುನಾಥ
ಬ್ರಹ್ಮಾನಂದ ಸದ್ಘನ ಸದೋದಿತ ಧ್ರುವ

ನೀನಹದೋ ಬಡವನಾಧಾರಿ
ಸಾನುಕೂಲ ನೀನೆವೆ ಪರೋಪರಿ
ಅನುದಿನದಲಿ ನೀ ಸಹಕಾರಿ
ಮನೋಹರ ಮೂರುತಿ ನೀ ಶ್ರೀ ಹರಿ ೧

ದಯಗುಣಕೆ ನಿಮ್ಮ ನಾ ಸರಿಗಾಣೆ
ತಾಯಿ ತಂದೆ ಸಕಲ ಬಂಧು ನೀನೆ
ತ್ರೈಲೋಕ್ಯವಂದ್ಯ ನೀ ದೇವನೆ
ಶ್ರೇಯ ಸುಖದಾಯಕ ಎನ್ನ ನೀನೆ ೨

ಶ್ರುತಿ ಸಾರುತಲ್ಯದ ನಿಮ್ಮ ಖ್ಯಾತಿ
ಸ್ತುತಿ ಮಾಡಲೇನು ನಾ ಮಂದಮತಿ
ಅತಿ ದೀನ ನಾ ನಿಮ್ಮ ಮಹಿಪತಿ
ಪ್ರತಿಪಾಲಕಹುದೋ ನೀ ಶ್ರೀಪತಿ ೩

## ೧೫೯

ಸ್ವಾಮಿ ಸೀತಾರಾಮ ಪತಿತ ಪಾವನ ನಾಮ ಧ್ರುವ

ಅಮಿತವಾದ ಗುಣ ನಿರ್ಮಳಾಚರಣಿ
ಕಮಲಭವಾರ್ಚಿತ ಕಾರ್ಮುಕಪಾಣಿ
ನೇಮದಿಂದಾಡುವ ಅಮೃತವಾಣಿ ೧

ಸಮಸ್ತ ಹೃದಯಾಂತ್ರ ವಿಮಲಸುಚರಿತ್ರ
ಸುಮನ ಸುಗಾತ್ರ ಅಮರಜ ನೇತ್ರ
ಸೋಮಶೇಖರಪ್ರಿಯ ಪುಣ್ಯಪವಿತ್ರ ೨

ಸಾಹ್ಯಸಹಕಾರ ಬಾಹ್ಯಾಂತ್ರ ಸ್ಥಿರ
ಸ್ವಹಿತದಾಗರ ಮಹಿಪತಿ ಮನೋಹರ
ಮಹಾಮಹಿಯನ್ನುಳ್ಳನಹುದೋ ಉದಾರ ೩

## ೧೬೦

ಸಿಕ್ಕಿದೆಲ್ಲೊ ಕೃಷ್ಣ ನೀನು
ಸಿಕ್ಕಿದೆಲ್ಲೊ ನಮ್ಮ ಕೈಯ ಹೊಕ್ಕು ಮುನಿಯ
ಹಕ್ಕಿಯೊಳಾದ್ಯೊ ತೆಕ್ಕಿಯ ಪುಕ್ಕಸಾಟಿಯ ೧

ಬಿಟ್ಟರ ಗೊಲ್ಲತೇರಲ್ಲೊ ಕಟ್ಟಿದ ಸೊಲ್ಲೊ
ಮುಟ್ಟಿ ಬಿಡುವವರಲ್ಲೊ ಘಟ್ಯಾಗಿ ನಿಲ್ಲೊ ೨

ನಾವು ಬಲ್ಲೆವು ನಿನ್ನಾಟ ಎವಿ ಹಾಕುನೋಟ
ಹವಣಿಸಿ ಹಿಡಿದೆವೊ ನೀಟ ಭಾವಿಸಿ ಈ ಮಾಟ ೩

ಬಲ್ಲತನವದೋರಿದೊ ಇಲ್ಲಿ ಮರುಳಾದ್ಯೊ
ನಿಲ್ಲೊ ನಮ್ಮೊಳು ನೀನಾದ್ಯೊ ಎಲ್ಲಿಗೆ ಹೋದ್ಯೊ ೪

ವಶವಾಗಲಿಕ್ಕ ನಮಗ ವಸುಧಿಯೊಳಗ
ಯಶೋದೆ ಹಡೆದಳು ತಾ ಈಗ ಲೇಸಾಗಿ ನಿನಗ ೫

ನಾವು ಹಿಡಿದೇವೆಂಬುವ ಮಾತ ಪೂರ್ವಾರ್ಜಿತ
ಸೇವನ ಮಾಡಿತೊ ನವನೀತ ಸವಿದೋರಿ ಹಿತ ೬

ಭಾನುಕೋಟಿ ಸು ಉದಯ ಮುನಿಜನರಾಶ್ರಯ
ನೀನಾಗಿ ಸಿಕ್ಕಿದ್ಯೊ ಕೈಯ ದೀನ ಮಹಿಪತಿಯ ೭

## ೧೬೧

ಸುಲಭ ಸೇವೆ ನೋಡಿ ಶ್ರೀ ಹರಿಯ
ಖುಲ್ಲಮನುಜ ತಾ ನಿಜನೆಲಿನರಿಯ ಧ್ರುವ

ದೇಹದಂಡಿಸಲಿಕ್ಕಿಲ್ಲ ಗುಹ್ಯ ಸೇರಲಿಲ್ಲ
ಸೋಹ್ಯ ತಿಳಿದವ ಬಲ್ಲ ಗುಹ್ಯ ಗುಪ್ತವ ೧

ನೀರಮುಣಗಲಿಕ್ಕಿಲ ನಾರಿಯ ಬಿಡಲಿಲ್ಲ
ದಾರಿ ತಿಳಿದದ ಬಲ್ಲ ಹರಿಭಕ್ತಿಯ ೨

ಶೀಲ ಕೈಗೊಳ್ಳಾಲಕಿಲ್ಲ ಹಲವು ವ್ರತ ಹಿಡಿಯಲಿಲ್ಲ
ಮೂಲ ತಿಳಿದವ ಬಲ್ಲ ನೆಲೆನಿಭವ ೩

ಮನವುನ್ಮನವಮಾಡಿ ಘನಸುಖದೊಳು ಕೂಡಿ
ಜ್ಞಾನವಂದಭ್ಯಾಸಮಾಡಿ ಅನುದಿನದಲಿ ೪

ಏನೆಂದರಿಯದ ಮಹಿಪತಿಗೆ ತಾನೆ ತಾನೊಂದು
ಜ್ಞಾನ ಭೋಧಿಸಿದ ಗುರು ಸ್ವಾನುಭವದ ೫

## ೧೬೨

ಸೇವೆಮಾಡಿ ಹರಿಯ ನವವಿಧಪರಿಯ ಧ್ರುವ

ಭಾವ ಭಕ್ತಿಯ ಮಾಡಿ ಸುವಿದ್ಯ ಪಥ ಕೂಡಿ
ಗೋವಿಂದನಾಮ ಪಾಡಿ ಅವಿದ್ಯೋಪಾಧೀಡ್ಯಾಡಿ ೧

ಯುಕ್ತಿಗೆ ವಿವೇಕ ಭಕ್ತ ಸಂರಕ್ಷಕ
ಮುಕ್ತಿಗಿಂದಧಿಕ ಭಕ್ತಿನಿಜಸುಖ ೨

ಸೇವೆಸುಖ ಹರಿಯ ಮಹಿಪತಿ ದೊರೆಯ
ಸೇವಿಸಲೀಪರಿಯ ಭವನಾಶ ಖರಿಯ ೩

## ೧೬೩

ಸೇವೆ ಸುಖವೊ ಶ್ರೀ ಹರಿಸೇವೆ ಸುಖವೊ
ಸೇವೆ ಗಿಂದಧಿಕ ಸುಖ ಸಾಯೋಜ್ಯಮುಕುತಿಪದದೊಳಿಲ್ಲ ಧ್ರುವ

ಇಂದುಕುಲದೀಪಕನ ಎಂದೆಂದು ಬಿಡದೆ ಭಾವಲಿಟ್ಟು
ತಂದಿ ತಾಯಿ ಬಂಧುಬಳಗನಾದ ಮೂರ್ತಿ ಸ್ಮರಿಸುವ ೧

ವಾಸವಾಗಿ ಆತ್ಮಲೀಹ ಭಾಸ್ಕರಕೋಟಿತೇಜಪೂರ್ಣನ
ದಾಸನಾಗಿ ವಾಸುದೇವನ ಪಾದಕಮಲಾರಾಧಿಸುವ ೨

ವಿಹಿತಕಿಂತ ವಿಹಿತದೋರಿ ಕುಡುವ ಸ್ವಹಿತವೆಂದು
ಮಹಿಪತಿ ಸ್ವಾಮಿ ಸಾರ್ವಭೌಮನ
ಕೀರ್ತಿಯನೆ ಕೊಂಡಾಡುತಿಹ್ಯ ೩

## ೧೬೪

ಸಂಸಾರ ಚಿಂತೆ ನಮ್ಮ ಸ್ವಾಮಿ ಶ್ರೀ ಹರಿಗುಂಟು
ಸಂಸಾರಿ ಕೃಷ್ಣ ಕರುಣಿಸುವ ಇದರಿಟ್ಟು ಧ್ರುವ

ತುತ್ತಾಯತವ ಮಾಡಿ ಹೊತ್ತು ನಡೆಸುವ ಒಡಿಯ
ಮತ್ತೆ ಚಿಂತಿಸಲ್ಯಾಕೆ ಹತ್ತು ಕಡೆಯ
ಭಕ್ತವತ್ಸಲ ಸ್ವಾಮಿ ಚಿಂತ್ಯಾಕೆನ್ನೊಡಿಯ
ನಿತ್ಯ ನಡೆಸುವ ಗ್ರಾಸ ಭಕ್ತರೊಡಿಯ ೧

ಅನೆ ಮೊದಲಿರುವೆ ಕಡೆ ತಾಂ ನಡೆಸುತಿರಲಿಕ್ಕೆ
ಜನಕೊಡ್ಡಿ ಕೈಯ ನಾ ದಣಿಯಲೇಕೆ
ಅನುದಿನ ಹರಿವಾಕ್ಯ ಅನುಭವಿಸುತಿರಲಿಕ್ಕೆ
ಅನುಮಾನವಿಡಿದು ನಾ ಹೆಣಗಲ್ಯಾಕೆ ೨

ಭಾರ ವಹಿಸಿ ಕೊಂಡಿರಲು ಮಾರಪಿತ ಪರಿಪೂರ್ಣ
ಸಾರಾಂಶ ವಿತ್ತು ವರಕೃಪೆಯ ಜ್ಞಾನ
ಆರ್ಥಂಗವೆನಗ್ಯಾಕೆ ತೋರುತಿದೆ ನಿಧಾನ
ತರಳ ಮಹಿಪತಿ ಹೊರೆವ ಗುರು ಕರುಣ ೩

## ೧೬೫

ಹಣ್ಣು ಕೊಳ್ಳಿರೋ ಪುಣ್ಯವಂತರು ಹಣ್ಣು ಕೊಳ್ಳಿರೋ
ಹಣ್ಣು ಕೊಳ್ಳಿರಯ್ಯಾನ್ನಂತ ಗುಣಮಹಿಮೆಯುಳ್ಳ ಧ್ರುವ

ಹಣ್ಣು ಬಂದದೆ ನೋಡ್ಯಾನಂದೋ ಬ್ರಹ್ಮಾಪಾಟಿಯಿಂದ
ಕಣ್ದೆರದು ಕೊಂಡವರು ಧನ್ಯ ಧನ್ಯರೊ ೧

ಹಣ್ಣಿಗೊಂದು ಹೆಸರು ಇಲ್ಲ ಇನ್ನೊಂದು ಕೊಸರು ಇಲ್ಲ
ಚೆನ್ನಾಗಿ ಉನ್ಮನವಾಗಿ ಹಣ್ಣ ೨

ಅಣ್ಣಗಳ ಬಂದು ಕಣ್ಣುಗೆಟ್ಟು ಹೋಗಬ್ಯಾಡಿ
ಸಣ್ಣ ದೊಡ್ಡರೊಳಗಿಹ್ಯ ಹಣ್ಣ ೩

ಉತ್ತುಮರುದ್ದೇಶವಾಗಿ ಮತ್ತೆ ಹತ್ತುಭಾರೆ
ತುತ್ತಿಗೊಮ್ಮೆ ಬಾಯಿದೆರೆವ ಹಣ್ಣು ೪

ಬಿತ್ತಿಬೆಳೆದ ಫಲವಲ್ಲ ಹೊತ್ತುಮಾರುವದಲ್ಲ
ಚಿತ್ತದೊಳಗ್ಹತ್ತಿಲಿಹ ಹಣ್ಣು ೫

ನಾಲ್ಕು ಮಂದಿ ತಿಳಿಯದೆ ಹೋಕಹೋದರಾರು ಮಂದಿ
ಪುಕ್ಕಸಾಟಿ ದಣಿದರ್ಹದಿನೆಂಟು ಮಂದಿ ಕಾಣಿರೋ ೬

ಹಣ್ಣು ಕೊಂಡು ಮಹಿಪತಿಯ ಪುಣ್ಯ ಪೂರ್ವಾಜಿತ
ತಾನೆಧನ್ಯ ಧನ್ಯವಾದ ಗುರುಕೃಪೆಯಿಂದ ಕಾಣಿರೋ ೭

## ೧೬೬

ಹರಿ ನಂಬಿದವರಿಗೆ ಸರಿಯೆ ಜಗದೊಳು
ಹರಿದಾಸಾದವಗೆ ಸಕಲ ಮಾನ್ಯವಗೆ ಧ್ರುವ

ಹರಿ ಜ್ಞಾನವುಳ್ಳವಗೆ ದಣಿವಿಕೆಲ್ಲಿಹದವಗೆ
ಹರಿಧ್ಯಾನ ಉಳ್ಳವಗೆ ತಾಂ ದುರಿತವೆಲ್ಲಿಹದವಗೆ ೧

ಹರಿನಾಮ ಉಳ್ಳವಿಗೆ ನಾಸ್ತಿಕವೆಲ್ಲಿಹದವಗೆ
ಹರಿ ದಯುಳ್ಳವಗೆ ದನ್ಯವೆಲ್ಲಿಹದವಗೆ ೨

ಹರಿಯ ಭಾವಿಕರಿಗೆ ಭವವುಂಟೆ ಅವಗೆ
ಹರಿ ಭಕ್ತಿಯುಳ್ಳವಗೆ ತಾ ಭಯ ವೆಲ್ಲಿಹದವಗೆ ೩

ಹರಿದಾಸರದಾಸಾದ ಮಹಿಪತಿಗೆ ಸರಿಯುಂಟೆ
ಪೂರ್ವಪುಣ್ಯದ ಫಲಶ್ರುತಿಗೆ ೪

## ೧೬೭

ಹರಿನಾಮ ಘೋಷ ಧ್ರುವ

ಎಲ್ಲಿ ಶ್ರೀಹರಿನಾಮ ಘೋಷ
ಅಲ್ಲಿ ಸಕಲ ಸುಖ ಸಂತೋಷ
ಸುಲಭಲಿಹುದು ಭವಭಯದ ನಾಶ
ಹರಿನಾಮ ಘೋಷ ೧

ಹರಸುವದಾನಂದದ ಹರುಷ
ಹರಿಸುವದು ಕಲಿಮಲ ಕಲುಷ
ತ್ವರಿತೋಡಿಸುವದು ಮಹಾಪಾತಕ ದೋಷ
ಹರಿನಾಮ ಘೋಷ ೨

ಸ್ವಹಿತ ಸಾಧನದ ಸುಉಪದೇಶ
ಬಾಹ್ಯಾಂತರದೋರುವ ಪ್ರಕಾಶ
ಮಹಿಪತಿಗಿದೆ ನಿತ್ಯವನುಭವದುಲ್ಲಾಸ
ಹರಿನಾಮ ಘೋಷ ೩

## ೧೬೮

ಹರಿ ನಿನ್ನ ಭಕುತಿಗುನ್ಮತ ಬಿಡಬೇಕು
ಗುರು ಹೇಳುವ ಮಾತು ಕೈಗೂಡಬೇಕು ಧ್ರುವ

ಕಾಮೋನ್ಮತ್ತಗೆಲ್ಲಿಹದೊ ನಿಜಭಕ್ತಿ
ನೇಮ ಉಂಟೆ ಪರಾಮರಿಸುವ ಶಕ್ತಿ
ಕೋಮಲತಿಯರ ಕಂಡು ಕಳವಳಾದ್ಯುಕ್ತಿ
ಪಾಮರಗಳಿಗೆಲ್ಲಿಹ್ಯದೊ ವಿರಕ್ತಿ ೧

ಧನೋನ್ಮತ್ತಗೆಲ್ಲಿಹುದೊ ನಿಜಧ್ಯಾನ
ಕಾಣನೆಂದಿಗೆ ಕಣ್ದೆರದು ತಾ ಖೂನ
ಹೆಣ್ಣು ಹೊನ್ನಿನ ಮ್ಯಾಲೆ ಇಟ್ಟಿಹ ಜೀವ ಪ್ರಾಣ
ಹೀನ ಮನುಜರಿಗೆಲ್ಲಿಹುದೊ ಸುಜ್ಞಾನ ೨

ಉನ್ಮತ ಹೋದರೆ ಸನ್ಮತದಿಂದ
ತನ್ಮಯಾಗುವರು ಸದ್ಘನ ಕೃಪೆಯಿಂದ
ಉನ್ಮನಾಗುವಂತೆ ನೋಡೋ ಮುಕುಂದ
ಚೆಣ್ಣ ಮಹಿಪತಿಗೆ ಸದ್ಬೋಧ ಆನಂದ ೩

## ೧೬೯

ಹರಿಭಕುತರ ದರುಶನವು ಅತಿಹರುಷವು ಧ್ರುವ

ಹರಿ ನೆನೆವರಾ ನೆರಿಯು ನಿಧಾನದಾ ಕೆರೆಯು
ಹರಿ ಸ್ಮರಿಸುವರ ಮರಿಯು ವಜ್ರವರಿಯು

ಹರಿ ಭಜಿಸುವರ ಸರಿಯು ನಿಜಘನಾತ್ಮದ ಝರಿಯು
ಹರಿ ಮಹಿಪರ ಕರಿಯು ಪರಮಾನಂದದ ತೆರಿಯು ೧

ಹರಿಶರಣರ ನುಡಿಯು ಕರುಣದಮೃತಧ್ವನಿಯು
ಹರಿಯದಾಸರ ನಡೆಯು ನಿಲಕಡೆಯು
ಹರಿಭಕ್ತರಿದ್ದೆಡೆಯು ಪುಣ್ಯಕ್ಷೇತ್ರದ ತಡಿಯು
ಹರಿಮಹಿಮರ ಕಡಿಯು ಕ್ಯಾದಿಗ್ಹೊಡಿಯು ೨

ಹರಿಭಕ್ತರ ಸಂಗ ಸ್ನಾನಗಂಗ ತುಂಗ
ಹರಿಮಹಿಮರ ಅಂಗ ಅಂತರಂಗ
ಹರಿಪರಮಾನಂದ ಗುರು ಕರುಣಾಕೃಪಾಂಗ
ತರಳ ಮಹಿಪತಿ ಭವಭಯವು ಭಂಗ ೩

## ೧೭೦

ಹರಿಯನರಿಯದ ಜನುಮ ಧರೆಯೊಳಗಧಮಾಧಮ
ಹರಿಯ ನೆನೆಯದ ನರನು ಪಾಮರನು ಧ್ರುವ

ಹರಿಗೆ ನಮಿಸದ ಸಿರವು ತೋರುವ ಬೆಚ್ಚಿನ ತೆರವು
ಹರಿಗೆ ವಂದಿಸದ್ದಣಿಯು ಹುಳಕ ಮಣಿಯು
ಹರಿಗೆ ಮುಗಿಯದ ಕೈಯು ಮುರುಕ ಕೀಲಿಯ ಕೈಯು
ಹರಿ(ಯ) ಕೊಂಡಾಡುವ ನಾಲಿಗೆ ಒಡಕ ಸೊಲಿಗೆಯ ೧

ಹರಿಯ ಸ್ತುತಿಸದ ಮುಖ ಚೀರುವ ಚಿಮ್ಮಡಿಯ ಮುಖವು
ಹರಿಕಥೆ ಕೇಳದ ಕಿವಿಯು ಹಾಳುಗವಿಯು
ಹರಿಯ ನೋಡದ ಕಣ್ಣು ತೋರುವ ನವಲ್ಗರಿಗಣ್ಣು
ಹರಿಯ ಆರಾಧಿಸದ ಮನವು ಹೀನತನವು ೨

ಹರಿಯ ಸೇವೆಗೊದಗದ ಕಾಲು ಮುರುಕ ಹೊರಸಿನ ಕಾಲು
ಹರಿಗೆ ಮಾಡದ ಭಕ್ತಿ ಮೂಢ ಯುಕ್ತಿ
ಹರಿಯೆ ಶ್ರೀಗುರುವೆಂದು ಗುರುವೆ ಪರದೈವವೆಂದು
ಸಲೆಮೊರೆಹೊಕ್ಕಿಹ ಮೂಢ ಮಹಿಪತಿಯ ೩

## ೧೭೧

ಹರಿಯನರಿಯದಿಹ್ಯ ನರಜನ್ಮಾವ್ಯಾಕೆ
ಪರಬ್ರಹ್ಮವರಿಯದ ಬರೆ ಬ್ರಾಹ್ಮಣವ್ಯಾಕೆ ಧ್ರುವ

ಹರಿಃ ಓಂ ತತ್ಸದಿತಿಯೆಂಬ ಶ್ರೀ ಹರಿ ವಾಕ್ಯವರಿಯದೆ
ಬರುದೆ ಶ್ರೀ ಹರಿ ಶ್ರೀ ಹರಿಯಂದೊದರುವದ್ಯಾಕೆ ೧

ಏಕಾಂಶೇನ ಸ್ಥಿತೋ ಜಗತ ಎಂಬ ವಾಕ್ಯವರಿಯದೆ
ನಾಲ್ಕಾರು ವೇದಶಾಸ್ತ್ರವೋದಿ ಕೇಳುವದ್ಯಾಕೆ ೨

ಯದಾದಿತ್ಯ ಗತಂ ತೇಜೋ ಜಗದ್ಭಾಸಯತೇಖಿಳಂ
ಎಂಬ ವಾಕ್ಯವರಿಯದೆ
ಹದಿನೆಂಟು ಪುರಾಣ ಕೇಳಿ ಹೇಳುವದ್ಯಾಕೆ ೩

ಮಮೈವಾಂಶೋ ಜೀವಲೋಕೇ ಜೀವಭೂತ: ಸನಾತನ ಎಂಬ
ವಾಕ್ಯವರಿಯದೆ ನಾನಾವ್ರತಾಚಾರ ಸಂನ್ಯಾಸ ಕೈಕೊಂಬುದ್ಯಾಕೆ ೪

ಸುದರ್ಶನ ಮಹಾಜ್ವಾಲಾ ಕೋಟಿಸೂರ್ಯ ಸಮಪ್ರಭ ಎಂಬ
ವಾಕ್ಯವರಿಯದೆ ಸೀಳಿ ಸುದರ್ಶನಗಳ ಪೂಜಿ ಮಾಡುವದ್ಯಾಕೆ ೫

ಮಂತ್ರ ಪ್ರಣಮ್ಯವರಿಯದೆ ತಂತ್ರ ಮಂತ್ರಸರವ್ಯಾಕೆ
ಅಂತರಾತ್ಮವರಿಯದೆ ತರ್ಕಭೇದಗಳ್ಯಾಕೆ ೬

ವಿಶ್ವವ್ಯಾಪಕ ಗುರು ಭಾಸ್ಕರಮೂರ್ತಿ ಶ್ರೀಪಾದ
ವಿಡದಿಹ ಮಹಿಪತಿಗೆ ಭವಪಾಶದಂಜಿಕಿನ್ಯಾಕೆ ೭

## ೧೭೨

ಹರಿಯೆಂದು ಮನವೆ ನೀ ಸ್ಮರಿಸೋ ದೃಢದಿಂದ
ಸ್ಮರಿಸಿದಾಕ್ಷಣ ಬಂದು ಒದಗುವ ಗೋವಿಂದ
ಕರುಣದಿಂದಲಿ ನೋಡಿ ಹಿಂಗಿಸುವ ಭವಬಂಧ
ಪರಮದಯಾನಿಧಿಯು ಶ್ರೀಹರಿ ಮುಕುಂದ ೧

ಸ್ಮರಿಸಿದಾಕ್ಷಣ ಪುಣ್ಯಗತಿಗೈದಜಾಮಳ
ಮರೆಯದೆ ಸ್ಮರಿಸಿದ ಧ್ರುವ ಯೈದಿದಢಳ
ಹರಿಯೆಂದು ಪ್ರಹ್ಲಾದ ಪುಣ್ಯಗೈದ ಸಬಳ
ಸ್ಮರಿಸಿದವರ ಕಾವ ಶ್ರೀಹರಿ ಗೋಪಾಲ ೨

ಹರಿಸಿದ ಗಜ ಭಯ ಸ್ಮರಿಸಿದಾಕ್ಷಣ
ಮೊರೆ ಇಟ್ಟು ದ್ರೌಪದಿಗಾಯಿದಭಿಮಾನ
ಸ್ಮರಿಸಿದ ಪಾಂಡವರ ರಕ್ಷಿಸಿದ ಪ್ರಾಣ
ಪರಮಭಕ್ತರ ಜೀವ ಶ್ರೀಹರಿ ನಾರಾಯಣ ೩

ಹರಿನಾಮದಿಂದಾಯಿತು ಅಹಲ್ಯೋದ್ಧಾರಣ
ಸ್ಮರಣೆ ಸಕಲವೆಲ್ಲ ತರಿಸಿತು ಪೂರ್ಣ
ಸುರಮುನಿಜನರಿಗೆ ಇದೇ ನಿಜಭೂಷಣ
ಪರಮ ವೈಷ್ಣವರಿಗೆ ಇದೇ ಜೀವ ಪ್ರಾಣ ೪

ಹರಿಯೆಂದು ನೆನಿಯೋ ನೀ ಗುರು ಕೃಪೆಯಿಂದ
ಸ್ಮರಿಸೊ ಮನವೆ ದೃಢಭಾವ ಭಕ್ತಿಯಿಂದ
ತರಳ ಮಹಿಪತಿಗಿದೆ ನಿತ್ಯ ನಿಜಾನಂದ
ತೋರುವ ಶ್ರೀಹರಿನಾಮ ಸುಖ ಸದಾನಂದ ೫

## ೧೭೩

ಹರಿಯೇ ಎನ್ನ ಪ್ರಾಣಧೊರಿಯೆ ಹರಿಯೆ ಧ್ರುವ

ಕರುಣಾನಂದ ಪೂರ್ಣ ವರಮುನಿಗಳ ಪ್ರಾಣ
ಶರಣಜನರಾಭರಣ ಹರಿ ನಿಮ್ಮ ಚರಣ ೧

ದಾರಿದ್ರ್ಯ ಭಂಜನ ದುರಿತ ವಿಧ್ವಂಸನ
ಪರಮಸು ಸಾಧನ ಹರಿ ನಿಮ್ಮ ಕರುಣ ೨

ಶಿರದಲಿಟ್ಟು ಅಭಯ ಹೊರಿಯೊ ಮಹಿಪತಿಯ
ಕರುಣಿಸಿ ನಿಮ್ಮದಯ ಹರಿಯೊ ಭವಭಯ ೩

## ೧೭೪

ಹರಿಯೇ ಶ್ರೀಗುರು ನಮ್ಮ ಹರಿಯೇ ಸದ್ಗುರು ನಮ್ಮ
ಹರಿಯೇ ಮದ್ಗುರು ಪರಾತ್ಪರ ಪೂರ್ಣನು ಧ್ರುವ

ಹರಿಯೇ ಗುರುವೆಂದೆನಿಸಿ ಗುರವೆ ಹರಿ ಎಂದೆನಿಸಿ
ಕರಸಿಕೊಂಡವನೊಬ್ಬನೆ ಪರಬ್ರಹ್ಮನು
ಹರಿಗುರು ಎರಡು ನಮಕ ಭೇಧ ಮಾಡುತಿಹ್ಯ
ನರಮನುಜಾಗಾಗುವದು ದುರ್ಗತಿಯ ೧

ಒಂದು ವಸ್ತುವೆ ತಾನನೇಕ ನಾಮವ ಧರಿಸಿ
ಸಂದಿಸಿ ಹ್ಯಾ ನಂದ ರೂಪದೊಳಗೆ
ಮಂದಮತಿಗಳ ವಿವರ ಮರ್ಮವನು ಅರಿಯದೆ
ದ್ವಂದ್ವ ಭೇದದಿ ಗಾಢಸುತ್ತಿಹರು ೨

ಹರಿಯೇ ಶ್ರೀಗುರುವಾಗಿ ಗುರುವೆ ಶ್ರೀಹರಿಯಾಗಿ
ತೋರಿದನೇಕೋಮಯವಾಗಿ ಎನಗೆ
ತರಳ ಮಹಿಪತಿ ಸಬಾಹ್ಯಾಂತ್ರ ಪರಿಪೂರ್ಣದಲಿ
ಗುರುತವಾದನು ಹರಿಯೇ ಸಾಕ್ಷತನು ೩

## ೧೭೫

ಹರಿಯೇ ಸುಜನರ ಸಿರಿಯೆ ಸ್ಮರಿಸುವರ ದೊರಿಯೆ
ಹೊರಿಯೋ ನರಹರಿಯೆ ಧ್ರುವ

ಕರುಣಾಗುರು ಜ್ಞಾನಸ್ಫುರಣ
ಪರಮಪುಣ್ಯಚರಣ ಶರಣರಾಭರಣ ೧

ದೂರ ಧರ್ಮದ ಸಹಾಕರ
ಕರ್ಮ ಪರಿಹಾರ ನಿರ್ಮಳಾಕಾರ ೨

ಧೀರ ಪರಮ ಉದಾರ
ಕರುಣಾಸಾಗರ ಗುರು ಮುರಹರ ೩

ಅರುಣ ಘನಕೋಟಿ ಕಿರಣ
ದೀನ ಉದ್ಧರಣ ಆನಂದಪೂರ್ಣ ೪

ದೇವ ದೇವ ಸಂಜೀವ
ಭಾವಿಕರ ಕಾವ ಶ್ರೀವಾಸುದೇವ ೫

ಮಾತಾ ಮಹಿಪತಿಯ ಪಿತ
ದಾತ ನೀನೆ ಶ್ರೀನಾಥ ೬

## ೧೭೬

ಹರಿರೇವ ಪರೋ ಹರಿದೇವ ಗುರೋ
ಹರಿಯೇ ಗುರುವೆಂದರವ್ಹಿರೋ ಧ್ರುವ

ಗುರುಮಧ್ವಪರ್ಹೇಳಿದ ನಿಜಕೀಲು
ಅರಿತುಕೊಂಬುವಾದಿದೆವೆ ಮೇಲು

ಪರಮ ಭಗತರನುಭವದ ಬಾಗಿಲು
ಪರಗತಿ ಸಾಧನಕಿದೆ ಮಿಗಿಲು ೧

ಹರಿಗುರುವೆರಡಾಗಿ ತೋರಿತು ನಾಮವು
ಅರಿಯಲರಿಯದವಾಗಿದೆ ಭ್ರಮವು
ತೋರುವದೊಂದೇ ಸಜ್ಜನರಿಗಿದೇ ನೇಮವು
ಅರಿಕ್ಕುಳ್ಳವರಿಗಿದೇ ಕ್ರಮವು ೨

ಹರಿಗುರು ಒಂದಾಗಿ ತೋರಿತು ನಿಜಘನ
ತರಳ ಮಹಿಪತಿಸ್ವಾಮಿಯ ಕರುಣ
ಗುರುಭಾನುಕೋಟಿತೇಜನೆ ಪರಿಪೂರ್ಣ
ತೋರುವದೊಂದಾಗಿದೆ ನಿಜಖೂನ ೩

## ೧೭೭

ಹರಿ ಹರಿ ಎನ್ನಿ ಸಿರಿಲೋಲ ಎನ್ನಿ ಧ್ರುವ

ಹರಿ ಹರಿ ಎನ್ನಿ ಹರಿ ಹರಿ ಎನ್ನಿ
ಹರಿ ಎಂದು ಮನದೊಳು ಸ್ಮರಿಸುವ ಬನ್ನಿ ೧

ಹರಿ ಎಂದು ಪಡೆದ ಪ್ರಹ್ಲಾದ ಪ್ರತ್ಯಕ್ಷ
ಹರಿ ಎಂದು ಪಾಂಡವರಿಗಾದ ಸುಪಕ್ಷ ೨

ಹರಿ ಎಂದು ಉಪಮನ್ಯು ಪಡೆದ ಸುಕಾಲ
ಹರಿ ಎಂದು ಧ್ರುವ ಏರಿದ ಅಢಳ ೩

ಹರಿ ಎಂದು ಮುನಿಜನರಾದರು ಧನ್ಯ
ಹರಿ ಎಂದವರಿಗೆ ಸರ್ವವು ಮಾನ್ಯ ೪

ಹರಿ ಹರಿ ಎಂದು ಕೊಂಡಾಡುವ ಬನ್ನಿ
ಹರಿ ಮಹಿಪತಿ ಗುರು ತಾಯಿ ತಂದೈನ್ನಿ ೫

## ೧೭೮

ಹರಿ ಹರಿಯೆಂದು ನೆನೆಯೋ
ಮರಿಯದೆ ಮನುಜ ಧ್ರುವ

ನಡೆಯುತ ನುಡಿಯುತ ನಡೆ ನುಡಿಯೊಳಗೆ
ಪೊಡವಿಧರನ ಮಹಿಮೆಯ ಕೊಂಡಾಡುತ
ಇಡವುತ ತೊಡವುತ ಮುಡವುತ ಮನದೊಳು
ಬಿಡದೆ ಸ್ಮರಸೊ ನೀ ಅಡಿ ಗಡಿಗೊಮ್ಮೆ ೧

ಉಣುತ ಉಡುತನ್ನೋದಕ ಕೊಳುತ
ವನಿತಯರೊಡಗೂಡಿ ಘನಸುಖ ಪಡೆಯುತ
ಅನಭದಿಂದಾನಂದದಿ ನೆನೆಯೋ
ತನುಮನದೊಳು ನೀ ಕ್ಷಣಕ್ಷಣಕೊಮ್ಮೆ ೨

ಏಳುತ ಕೂಡುತ ಮಲಗುತ ನೆನೆಯೋ
ಹಲವು ಪರಿಲಿ ಶ್ರೀ ಹರಿ ಸರ್ವೋತ್ತಮ
ನೆಲೆಗೊಂಡಿರೋ ಮಹಿಪತಿ ನಿಜನಾಮವ
ಸಲಹುತ ಸ್ವಾಮಿ ಶ್ರೀಗುರು ಶ್ರೀಪತಿಯ ೩

## ೧೭೯

ಹರಿ ಹರಿ ಹರಿಯೆನ್ನಿ ಹರಿಯ ನೆನವಿಗೊಮ್ಮೆ ತನ್ನಿ ಧ್ರುವ

ಹಿಡಿದು ನಿಜ ಒಂದು ಪಥ ಪಡೆಯಬೇಕು ಸ್ವಹಿತ
ನೋಡಿ ಗೂಢಿನೊಳು ಗುರುತ ಕೊಡುವ ನೋಡಿ ಗುರುನಾಥ
ಒಡಯನಹುದಯ್ಯನೀತ ಪೊಡವಿಯೊಳು ಶ್ರೀನಾಥ
ಮಾಡಿ ಭಕ್ತಿ ಏಕಚಿತ್ತ ಕೂಡಿ ಜ್ಞಾನಸನ್ಮತ ೧

ಹಿಡಿದು ನೀವು ಗುರುಪಾದ ಮಾಡಬ್ಯಾಡಿ ಭೇದ
ಕಡಿಯಬೇಕು ಕಾಮಕ್ರೋಧ ಕೂಡಿ ನಿಜಸುಭೋದ
ನೋಡಿ ಸ್ವಾನುಭವದ ಬೋಧ ಗೂಢಗುಪ್ತವಾಗಿಹ್ಯದ
ಕೊಂಡಾಡುತಿಹ್ಯ ವೇದ ಬಿಡದೆ ಮಹಿಮೆ ನಿರ್ಗುಣದ ೨

ನಾವು ನೀವುವೆಂಬ ನುಡಿ ಗೋವಿಸುವದೀಡ್ಯಾಡಿ
ಹ್ಯಾವ ಹೆಮ್ಮೆಹಿಡಿಯಬ್ಯಾಡಿ ಭಾವ ಬಲಿದು ಪೂರ್ಣ ನೋಡಿ
ಕಾವ ಕರುಣನ ಕೂಡಿ ಭವಬಂಧನ ನೀಗಿ ಬಿಡಿ
ಪಾವನ್ನವಾದ ನೋಡಿ ಮಹಿಪತಿ ನಿಜಗೂಡಿ ೩

## ೧೮೦

ಹರಿ ಹರಿ ಹರಿ ಹರಿ ಹರಿಯೆನಬೇಕು
ಹರಿ ಸ್ಮರಣೆಯೋಳನುದಿನವಿರಬೇಕು ಧ್ರುವ

ಹರಿಯೇ ಶ್ರೀ ಪರಬ್ರಹ್ಮೆನಬೇಕು
ಹರಿ ಪರಂದೈವೆವೆಂದರಿಬೇಕು
ಹರಿಯೇ ತಾ ಮನದೈವೆನಬೇಕು
ಹರಿ ಋಷಿ ಮುನಿಕುಲಗೋತ್ರೆನಬೇಕು ೧

ಹರಿಯೇ ತಾಯಿತಂದೆನಬೇಕು
ಹರಿಯೇ ನಿಜ ಬಂಧುಬಳಗೆನಬೇಕು
ಹರಿಯೇ ಆಪ್ತ ಮೈತ್ರೆನಬೇಕು
ಹರಿಕುಲಕೋಟೀ ಬಳಗೆನಬೇಕು ೨

ಹರಿಯೇ ಸಲಹುವ ದೊರೆಯನಬೇಕು
ಹರಿ ಸುಖ ಸೌಖ್ಯದ ಸಿರಿಯೆನಬೇಕು
ಹರಿ ನಾಮವೆ ಧನದ್ರವ್ಯೆನಬೇಕು
ಹರಿಸ್ಮರಣೆಯು ಸಂಪದವೆನಬೇಕು ೩

ಹರಿದಾಸರ ಸಂಗದಲಿರಬೇಕು
ಹರಿಭಕ್ತರ ಅನುಸರಿಸಿರಬೇಕು
ಹರಿಚರಣದಿ ರತಿಮನವಿಡಬೇಕು
ಹರಿ ನಿಜರೂಪವ ನೋಡಲಿಬೇಕು ೪

ಹರಿ ಮಹಿಮೆಯ ಕೊಂಡಾಡಲಿಬೇಕು
ಹರಿಸ್ತುತಿಸ್ತವನ ಪಾಡಲಿಬೇಕು
ಹರಿತಾರಕ ಪರಬ್ರಹ್ಮನೆಬೇಕು
ಹರಿ ಸರುವೋತ್ತಮ ಸ್ವಾಮೆನಬೇಕು ೫

ಹರಿಯೇ ಸಕಲ ತಾ ಧರ್ಮನಬೇಕು
ಹರಿ ಸರ್ವಮಯ ಪುಣ್ಯಕ್ಷೇತ್ರನಬೇಕು
ಹರಿಯೇ ಇಹಪರ ಪೂರ್ಣನಬೇಕು
ಹರಿ ಸದೋದಿತ ಸಹಕಾರನಬೇಕು ೬

ಹರಿ ಬಾಹ್ಯಾಂತರೇಕೋಮಯವೆನಬೇಕು
ಹರಿ ಸಕಲವು ವ್ಯಾಪಕವೆನಬೇಕು
ಹರಿಯೇ ಶ್ರೀ ಪರಮಾತ್ಮನಬೇಕು
ಹರಿ ಮಹಿಪತಿ ಸದ್ಗತಿಯೆನಬೇಕು ೭

## ೧೮೧

ಹರಿ ಹರಿ ಹರಿ ಹರಿ ಹರಿಯೆಂದೆನ್ನಿ
ಹರಿಸ್ಮರಣೆ ಪೂರಣ ಕರತನ್ನಿ ಧ್ರುವ

ಕರತನ್ನಿರೊ ವರಗುರು ಕೃಪೆಯಿಂದ
ಗುರುವರ ಮೂರುತಿ ಕರುಣಾನಂದ ೧

ಕರುಣಿಸಿ ನೋಡಲು ಬಾಹುದು ಪುಣ್ಯ
ಶರಣ ಜನರಿಗಿದು ತಾರ್ಕಣ್ಯ ೨

ತಾರ್ಕಣ್ಯಂಬುದು ತರ್ಕರಹಿತ
ಸರ್ಕನೆ ತಿಳಿವದು ತನ್ನೊಳು ಗುರುತ ೩

ಗುರ್ತವಾಗಲು ನಿಜ ಹಿತಾರ್ಥ
ಅರ್ತವಗಿದು ಸ್ವಸುಖ ಪರಮಾರ್ಥ ೪

ಪರಮಾರ್ಥವು ಪರಗತಿ ಸಾಧನ
ಪರಲೋಕಕೆ ಐದುವ ಸೊಪಾನ ೫

ಸೋಪಾನವೆ ಸುಲ್ಲಭ ಸುಪಥ
ಉಪಾಯದಲಿ ತಿಳಿಯಲು ಸ್ವಹಿತ ೬

ಸ್ವಹಿತ ಮಾರಿಕೊಂಬುದೇ ಸುಖ
ಸಾಹ್ಯ ಮಾಡುವ ಶ್ರೀ ಗುರುಕುಲತಿಲಕಾ ೭

ಶ್ರೀಗುರು ಸೇವೆಯ ಮಾಡಿರೊ ಬ್ಯಾಗ
ಜಗದೊಳಗಿದು ಮಹಾ ಪುಣ್ಯದ ಯೋಗ ೮

ಯೋಗವೆ ಮಹಾ ನಿಜ ಭಕ್ತರ ಪ್ರಾಣ
ಸುಗಮ ಸುಪಥ ಸದ್ಗತಿ ಸಾಧನ ೯

ಸಾಧನ ಪಡೆವದು ಗುರುದಯ ಕರುಣ
ಸದಮಲ ಸುಖ ಸುಜ್ಞಾನದ ಸ್ಫುರಣ ೧೦

ಸ್ಫುರಣ ಸುಫಲಿತ ಸುಜನರ ಹೃದಯ
ಸುರ ಮುನಿ ಜನರಾನಂದದ ಉದಯ ೧೧

ಉದಯವಾಯಿತು ಮಹಿಪತಿ ಮನದೊಳಗೆ
ಸದೋದಿತವಾಯಿತು ಗುರುಕೃಪೆಲೆನಗೆ ೧೨

ಎನ್ನೊಳು ದೋರಿತಾನಂದದಲಹರಿ
ತನ್ನಿಂದಲಿ ತಾನೊಲಿದ ಶ್ರೀ ಹರಿ ೧೩

## ೧೮೨

ಹಿಡಿಯಬೇಕು ಶ್ರೀ ಕೃಷ್ಣನ ತುಡುಗತನವ ಧ್ರುವ

ಕಡಿಯಗುಡದೆ ವೈವನು ಕೆನಿಮೊಸರ
ತುಡುಗತನವನು ಮಾಡುವ ಬಲು ಹೆಸರ
ಅಡಗಿಹ ಠಾವನೆ ತಾನುಸರ ಮಾಡಿ ತಾ ಕುಸರ ೧

ಬಿಡಬಾರದು ಕಣ್ಣಿಲೆ ಕಟ್ಟಿ
ಬಿಡಿಸಿಕೊಂಬುವ ಇವ ಬಲು ಜಗಜೆಟ್ಟಿ
ಅಡಗಿಸಿಕೊಬೇಕು ಘಟ್ಟಿವಿಡಿದು ಮನಮುಟ್ಟಿ ೨

ಸಾಧಿಸಿ ಸದ್ಗುರುದಯ ಕರುಣದಲಿ
ಭೇದಿಸಿ ಹಿಡಿಯೊ ಮಹಿಪತಿ ಸುಮನದಲಿ
ಒದಗಿಟ್ಟುಕೊ ನೀ ಹೃದಯದಲಿ ಇದೇ ನೋಡನುದಿನಲಿ ೩

## ೧೮೩

ಹೊಂದಿ ಬದುಕಿರೋ ಮನವೆ ಇಂದಿರೇಶನ
ಎಂದೆಂದಗಲದೆ ದ್ವಂದ್ವ ಶ್ರೀಪಾದವ ಹೊಂದಿ
ಸುಖಿಯಾಗೋ ತಂದೆ ಸರ್ವೆಶನ ಧ್ರುವ

ಮುಚ್ಚಿಕೊಂಡು ಮುಕುತಿ ಸಾಧನ
ಹುಚ್ಚುಗೊಂಡು ಸಚ್ಚಿದಾನಂದನ
ಬಚ್ಚಿಟ್ಟುಕೊಂಡು ನಿಜ
ನೆಚ್ಚಿಕೊಂಡಿರೋ ನೀ ಅಚ್ಯುತಾನಂತನ ೧

ಹರಿಚರಣ ಕಮಲವ ಕಂಡು
ಹರಿನಿಜಧ್ಯಾನ ನೆಲೆಗೊಂಡು
ಹರಿಕರುಣವ ಪಡಕೊಂಡು
ಹರಿನಾಮಾಮೃತ ಸವಿದುಂಡು ೨

ಶ್ರೀಹರಿಸೇವೆ ಮಾಡಿಕೊಂಡು
ಇಹಪರ ಸುಖ ಸೂರೆಗೊಂಡು
ಬಾಹ್ಯಾಂತ್ರಪೂರ್ಣ ಮನಗಂಡು
ಮಹಿಪತಿ ಸ್ವಾಮಿ ವಾಲೈಸಿಕೊಂಡು ೩

## ೧೮೪

ಹೊಂದಿ ಸುಖಿಸು ಹರಿಯ ಪಾದಾ ಧ್ರುವ

ನಾನಾ ಪುಣ್ಯ ನಿದಾನದಿ ಧರೆಯೊಳು ।
ಮಾನವ ಜನುಮಕ ನೀನೀಗ ಬಂದು ।
ಶ್ವಾನ ಶೂಕರ ಪರಿ ತಾ ನಿಜವರಿಯದೆ ।
ಜ್ಞಾನ ಶೂನ್ಯನಾಗೇ–ನಿಹುದಣ್ಣಾ ೧

ಹಿಡಿವರೇ ಭ್ರಾಂತಿಯ ಜಡಿವರೆ ಮತಿಯ ।
ನುಡಿವರೇ ಪುಸಿಯನು ಬಿಡುವರೆ ಸತ್ಯವ ।
ಇಡುವರೆ ದುರ್ಗುಣ ಸಿಡುವರೆ ಬೋಧಕ ।
ಕೆಡುವರೆ ಮರವಿಲಿ ಬಿಡುವರೆ ವ್ಯರ್ಥಾ ೨

ಮೂರು ದಿನದ ಸಂಸಾರದೊಳಗ । ಕಂ ।
ಸಾರಿಯ ಭಕ್ತಿಯ ಸೇರಿ ।
ಪಾರವ–ಗೊಂಬುದು ಸಾರ ಸ್ವಹಿತ ಸಹ ।
ಕಾರಿ ಮಹಿಪತಿ ಸಾರಿದ ಬೋಧಾ ೩

## ೧೮೫

ಜಯ ಜಯ ಕರುಣಾಕರ ಕೃಪಾಲ
ಜಯ ಜಯ ಗುರುಮುನಿಜನ ಪ್ರತಿಪಾಲ ಧ್ರುವ

ರಾಜತೇಜೋನಿಧಿ ರಾಜ ರಾಜೇಂದ್ರ
ರಾಜಿಸುತಿಹ ಮುಕಟ ಮಣಿ ಸುರೇಂದ್ರ

ಸುಜನ ಹೃದಯ ಸದ್ಗುಣ ಮಣಿ ಸಾಂದ್ರ
ಅಜಸುರ ಸೇವಿತ ಸುಜ್ಞಾನ ಸುಮೋದ ೧

ಅಗಣಿತ ಗುಣ ಅಗಾಧ ಅಪಾರ
ನಿಗಮಗೋಚರ ನಿರುಪಮ ನಿರ್ಧಾರ
ಸಗುಣ ನಿರ್ಗುಣನಹುದೊ ಸಾಕ್ಷಾತ್ಕಾರ
ಭಕ್ತವತ್ಸಲ ಮುನಿಜನ ಮಂದಾರ ೨

ಧೀರ ಉದಾರ ದಯಾನಿಧಿ ಪೂರ್ಣ
ತಾರಕ ಸ್ವಾಮಿ ಸದ್ಗುರು ನಿಧಾನ
ತರಳ ಮಹಿಪತಿ ಜನ್ಮೋದ್ಧರಣ
ಚರಣ ಸ್ಮರಣಿ ನಿಮ್ಮ ಸಕಲಾಭರಣ ೩

## ೧೮೬

ಜಯ ಜಯ ಕರುಣಾಕರ ಗುರುದೇವ
ದಯಗುಣದಲಿ ನೀ ಪೂರ್ಣ ಶ್ರೀ ವಾಸುದೇವ ಧ್ರುವ

ಮುನಿಜನ ಪಾಲಕ ದೀನ ದಯಾಳ
ಅನಾಥ ಬಂಧು ಶರಣಾಗತ ವತ್ಸಲ
ಸನಕಾದಿಗಳೊಂದಿತ ಸಿರಿಸುಖಲೋಲ
ಅನುದಿನ ಅಣುರೇಣುಕ ನೀನೆ ಸುಕಾಲ ೧

ಪತಿತ ಪಾವನ ಪರಮ ಉದಾರ
ಭಕ್ತವತ್ಸಲ ಮಾಮನೋಹರ
ಅತಿಶಯಾನಂದ ಸುಜ್ಞಾನಸಾಗರ
ಚತುರ್ದಶ ಭುವನಕೆ ನೀ ಸಹಕಾರ ೨

ದೇಶಿಕರಿಗೆ ದೇವ ನೀನೇ ನಿಧಾನ
ವಿಶ್ವಪಾಲಕ ಸ್ವಾಮಿ ನೀ ಸುಗುಣ
ಭಾಸ್ಕರ ಕೋಟಿ ತೇಜ ನೀನೇ ಪೂರ್ಣ
ಲೇಸಾಗ್ಹೊರಿಯೊ ದಾಸ ಮಹಿಪತಿ ಪ್ರಾಣ ೩

## ೧೮೭

ಜಯ ಜಯ ಗುರುನಾಥ
ದಯ ಗುಣದಲಿ ಅಖಂಡಿತ ಧ್ರುವ

ಅನುಗ್ರಹದಲಿ ಸಮರ್ಥ
ಜನವನದೋರುವೆ ಪರಮಾರ್ಥ
ನೀನೆ ಸಕಲಾರ್ಥ
ಅಣು ರೇಣುಕ ಸುಹಿತಾರ್ಥ ೧

ಬಡವರಿಗಾಧಾರಿ
ನೀಡುವುದರಲಿ ಘನ ಉದಾರಿ
ಕುಡುವೆ ನಿಜದೋರಿ
ಕಡೆಗಾಣಿಸುವೆ ಸಹಕಾರಿ ೨

ಪಿಡಿದವರ ಕೈಯ
ಬಿಡ ಎಂದೆಂದಿಗೆ ನಿಶ್ಚಯ
ಒಡೆಯನಹುದಯ್ಯ
ಮೂಢ ಮಹಿಪತಿ ಮಹದಾಶ್ರಯ ೩

## ೧೮೮

ಜಯ ಜಯ ಮಂಗಳ ಮುನಿಜನ ಪಾಲ
ಜಯ ಜಯ ಸ್ವಾಮಿ ಸದ್ಗುರು ಕೃಪಾಲ ಧ್ರುವ

ತೇಜಃ ಪುಂಜವು ನಿಮ್ಮ ಘನಸುಖಸಾಂಧ್ರ
ರಾಜ ತೇಜೋನಿಧಿ ರಾಜ ರಾಜೇಂದ್ರ
ಸುಜನರ ಹೃದಯ ಸುಜ್ಞಾನ ಸಮುದ್ರ
ಅಜಸುರವಂದ್ಯ ಶ್ರೀ ದೇವದೇವೇಂದ್ರ ೧

ಪತಿತ ಪಾವನ ಪೂರ್ಣ ಅತಿಶಯಾನಂದ
ಯತಿ ಮುನಿಗಳಿಗೆ ನೀ ದೋರುವೆ ಚಂದ
ಪಿತಾಮಹನ ಪಿತನಹುದೊ ಮುಕುಂದ
ಸತತ ಸುಪಥದಾಯಕ ನೀ ಗೋವಿಂದ ೨

ದೇಶಿಕರಿಗೆ ದೇವ ನಿಮ್ಮ ಸ್ವಭಾವ
ಋಷಿ ಮುನಿಗಳಿಗೆ ನೀ ಜೀವಕೆ ಜೀವ
ದಾಸ ಮಹಿಪತಿಗೇನಹುದೊ ಮನದೈವ
ಲೇಸಾಗೆನ್ನೊಳಗಿರೊ ಶ್ರೀ ವಾಸುದೇವ ೩

## ೧೮೯

ಜಯ ಜಯವೆನ್ನಿ ಕೈಯ ಮುಗುಬನ್ನಿ
ದಯವುಳ್ಳ ಮಹಿಮಗಾರುತಿ ಮಾಡುವ ಬನ್ನಿ ಧ್ರುವ

ಮನವೆ ಬತ್ತಿ ತನುವಾರತಿ ಘನಕೆ ಮಾಡವ ಬನ್ನಿ
ನೆನವು ತುಪ್ಪ ಜ್ಞಾನದೀಪವನ್ನು ಬೆಳಗುವ ಬನ್ನಿ ೧

ಭಾವಗುಟ್ಟು ತಾವಿಲಿಟ್ಟು ದೈವ ನೋಡು ಬನ್ನಿ
ಮಾವಮಕರಗುಣ ಬಿಟ್ಟು ಸೇವೆಮಾಡು ಬನ್ನಿ ೨

ಮಹಿಪತಿಸ್ವಾಮಿಗಿನ್ನು ಜಯಜಯವೆನ್ನಿ
ಬಾಹ್ಯಾಂತ್ರ ಬೆಳಗಿ ಪೂರ್ಣ ಧನ್ಯವಾಗು ಬನ್ನಿ ೩

## ೧೯೦

ಜಯ ಜಯವೆನ್ನಿ ಸ್ವಾಮಿ ಶ್ರೀಹರಿಗೆ
ದಯೆಯುಳ್ಳ ಮಹಿಮ ಶ್ರೀಮುಕುಂದ ಮುರಾರಿಗೆ ಧ್ರುವ

ಭಾವಿಸಿ ನಿಮ್ಮೊಳಗೆ ದೇವಾಧಿ ಶ್ರೀದೇವಿಗೆ ೧

ಅನುಭವಿಸುವ್ಹಾಂಗೆಂದೆಂದು ಮನೋಮಂದಿರಕೆ ತಂದು ೨

ಕಾಣುವನ ಕಂಡು ನೋಡಿ ಕಾಣಿಸಿಕೊಂಬ್ಹಾಂಗೆ ಮಾಡಿ ೩

ಪಾವನಗೈಸುವ ದೇವಗೆ ಕಾವ ಕರುಣನಿಧಿಗೆ ೪

ವರ ಕೃಪಾಳಿಗೆ ಸಿರಿ ಸುಖಲೋಲಗೆ ೫

ಅಂತರಾತ್ಮಲಿಹಗೆ ಸಂತತ ಸದೋದಿತಗೆ ೬

ಭಾನುಕೋಟಿ ತೇಜಗೆ ದೀನಮಹಿಪತಿ ಸ್ವಾಮಿಗೆ ೭

## ೧೯೧

ಜಯ ದೇವ ಜಯ ದೇವ ಜಯ ಜಗನ್ನಾಥ
ದಯಗುಣದಲಿ ಪರಿಪೂರ್ಣ ಶ್ರೀಗುರು ಮನ್ನಾಥ ಧ್ರುವ

ಅಂದಿಗಿಂದಿಗೆ ನೀನೆ ನಿತ್ಯನುಭವದಿಂದ
ತಂದಿ ತಾಯಿ ನೀನೆ ಶ್ರೀಹರಿ ಮುಕುಂದ
ಬಂಧುಬಳಗ ನೀನೆ ಕುಲಕೋಟಿಗಳಿಂದ
ಎಂದೆಂದೆನಗೆ ನೀನೆ ಫಲದೊಲವಿಂದ ೧

ಸೃಷ್ಟಿ ಜನ ಪಾಲಕ ನೀನೆ ಸದ್ಗುರು ರನ್ನ
ಸೃಷ್ಟಿಯಲಿ ಪೊಗಳುತಲಿ ಶ್ರುತಿಸ್ಮೃತಿಗಳು ನಿನ್ನ
ಇಷ್ಟ ಕುಲದೈವಗಳೆಂಬುದು ನೀ ಎನ್ನ
ದೃಷ್ಟಿಸಿ ಮಾಡುವ ಭಕ್ತಜನರಿಗೆ ಪಾವನ್ನ ೨

ಮನೋಹರ ಮಾಡುವ ಮಂಗಳಕರಮೂರ್ತಿ
ಘನ ಸುಖದಾಯಕ ನೀನೆ ಜ್ಞಾನದ ನಿಜಸ್ಫೂರ್ತಿ
ಭಾನುಕೋಟಿತೇಜ ನೀನೆ ಸಕಲಸಾರ್ಥಿ
ಅನುದಿನ ಮಾಡೊ ಮಹಿಪತಿ ಶ್ರೀಪಾದಕೆ ಆರ್ತಿ ೩

## ೧೯೨

ಜಯದೇವ ಜಯದೇವ ಜಯ ವಾಸುದೇವ
ಭಾಸುವ ಭಾಸ್ಕರಕೋಟಿತೇಜನ ಮನದೈವ ಧ್ರುವ

ಪ್ರಾರ್ಥಿಸುವದರ್ತಿ ಅರ್ಥಿಯ ಘನ ಸ್ಫೂರ್ತಿ
ಸ್ಫೂರ್ತಿಗೆ ಸುಸ್ಥಾನಾಗಿಹ ನೀ ಘನಗುರು ಮೂರ್ತಿ
ಮೂರ್ತಿ ನಿಮ್ಮ ಕೀರ್ತಿ ಬೆಳಗುದು ಭಾವಾರ್ತಿ
ಅರ್ತಿ ಬೆಳಗುವ ಕಂಗಳಿಗ್ಯಾಗಿಹ ನೀ ಸಾರ್ಥಿ ೧

ಸುಗುಣ ನಿರ್ಗುಣ ನೀನೆ ಪರಿಪೂರ್ಣ
ಯೋಗಿಯ ಮಾನಸಹಂಸನಾಗುವೆ ನೀ ಪೂರ್ಣ
ಬಗೆ ಬಗೆ ಭಾಸುವ ಭಕ್ತವತ್ಸಲ ಗುಣ
ಸುಗಮಾಗೂದಕೆ ನಿಮ್ಮ ದಯ ಅಧಿಷ್ಠಾನ ೨

ಮುನಿಜನಕಾಗುವ ಖೂನ ಸ್ವಾನುಭದ ಜ್ಞಾನ
ಸನಕ ಸನಂದನ ವಂದಿತ ನೀನೆ ಅನುದಿನ
ಘನಸುಖದಾಯಕ ಸದ್ಗುರು ನೀ ನಿಧಾನ
ದೀನ ಮಹಿಪತಿ ಸ್ವಾಮಿ ನೀ ಸನಾತನ ೩

## ೧೯೩

ಮಂಗಳ ಜಯಮಂಗಳ ಶುಭ
ಮಂಗಳ ಶ್ರೀ ಗುರುಮೂರ್ತಿಗೆ ಧ್ರುವ

ವೇದೋದ್ಧಾರ ಶ್ರೀಮತ್ಸ್ಯಗೆ ಮಂಗಳ
ಮೇದಿನಿಯ ಪೊತ್ತ ಕೂರ್ಮಗೆ ಮಂಗಳ
ಕಾದಿ ಗೆದ್ದ ಶ್ರೀವರಾಹಗೆ ಮಂಗಳ
ಒದಗಿ ಮೂಡಿದ ನರಸಿಂಹಗೆ ಮಂಗಳ ೧

ಧರಿಯೆ ದಾನವಕೊಂಡ ವಾಮನಗೆ ಮಂಗಳ
ಶೂರ ಪರಶುರಾಮಗೆ ಮಂಗಳ
ಶರಣ ರಕ್ಷಕ ಶ್ರೀರಾಮಗೆ ಮಂಗಳ
ಸಿರಿಯನಾಳುವ ಶ್ರೀಕೃಷ್ಣಗೆ ಮಂಗಳ ೨

ಗುಹ್ಯ ಗೋಪ್ಯದಲಿಹ ಬೌದ್ಧಗೆ ಮಂಗಳ
ಹಯವನೇರಿದ ಕಲ್ಕಿಗೆ ಮಂಗಳ
ಜಯ ಜಯ ಮಹಿಪತಿಸ್ವಾಮಿಗೆ ಮಂಗಳ
ದಯುವುಳ್ಳ ಶ್ರೀದೇವಿದೇವಗೆಮಂಗಳ ೩

## ೧೯೪

ಮಂಗಳ ಮಂಗಳ ಜಯಮಂಗಳ ಶುಭ
ಮಂಗಳ ಸ್ವಾಮಿಸರ್ವೋತ್ತಮಗೆ ಸಹಸ್ರಮಂಗಳ
ದೇವದೇವೋತ್ತಮಗೆ ಧ್ರುವ

ಕೇಶವ ನಾರಾಯಣಗೆ ಮಂಗಳ
ವಾಸುದೇವ ವಾಮನಗೆ ಮಂಗಳ
ಹೃಷೀಕೇಶ ಪುರುಷೋತ್ತಮಗೆ ಮಂಗಳ
ವಸುದೇವಸುತ ಶ್ರೀಕೃಷ್ಣಗೆ ಮಂಗಳ ೧

ಅಚ್ಯುತ ಜನಾರ್ಧನಗೆ ಮಂಗಳ
ಮತ್ಸ್ಯಕೂರ್ಮ ವರಾಹಿಗೆ ಮಂಗಳ
ಸಚ್ಚಿದಾನಂದ ಶ್ರೀಧರಗೆ ಮಂಗಳ
ಮುಚುಕುಂದವರದ ವಿಷ್ಣುಗೆ ಮಂಗಳ ೨

ಮಾಧವ ಮಧುಸೂದನಗೆ ಮಂಗಳ
ಸಾಧು ಹೃದಯುವಾಸಗೆ ಮಂಗಳ
ಅಧೋಕ್ಷಜ ಅನಿರುದ್ಧಗೆ ಮಂಗಳ
ಪದ್ಮನಾಭ ಪ್ರದ್ಯುಮ್ನಗೆ ಮಂಗಳ ೩

ಗರುಡವಾಹನ ಗೋವಿಂದಗೆ ಮಂಗಳ
ಉರಗಶಯನ ಉಪೇಂದ್ರಗೆ ಮಂಗಳ
ಹರಿ ದಾಮೋದರ ಸಂಕರುಷಣಿಗೆ ಮಂಗಳ
ನಾರಸಿಂಹ ತ್ರಿವಿಕ್ರಮಗೆ ಮಂಗಳ ೪

ಪರಮ ಪಾವನ ಭಾರ್ಗವಗೆ ಮಂಗಳ
ಕರುಣಾಕರ ಶ್ರೀ ರಾಮಗೆ ಮಂಗಳ
ಧರಿಯೊಳು ಭೌದ್ಧ ಕಲ್ಕಿಗೆ ಮಂಗಳ
ತರಳ ಮಹಿಪತಿಸ್ವಾಮಿಗೆ ಮಂಗಳ ೫

## ೧೯೫

ಮಂಗಳಾರತಿ ಮಾಡಿ ಭಾವದಿಂದ
ಮಂಗಳ ಮಹಿಮನಾದ ದೇವಾದಿ ಶ್ರೀದೇವಗೆ ಧ್ರುವ

ಮಾಡಿ ಏಕೋ ಭಾವದಿಂದ
ನೋಡಿರೋ ಬ್ರಹ್ಮಾನಂದ ೧

ಕಂಗಳದೆರೆದು ನೋಡಿ
ಮಂಗಳಾರತಿ ಪಾಡಿ ೨

ಆರ್ತ ಭಾವದಾರತಿ
ಅರ್ತು ಮಾಡಿ ನಿತ್ಯಪ್ರತಿ ೩

ಸೇವೆ ಇದೆ ಬಲು ಸುಖ
ಪಾವನೆಗೈಸುವ ಕೌತುಕ ೪

ದೀನ ಮಹಿಪತಿ ಸ್ವಾಮಿ
ಭಾನುಕೋಟಿ ತೇಜಗಿನ್ನು ೫

## ೧೯೬

ಮಂಗಳಾರತಿ ಮಾಡಿ ಮಂಗಳ ಮಹಿಮಾನಂಗಜನಕ ಹರಿ
ತುಂಗವಿಕ್ರಮಗೆ ಮಂಗಳಾರತಿಯ ಧ್ರುವ

ಅಗಣಿತಗುಣ ಅಗಮ್ಯಗೋಚರ
ಸುಗಮದಲಾಡುವ ನಿಗಮೋದ್ಧಾರಗೆ ೧

ಬಗೆದು ಬೆನ್ನಿಲಿ ಭಾರವ ನೆಗೆದಿಹ ನೋಡಿ
ಭಗತವತ್ಸಲ ಸ್ವಾಮಿ ನಗಧರಗೆ ೨

ಜಗತಿಯ ಕದ್ದೊಯ್ದ ಸುರನ ಸೀಳಿದ
ಜಗದೋತ್ತಮನಾದ ಜಗದೋದ್ಧಾರಗೆ ೩

ದುರುಳದೈತ್ಯನ ಬೆರಳುಗುರಿಲಿ ಸೀಳಿದ
ತರಳ ಪ್ರಹ್ಲಾದಗೊಲಿದ ನರಹರಿಗೆ ೪

ಬಲಿಯ ದಾನವ ಬೇಡಿ ನೆಲೆಗೆ ಅಳೆದುಕೊಂಡು
ಬಲಿಯ ಬಾಗಿಲ ಕಾಯ್ದ ಶ್ರೀನಿಧಿಗೆ ೫

ಪರಶುಪಿಡಿದು ಕ್ಷತ್ರಿಯರ ಸಂಹರಿಸಿದ
ಪರಮಪುರುಷನಾಗಿಹ ತಪೋನಿಧಿಗೆ ೬

ದೇವತಿಗಳ ಸೆರೆಯ ಬಿಡಿಸಿದ ದೇವನು
ಪಾವನಮೂರುತಿ ಅಹಲ್ಯೋದ್ಧಾರಗೆ ೭

ಯದುಕುಲತಿಲಕ ವಿದುರವಂದಿತನಾದ
ಬುಧಜನಪಾಲ ಮದನಮೋಹನಗೆ ೮

ಸುಳಿದು ತ್ರಿಪುರದಲಿ ಹಳಿದು ನಾರೇರ ವ್ರತ
ಹೊಳೆವದೋರಿದ ಚಲುವಿಲಿ ಮಹಾಮುನಿಗೆ ೯

ಮುದ್ದು ತೇಜಯನೇರಿ ತಿದ್ದಿ ರಾವುತನಾದ
ಮಧ್ವಾಂತ್ರದ ಮಹಿಪತಿ ಪ್ರಾಣಪತಿಗೆ ೧೦

## ೧೯೭

ಕೋಲು ಕೋಲೆನ್ನಕೋಲೆ ಕೋಲು ಕೋಲೆನ್ನಕೋಲೆ
ಸದ್ವಸ್ತುವಿನ ಬಲಗೊಂಬೆಕೋಲೆ. ಧ್ರುವ

ಕೋಲುನಿಕ್ಕುತ ಬನ್ನಿ ಬಾಲೇರೆಲ್ಲರು ಕೂಡಿ
ಮ್ಯಾಲ್ಯೆ ಮಂದಿರದ ಹಾದೀಲಿ ಕೋಲೆ
ಮ್ಯಾಲೆ ಮಂದಿರದೊಳು ಬಾಲಮುಕುಂದತಾನು
ಲೋಲ್ಯಾಡುತ ಒಳಗಿದ್ದಾನೆ ಕೋಲೆ ೧

ಆದಿಗಿಂತಲ್ಯದೆ ಹಾದಿ ಅನಾದಿಯು
ಸಾಧಿಸ ಬನ್ನಿ ಒದಗಿನ್ನು ಕೋಲೆ
ಸಾಧಿಸಿ ಬರಲಿಕ್ಕೆ ಸಾಧ್ಯವಾಗುತಲ್ಯಾದೆ
ಭೇದಿಸಿ ನೋಡಿ ಮನದಲಿ ಕೋಲೆ ೨

ಕಣ್ಣಿನೊಳಿಹ್ಯ ಬೊಂಬೆಕಾಣಬರುತ್ತದೆ
ಜಾಣ್ಯೇರು ನೀವು ತಿಳಕೊಳ್ಳಿಕೋಲೆ
ಜಾಣ್ಯೇರು ನೀವು ಕಾಣದೆ ಹೋಗಬ್ಯಾಡಿ
ಜಾಣ್ರಿಸುತ್ಹಾನೆ ಸದ್ಗುರು ಕೋಲೆ ೩

ಸದ್ಗುರುಪಾದಕೆ ಸದ್ಭಾವವಿಟ್ಟು ನೀವು
ಸದ್ಬೋಧ ಕೇಳಿ ಸಾಧಿಸಿ ಕೋಲೆ
ಸಾಧಿಸಿ ಕೇಳಿ ನೀವು ಬುಧಜನರೊಡಗೂಡಿ
ಚದುರತನದಲಿ ಅತಿ ಬ್ಯಾಗೆ ಕೋಲೆ ೪

ಅರಹುವೆಂದ ಸೀರೆಯನುಟ್ಟು ಕುರವ್ಹೆಂಬ ಕುಪ್ಪಸಲಿ
ಇರವಂತಿ ಪುಷ್ಪಲಿ ಮುಡಿದಿನ್ನು ಕೋಲೆ
ಮುಡಿದು ಬರಲು ಪೂರ್ಣ ಒಡಗೂಡಿ ಬರುತಾನೆ
ಬಡವನಾ ಧಾರಿ ಬಲಗೊಂಬೆ ಕೋಲೆ ೫

ಬಲಗೊಂಬೆ ಸಾಧನವು ನೆಲೆಗೊಂಡು ಮಾಡಬೇಕು
ವಲವ್ಹಾಂಗ ತಾನೆ ಶ್ರೀಹರಿ ಕೋಲೆ
ಶ್ರೀಹರಿ ಮುಂದೆ ನೀವು ಸೋಹ್ಯ ತಿಳಿದುಬನ್ನಿ
ಸಾಹ್ಯಮಾಡುವ ಇಹಪರಕೆ ಕೋಲೆ ೬

ಇಹಪರಕೆ ದಾತ ಮಹಿಪತಿಸ್ವಾಮಿ
ಸಹಕಾರನೊಬ್ಬ ಶ್ರೀಪತಿಕೋಲೆ
ಶ್ರೀಪತಿಸ್ತುತಿ ಕೊಂಡಾಡಲಿಕ್ಕೆ ಪೂರ್ಣ
ಭುಕ್ತಿ ಮುಕ್ತಿಯ ನೀಡು ತಾನೆ ಕೋಲೆ ೭

## ೧೯೮

ಕೋಲು ಕೋಲೆನ್ನ ಕೋಲೆ ಕೋಲು ಕೋಲೆನ್ನ ಕೋಲೆ
ಕೋಲು ಶ್ರೀಹರಿಯ ಬಲಗೊಂಬೆ ಕೋಲೆ ಧ್ರುವ

ಶಿಕ್ಷಿಸಿ ನಿಗಮ ಚೋರ ರಾಕ್ಷಸನ ಕೊಂದು
ರಕ್ಷಿಸಿ ವೇದವನುಳುಹಿದ ಕೋಲೆ
ರಕ್ಷಿಸಿ ವೇದವನುಳುಹಿದ ಕ್ಷಿತಿಯೊಳು
ಮಚ್ಛಾವತಾರನ ಬಲಗೊಂಬೆ ಕೋಲೆ ೧

ಧರ್ಮ ನಡೆಯಲಾಗಿ ವರ್ಮವ ತಾಳಿದ
ಕರ್ಮಹರ ಶ್ರೀ ಮೂರ್ತಿಯ ಕೋಲೆ
ಕರ್ಮಹರ ಶ್ರೀಮೂರ್ತಿಯ ಧರೆಯ ಪೊತ್ತ
ಕೂರ್ಮಾವತಾರನ ಬಲಗೊಂಬೆ ಕೋಲೆ ೨

ಧರೆಯ ಕದ್ದಸುರನ ಕೋರೆದಾಡಿಂದ ಸೀಳಿ
ಹೋರಿ ಹೊಯ್ದಾಡಿದ ನರಹರಿ ಕೋಲೆ
ಹೋರಿ ಹೊಯ್ದಾಡಿದ ನರಹರಿ ಧರೆಯ ಗೆದ್ದ
ವರಹಾವತಾರನ ಬಲಗೊಂಬೆ ಕೋಲೆ ૩

ತರಳ ಪ್ರಲ್ಹಾದನಿಗಾಗಿ ದುರುಳ ದೈತ್ಯನ ಕೊಂದು
ಕರುಳು ವನಮಾಲೆಯ ಧರಿಸಿದ ಕೋಲೆ
ಕರುಳು ವನಮಾಲೆಯ ಧರಿಸಿದಾ ಹರಿ
ನರಸಿಂಹಾವತಾರನ ಬಲಗೊಂಬೆ ಕೋಲೆ ೪

ನೇಮಿಸಿ ಮೂರು ಪಾದ ಭೂಮಿಯ ಬೇಡಿ
ಹೆಮ್ಮೆಯ ತಾ ಪರಿಹರಿಸಿದ ಕೋಲೆ
ಹೆಮ್ಮೆಯ ತಾ ಪರಿಹರಿಸಿದ ಬ್ರಾಹ್ಮಣನಾಗಿ
ವಾಮನಾವತಾರನ ಬಲಗೊಂಗೆ ಕೋಲೆ ೫

ಆಜ್ಞೆಯ ಮೀರದೆ ಅಗ್ರಜಳ ಶಿರ
ಶೀಘ್ರದಿಂದಲಿ ಇಳುಹಿದ ಕೋಲೆ
ಶೀಘ್ರದಿಂದಲೆ ಇಳುಹಿದ ಶಿರವನು
ಭಾರ್ಗವ ರಾಮನ ಬಲಗೊಂಬೆ ಕೋಲೆ ೬

ಕಾಮದಿ ಸೀತೆಯನೊಯ್ದ ತಾಮಸದವನ ಕೊಂದು
ನೇಮ ಸ್ಥಾಪಿಸಿದ ಇಳೆಯೊಳು ಕೋಲೆ
ನೇಮ ಸ್ಥಾಪಿಸಿದ ಇಳೆಯೊಳು
ರಾಮಾವತಾರನ ಬಲಗೊಂಬೆ ಕೋಲೆ ೭

ದುಷ್ಟ ದೈತ್ಯರನೆಲ್ಲ ಕುಟ್ಟಿ ಮಡುಹಿದ
ನೆಟ್ಟನೆ ಗಿರಿಯನೆತ್ತಿದ ಕೋಲೆ
ನೆಟ್ಟನೆ ಗಿರಿಯನೆತ್ತಿದ ಬೊಟ್ಟಿಲೆ
ಕೃಷ್ಣಾವತಾರನ ಬಲಗೊಂಬೆ ಕೋಲೆ ೮

ಕದ್ದು ತ್ರಿಪುರವ ಪೊಕ್ಕು ಇದ್ದ ಸತಿಯರ ವ್ರತ
ಸಿದ್ಧಿಯ ತಾನು ಅಳಿದನು ಕೋಲೆ
ಸಿದ್ಧಿಯ ತಾನು ಅಳಿದನು ಬುದ್ಧಿಯಲಿ
ಭೌದ್ಧಾವತಾರನ ಬಲಗೊಂಬೆ ಕೋಲೆ ೯

ಮಲ್ಲ ಮಾನ್ಯರನೆಲ್ಲ ಹಲ್ಲು ಮುರಿಯಲಾಗಿ
ನಲ್ಲ ತೇಜಿಯನೇರಿದ ಕೋಲೆ
ನಲ್ಲ ತೇಜಿಯ ನೇರಿದ ಬಲ್ಲಿಹನಾಗಿ
ಕಲ್ಕ್ಯಾವತಾರನ ಬಲಗೊಂಬೆ ಕೋಲೆ ೧೦

ವಸ್ತು ಪರಾತ್ಪರ ವಿಸ್ತಾರ ತೋರಲಾಗಿ
ಹತ್ತಾವತಾರ ಧರಿಸಿದ ಕೋಲೆ
ಹತ್ತಾವತಾರ ಧರಿಸಿದ ಮಹಿಪತಿಯ
ಅಂತರಾತ್ಮನ ಬಲಗೊಂಬೆ ಕೋಲೆ ೧೧

## ೧೯೯

ಮಂಗಳ ಮೂರುತಿ ಅದಿಕೇಶವ ನಾರಾಯಣ
ಮಾಧವ ಗೋವಿಂದ ವಿಷ್ಣು ಮಧುಸೂದನ ಧ್ರುವ

ನೇಮದಿಂದುದಿಸಿದೆ ವಾಮನ ತ್ರಿವಿಕ್ರಮ
ಸಾಮಗಾಯನ ಪ್ರಿಯಾನಂದೋಬ್ರಹ್ಮ
ದಾಮೋದರ ಸಂಕರುಷಣಾದೆ ಪುರುಷೋತ್ತಮ
ಸ್ವಾಮಿ ನೀನೆ ವಾಸುದೇವ ನಮ್ಮ ೧

ಸದ್ಗುಣ ಬೀರುವ ಹೃಷೀಕೇಶ ಶ್ರೀಧರ ಪೂರ್ಣ
ಪ್ರದ್ಯುಮ್ನ ಅನಿರುದ್ಧಾನಂದ ಗುಣ

ಪದ್ಮನಾಭನು ನೀನೆ ಅಚ್ಯುತ ಜನಾರ್ದನ
ಸಿದ್ಧ ಸಿದ್ಧಕ ಪ್ರಿಯಾನಂದ ಘನ ೨

ಅಧೋಕ್ಷಜ ನೃಸಿಂಹ ಉಪೇಂದ್ರ ಶ್ರೀಹರಿ ಕೃಷ್ಣ
ಹೃದಯದಲಿ ಕೊಂಡಾಡುದನುದಿನ
ಸದಾ ಪ್ರಸನ್ನ ಮಹಿಪತಿಗೀ ನಾಮ ಗುಣ
ಸದೋದಿತಾದನು ಭಾನುಕೋಟಿಪೂರ್ಣ ೩

## ೨೦೦

ಮಂಗಳ ಮಂಗಳ ಜಯಮಂಗಳ ಶುಭಮಂಗಳ
ಸುರಗುರು ಮೂರುತಿಗೆ ಸಹಸ್ರ ಮಂಗಳ ಶ್ರೀನಿಧಿ ಶ್ರೀಪತಿಗೆ ಧ್ರುವ

ವಿದುರವಂದಿತ ವಿಶ್ವಪಾಲಗ ಮಂಗಳ
ಬುಧಜನ ಸಹಕಾರಗ ಮಂಗಳ
ಯದುಕುಲೋತ್ತಮ ಶ್ರೀಧರಗ ಮಂಗಳ
ಮದನಮೋಹನ ಮೂರುತಿಗೆ ಮಂಗಳ ೧

ಕಸ್ತುರಿಯ ತಿಲಕ ಕಾರುಣ್ಯಗ ಮಂಗಳ
ಮಸ್ತಕಲಿಹ್ಯ ಮಣಿಮುಗಟಗ ಮಂಗಳ
ಕೌಸ್ತುಭಧರ ಭೂಷಣಗ ಮಂಗಳ
ಹಸ್ತಿಗೊಲಿದು ಸುವಸ್ತುಗ ಮಂಗಳ ೨

ಭಾಸ್ಕರಕೋಟಿ ಪ್ರಕಾಶಗ ಮಂಗಳ
ಭಾಸುವ ಭಾವಭೋಕ್ತಗ ಮಂಗಳ
ವಾಸವಾಗಿ ಹ್ಯ ಸದೋದಿತಗ ಮಂಗಳ
ದಾಸ ಮಹಿಪತಿ ಸ್ವಾಮಿಗ ಮಂಗಳ ೩

## ಲೋಕನೀತಿ

### ೨೦೧

ಅರ್ತರಿಯದ್ಹಾಂಗೆ ಇರಬೇಕು ಮರ್ತ್ಯದೊಳಗೆ ಧ್ರುವ

ಬಲ್ಲೆನೆಂಬ ಬಡಿವಾರ ಸಲ್ಲದು ತಾ ಅಹಂಕಾರ
ಬಲುಸೂಕ್ಷ್ಮ ಗುರುಪಾರಾವಾರ ತಿಳಿಯಲು ವಿಚಾರ ೧

ತರ್ಕತೆ ದೋರಲು ಖೂನ ಅರ್ತ್ಯುಳ್ಳವರ ನಿಧಾನ
ಸರ್ಕನೆ ತಿಳಿವದು ಖೂನ ತಾರ್ಕಣ್ಯದ ಧನ ೨

ಹಲವು ಮಾತಾಡಿದಂತೆ ಬಲುವಾ ಭಾವದೋರಿತು
ನೆಲೆಯು ಗೊಳಬೇಕು ತಿಳುವಂತೆ ಎಲಿಮರಿಕಾಯಂತೆ ೩

ಬಲ್ಲತನಕೆ ದೂರ ಸುಲಭ ಸುಜ್ಞಾನ ಸಾರಾ
ಅಲ್ಲಹುದೇನು ತಾ ವಿಚಾರ ಬಲು ತುಂಬ್ಯಾದ ಸ್ಥಿರ ೪

ಅರ್ತು ಅರಿಯದ್ಹಾಂಗಿದ್ದು ಗುರ್ತುಹೇಳದೆ ನೀ ಸದ್ದು
ಬೆರ್ತು ಮಹಿಪತಿ ನಿಜಹೊಂದು ಅರ್ಥಿ ನಿನಗೊಂದು ೫

### ೨೦೨

ಅದಿತತ್ವದ ಸಾರ ತಿಳಿಯದೆ ಭೇದಾಭೇದ ವಿದ್ಯಾತಕೆ
ವೇದ ಉಪನಿಷದ್ವಾಕ್ಯವರಿಯದೆ ಗಾಥ
ಸೂಸುವದ್ಯಾತಕೆ ಹರಿಭಕುತಿಗೆ ಧ್ರುವ

ಮೂಲದಲಿ ಮನಮ್ಯಲ ತೊಳಿಯದೆ
ಬಲಮುಣುಗುವದಿದ್ಯಾಕೆ
ಬಲುವ ಭಾವದ ಕೀಲ ತಿಳಿಯದೆ ಮಾಲಿಜಪಕ್ಕೆಯಲ್ಯಾತಕೆ

ನೆಲೆಯುಗೊಳ್ಳದೆ ಮೂಲ ಮೂರ್ತಿಯ ಮ್ಯಾಲೆ
ತಲೆ ಮುಸಕ್ಯಾತಕೆ
ಹಲವು ಜನ್ಮ ಹೊಲಿಯು ತೊಳಿಯದೆ ಶೀಲಸ್ವಯಂಪಾಕ್ಯಾತಕೆ ೧

ಹರಿಯ ಚರಣಾಂಬುಜನವರಿಯದೆ ಬರಿಯ ಮಾತಿನ್ಯಾತಕೆ
ಗುರುವಿನಂಘ್ರಿಯ ಗುರುತವಿಲ್ಲದೆ ಶರಣಸಾವಿರವ್ಯಾತಕೆ
ತುರಿಯಾವಸ್ಥೆಯೊಳರಿತು ಕೂಡದೆ ತೋರಿಕೆಯ ಡಂಭವ್ಯಾತಕೆ
ತರಣೋಪಾಯದ ಸ್ಮರಣಿ ಇಲ್ಲದೆ ತರ್ಕಭೇದಗಳ್ಯಾತಕೆ ೨

ಅಂತರಾತ್ಮದ ತಂತುವಿಡಿಯದೆ ಗ್ರಂಥಪಠಣಗಳ್ಯಾತಕೆ
ಕಂತುಪಿತನಾರ್ಚನೆಯನರಿಯದೆ ತಂತ್ರ ಮಂತ್ರಗಳ್ಯಾತಕೆ
ಸಂತತ ಚಿಂತಾಯಕನಾ ನೆನೆಯದೆ ಮಂತ್ರಮಾಲೆಗಳ್ಯಾತಕೆ
ಪಂಥವರಿಯದೆ ಪರಮಯೋಗದಾನಂತ ವ್ರತವಿದುವ್ಯಾತಕೆ ೩

ಸೋಹ್ಯವರಿಯದೆ ಶ್ರೀಹರಿಯ ನಿಜಬಾಹ್ಯರಂಜನೆವ್ಯಾತಕೆ
ಗುಹ್ಯಮಹಾಮಹಿಮೆಯು ತಿಳಿಯದೆ ದೇಹ ಅಭಿಮಾನ್ಯಾತಕೆ
ಸಾಹ್ಯವಿಲ್ಲದೆ ಶ್ರೀಹರಿಯ ದೇಹದಂಡದ್ಯಾತಕೆ
ಮಹಾವಾಕ್ಯದಿತ್ಯರ್ಥವರಿಯದೆ ಸಾಯಸಬರುವದ್ಯಾತಕೆ ೪

ಭಾಗ್ಯಭಕುತಿ ವೈರಾಗ್ಯವಿದು ನಿಜಯೋಗಾನಂದದ ಭೂಷಣ
ಶ್ಲಾಘ್ಯವಿದು ತಾ ಇಹಪರದೊಳು ಸುಗಮ ಸುಪಥಸಾಧನ
ಭೋಗ್ಯಭೋಗದ ಸಾರ ಸುಖವಿದು ಯೋಗಿ ಮಾನಸಜೀವನ
ಬಗೆಬಗೆಯಲನುಭವಿಸಿ ಮಹಿಪತಿಯೋಗ್ಯನಾಗೋ ಸನಾತನ ೫

## ೨೦೩

ಅಧ್ಯಾತ್ಮದ ವಿದ್ಯ ಅಧ್ಯಕ್ಷಾಗಬೇಕು ಸಾಧ್ಯ ಧ್ರುವ

ಕನ್ನಡಿಯೊಳಗಿನ ತಾ ಗಂಟು ಸನ್ನಿಧವಾಗುವದೆ ಕೈಗೊಟ್ಟು
ಬಣ್ಣಿಸಬ್ಯಾಡಿ ನಿಜಬಿಟ್ಟು ಕಣ್ಣಾರೆ ಕೆಟ್ಟು ೧

ಕನಸಿಲೆ ತಾ ಕಂಡಭಾಗ್ಯ ಅನುಭವಕೆ ಬಹುದೆ ಶ್ಲಾಘ್ಯ
ನೆನಸಿಕೊಂಡವ ಅಯೋಗ್ಯಜನದೊಳು ಅಶ್ಲಾಘ್ಯ ೨

ಹೊತ್ತಿಗೆಲ್ಲೇಳುವ ಪುರಾಣ ಯಾತಕೆ ಬಾಹುದು ನಿರ್ವಾಣ
ಚಿತ್ತಗಾಗುದು ಸಮಾಧಾನ ಹತ್ತಿಲಿ ನಿಜಗಾಣಾ ೩

ಮೃಗಜಲ ಭಾಸುವ ಪ್ರವಾಹ ಯುಗತಿಗೆ
ಬಾಹುದೆ ನಿರ್ವಾಹ
ಹೊಗುವರೆ ಹೊಕ್ಕರೆ ಸಹಾ ಹೋಗದು ತೃಷದಾಹ ೪

ಸಾಧನ ಮಾಡಿಕೊ ಸಾಧ್ಯಸದ್ಗುರು ಕೃಪೆಯಲಿ ನಿಜ ಅಭೇದ್ಯ
ಸಾಧಿಸೊ ಮಹಿಪತಿ ಸಧ್ಯ ಆಧ್ಯಾತ್ಮಸುವಿದ್ಯ ೫

## ೨೦೪

ಇಟ್ಹಾಂಗಿರಬೇಕು ಮಾಂ
ಇಟ್ಹಾಂಗಿರಬೇಕು ಸೃಷ್ಟೀಶ ನಮ್ಮ ಧ್ರುವ

ಸಕಳವೆಲ್ಲ ಹರಿ ಸೂತ್ರವು ಇರಲಿಕ್ಕೆ ।
ವಿಕಳಿತಗೊಂಬುವದ್ಯಾಕೆ ಮಾಂ ।
ಅಖಿಳ ಭುವನಕೆಲ್ಲ ಸಾಕಿ ಸ – ।
ಹಕಾರ ನೊಬ್ಬ ಶ್ರೀಪತಿಯ ಮಾಂ । ೧

ಯಂತ್ರಜೀವ ತಂತ್ರ ಶಿವ ಇರಲಿಕ್ಕೆ ಸ್ವ ।
ತಂತ್ರವೆ ನಾನೆಂಬುದ್ಯಾತಕೆ ಮಾಂ ।
ಚಿತ್ರ ವಿಚಿತ್ರವು ದೋರುವ ಸೂತ್ರವು ।
ಕರ್ತು ಸದ್ಗುರು ಸುತಂತ್ರವು ಮಾಂ ೨

ಅಂತ್ರ ಬಾಹ್ಯ ವ್ಯಾಪಕನಾಗಿರಲಿಕ್ಕೆ ।
ತಂತ್ರ ಮಂತ್ರಗಳ್ಯಾತಕೆ ಮಾಂ ।
ಜಂತ್ರ ಮಾಡಿ ಜನ್ಮ ಮರಣದ ತಿರಿಹುವಾ ।
ಗಂತ್ರವು ಎಂದಿಗೆ ತಿಳಿಯದು ಮಾಂ ೩

ಇಟ್ಟಾಂಗ ಇರಬೇಕು ಕೊಟ್ಟಾಂಗ ಕೊಂಡಿನ್ನು ।
ತುಟ್ಟಿಲೆ ಮಿಸುಕದೆ ಗುಟ್ಟಿಲೆ ಮಾಂ ।
ಹೊಟ್ಟಿಗಾಗಿ ಅಷ್ಟು ಸಾಯಾಸ ।
ಬಟ್ಟರೆ ಸಾರುಸದೇ ಅಟ್ಟಿಸುವದು ಮಾಂ ೪

ಇಟ್ಟಾಂಗ ಇರೋ ಮಹಿಪತಿ ಸೃಷ್ಟಿಯೊಳಿನ್ನು ।
ಘಟ್ಟಿಗೊಂಡ ಗುರುಪಾದವು ಮಾಂ ।
ಮುಟ್ಟಿ ಮುದ್ರಿಸಿ ಕೃಪಾದೃಷ್ಟಿಲೆ ಹೊರೆವನು ।
ಕೊಟ್ಟು ನಿನಗೆ ಸ್ವಾನುಭವವು ಮಾಂ ೫

## ೨೦೫

ಇದ್ದರಿರಬೇಕು ಸಂಸಾರಸುಖದಲ್ಹೀಗೆ
ಪದ್ಮಪತ್ರವು ಜಲದೊಳಗಿದ್ದಾಂಗೆ ಧ್ರುವ

ನಡಿನಡಿಯಬೇಕ್ಹೀಂಗೆ ತಡಿಯೊಳರಿಬಿಡದ್ಹಾಂಗೆ
ನುಡಿನುಡಿಯಬೇಕು ಹರಿನುಡಿಸಿದ್ದಾಂಗೆ
ಪಡೆದರಿದೇ ಪಡಿಯಬೇಕು ಹರಿ ಒಡಲ ಹುಗುವ್ಹಾಂಗೆ
ಅಡಿಗಡಿಗೆ ಹರಿಕೂಡಿ ಬಿಡದಗ್ಲದ್ಹಾಂಗೆ ೧

ಇಡಗಿ ಇಡಬೇಕ್ಹಿಂಗೆ ಇಡಗರಿಗುಡಿಸಿದ್ದಾಂಗೆ
ತುಡಗಿ ತುಡಬೇಕ್ಹೀಂಗೆ ತುಡಮಾಡಿಸದ್ಹಾಂಗೆ
ಉಡಗಿ ಉಡಬೇಕ್ಹೀಂಗೆ ಉಡಿಗರಿಗುಡಿಸಿದ್ದಾಂಗೆ
ಮುಡಗಿ ಮುಡಿಬೇಕ್ಹಾಂಗ್ಹರಿಗೆ ಮುಡಿಸಿದ್ದಾಂಗೆ ೨

ಉಂಡರುಣಬೇಕ್ಹೀಂಗೆ ಉಂಡದರಿಗುಣಸಿದ್ದಾಂಗೆ
ಕೊಂಡುದಕೋ ಹರಿಗೆ ಕೊಡಿಸಿದ್ದಾಂಗೆ
ಮಂಡಣಿಯ ಮಾಡ್ಹೀಂಗೆ ಹರಿಗೆ ಮಂಡಿಸಿದ್ದಾಂಗೆ
ಕೊಂಡು ಕೊಂಬುದು ಹರಿಕಂಡು ಒಲುವ್ಹಾಂಗೆ ೩

ಮಲಗಿ ಏಳುವದ್ಹೀಂಗೆ ಮಲಗರಿಗೇಳಿಸಿದ್ಹಾಂಗೆ
ತಿಳವು ತಿಳವದು ಹರಿ ತಿಳಿಸಿದ್ಹಾಂಗೆ
ಸುಳವು ಸುಳವರು ಹರಿಸುಳಸ್ಯಾಡಿದ್ಹಾಂಗೆ
ಒಲವು ಮಾಡುವದ್ಹೀಂಗೆ ಹರಿಯ ಒಲಿವಾದ್ಹಾಂಗೆ ೪

ರತಿಪಿಡಿದು ಹೀಂಗೆ ಹರಿಗತಿಯಾಗುವ್ಹಾಂಗೆ
ಅತಿಹರುಷ ಬಡು ಹರಿನೋಡುವ್ಹಾಂಗೆ
ಸಥಿಯ ಪಡೆದವುದು ಹೀಂಗರಿಯು ಸಥಿನಡಿಸಿದ್ಹಾಂಗೆ
ಸ್ತುತಿಮಾಡುವ ಮಹಿಪತಿ ಪ್ರತಿಗಾಣದ್ಹಾಂಗೆ ೫

## ೨೦೬

ಇದೇವೆ ನಿಜನೋಡಿ ನಮ್ಮ ನೇಮನಿತ್ಯ
ಸಾಧು ಜನರಿಗೆ ನಡೆವದು ಸತ್ಯ ಧ್ರುವ

ನಿತ್ಯಭಾಗೀರಥಿ ಪ್ರಾತ: ಸ್ನಾನ ವಸ್ತು
ಅನುಸಂಧಾನ ತ್ರಿಕಾಲ ಸಂಧ್ಯಾನ
ಪ್ರತ್ಯಕ್ಷವಾದುದೆ ತನ್ನ ಧ್ಯಾನಜ್ಞಾನ ನಿತ್ಯ
ನಿತ್ಯದಿತ್ಯರ್ಥದ ನಿಜಸುಷ್ಠಾನ ೧

ಭಾವ ಬಲುವದೆ ದೇವತಾರ್ಚನೆಯು
ದೇವದೇವೇಶನಾರಾಧನೆಯು
ದಿವಾರಾತ್ರಿ ಹರಿಯ ಸ್ಮರಣೆ ಪ್ರಾರ್ಥನೆಯು
ಭುವನತ್ರಯದಲಿದೆ ಸರ್ವಸಾಧನೆಯು ೨

ವರ್ಮದೋರಿದ ಗುರು ಎನ್ನೊಳಗೆ
ಕರ್ಮಹರಿಸಿದ ನಿಮಿಷದೊಳಗೆ
ಧರ್ಮಜಾಗಿಸಿಕೊಟ್ಟ ಜಗದೊಳಗೆ
ಬ್ರಹ್ಮಾನಂದವಾಯಿತು ಮಹಿಪತಿಗೆ ೩

## ೨೦೭

ಇದೇ ಸುಪಥನೋಡಿ ಸ್ವಹಿತ ಸಾಧು ಜನರ ಸುಸನ್ಮತ
ವೇದಾಂತದ ಸುಸಾರಬೋಧವ್ಹೇಳಿದ ವಸ್ತು ಭಗವದ್ಗೀತಾ
ತುದಿಮೊದಲಿಲ್ಲದ ಸದಮಲಬ್ರಹ್ಮವು
ಸಂದಿಸೀಹ್ಯದು ಸದೋದಿತ
ಭೇದಿಸಿ ನೋಡಲು ತನ್ನೊಳಗ ತಾಂ ದೋರುತಿದೆ ಸಿದ್ಧಾಂತ ೧

ಮಮೈವಾಂಶೋ ಜೀವಲೋಕೇ ಜೀವಭೂತ ಸನಾತನ ಃ
ಸ್ವಾಮಿ ಹೇಳಿದ್ದ ತಿಳಿಯಲಿಕ್ಕೆ ಆತ್ಮಾನುಸಂಧಾನದ ಖೂನ
ನೇಮದಿಂದಲಿ ಹೇಳಿದ ಮಾತಿಗೆ ಮುಟ್ಟಿದನೊಬ್ಬರ್ಜುನ
ನಾಮರೂಪವಿಲ್ಲದ ವಸ್ತುವೆ ತಾಂ
ತುಂಬೇದ ವಿಶ್ವದಿ ಪರಿಪೂರ್ಣ ೨

ಏಕಾಂಶೇನ ಸ್ಥಿತೋ ಜಗತ ವೆಂಬ ವಾಕ್ಯದನುಭವ
ಏಕೋಮಯವಾಗಿಹ್ಯ ಘನಸುಖವಿದು
ಸೇವಿಸಿದೊಬ್ಬ ಶುಕದೇವ
ನಾಲ್ಕುಶೂನ್ಯವು ಮೆಟ್ಟಿನೋಡಲು ಭಾಸುತಿದೆ ಸುಮನದೈವ
ಅಖಿಳ ಭುವನಕೇಕಾಕ್ಷರ ಬ್ರಹ್ಮವು ತಾನೆ
ತಾನಾಗೀ ಹ್ಯದು ಜೀವ ೩

ಯೋ ಮಾಮೇವಂ ಅಸಂಮೂಢೋ
ಜಾನಾತಿ ಪುರುಷೋತ್ತಮಂ
ಸಮರಸವಾಗಿ ನೋಡದವನೆ ತಾಂ
ಮನುಷ್ಯರೊಳಗಧಮಾಧಮಾ
ಕ್ರಮತಿಳಿದವನೆ ಪರಮಯೋಗಿ ಆತನೇ ಉತ್ತಮೋತ್ತಮಾ
ಶ್ರಮಬಡಿಸದ ಸತ್ಯಸುಖ ಸಾಧನವಿದು
ತಾಂ ಕೇಳಿ ನಿಜಾಧ್ಯಾತ್ಮಾ ೪

' ಹರಿ ಃ ಓಂ ತತ್ಸದಿತಿ ' ವೆಂಬ ನಿಜ ತಿಳಯಬೇಕಿದೆ ಮುಖ್ಯ
ಅರಿತಮ್ಯಾಲ್ಯಾತಕ ತಾಂ ತಿಳವದು
ಏಳುನೂರು ಶ್ಲೋಕದವಾಕ್ಯ
ತ್ವರ ತಾಂ ತಿಳಿಯದು ಒಂದೇ ಮಾತಿನ ಬ್ರಹ್ಮಾದಿಕರಿಗಾಟಕ್ಯ
ಸೆರಗುಸಿಲುಕಿ ತನ್ನೊಳು ಗುರುದಯದಲಿ
ತರಳಮಹಿಪತಿಗಿದೆ ಸೌಖ್ಯ ೫

## ೨೦೮

ಎಚ್ಚತ್ತಿರಬೇಕು ಮಾ ಧ್ರುವ
ಎಚ್ಚತ್ತಿರಬೇಕು ನೆಚ್ಚಿ ನಿಜಘನ ೧
ರಚ್ಚಿಗೆ ಬಾರದೆ ಬಚ್ಚಿಟ್ಟು ನಿಜಘನ ೨
ಕಚ್ಚಿ ಕೈ ಬಾಯಿಲೆ ಹುಚ್ಚಿಟ್ಟು ಹೋಗದೆ ೩
ಕಚ್ಚಿಕಿಡದೆ ನೀನು ಕಾಂಚನದಾಶೆಗೆ ೪
ನೆಚ್ಚಿಕೊಂಡಿರಬ್ಯಾಡಿ ವ್ಯಚ್ಚಾಗು ಬದುಕಿಗೆ ೫
ತುಚ್ಛರ ಮಾತಿಗೆ ನೆಚ್ಚಿ ನಡಿಯದೆ ೬
ಮತ್ಸರಕೆ ನೀವು ಹುಚ್ಚಾಗಿ ಹೋಗದೆ ೭
ಅಚ್ಚಳಿಯದೆ ನೀವು ಅಚ್ಯುತ ಭಕ್ತಿಗೆ ೮
ಸಚ್ಚಿದಾನಂದನ ನಿಶ್ಚಲರಿಯಲಿಕ್ಕೆ ೯
ಎಚ್ಚರಿಸಿದ ಗುರುಪಾದ ನಿಶ್ಚೈಸಲು ೧೦
ಸೂಚಿಸಿ ಹೇಳಿದ ಗುರುದಾಸಮಹಿಪತಿ ೧೧

## ೨೦೯

ಎಚ್ಚರಿಲ್ಲೀ ಮನಕೆ ಯೋಚಿಸಿ ನೋಡದು ಚಿದ್ಘನಕೆ ಧ್ರುವ

ನುಡಿದವು ಪರಮಾರ್ಥ ನಡೆಯೊಳಗಿಲ್ಲದೆ ನುಡಿದರ್ಥ
ಹಿಡಿದು ವಿಷಯದ ಸ್ವಾರ್ಥಬಡುವುದು ಶ್ರಮತಾನೆ ವ್ಯರ್ಥ ೧

ಓದುದು ವೇದಾಂತ ಭೇದಿಸಿ ತಿಳಿಯದೆ ಅದರಂತ
ವಾದ ಮಾಡುದು ಭ್ರಾಂತ ಸಾಧಿಸಿ ನೋಡದು ತನ್ನೊಳು ತಾ ೨

ಜನಕೇಳುದು ಬುದ್ಧಿ ತನಗ ಮಾಡಿಕೊಳ್ಳದು ಸಿದ್ಧಿ
ಕಾಣದ್ಹೇಳುದು ಸುದ್ಧಿ ಜ್ಞಾನಕ ಬಾರದು ತಾ ತಿದ್ದಿ ೩

ತೊಟ್ಟು ಉತ್ತಮ ವೇಷ ಮುಟ್ಟಿಗಾಣದೆ ಸ್ವಪ್ರಕಾಶ
ತುಟ್ಟಿಲಿ ಜಗದೀಶ ಗುಟ್ಟಿಲಿ ಬಲಿವದು ಧನದಾಶೆ ೪

ಎಚ್ಚರಿಸಿತು ಖೂನ ನಿಶ್ಚಲ ಮಹಿಪತಿಗೆ ಗುರುಜ್ಞಾನ
ಹುಚ್ಚುಗೊಂಡಿತು ಮನ ನೆಚ್ಚಿ ನಿಜಾನಂದದ ಘನ ೫

## ೨೧೦

ಎದ್ದಿರ್‍ಯಾ ನೀವಿನ್ನೆದ್ದಿರ್‍ಯಾ
ಎದ್ದೆವು ನಾವಿನ್ನು ಸದ್ಗುರು ಕೃಪೆಯಿಂದ ಧ್ರುವ

ಶುದ್ಧಿ ಮೆರೆದು ಭವ ನಿದ್ರಿಯಗಳೆದು ೧

ಕಾಯ ಮಂದಿರದೊಳು । ಮಾಯಾ ಮುಸುಕು ತೆಗೆದು ೨

ಚೆನ್ನಾಗಿ ಮಲಗಿದ್ದ । ಜನ್ಮ ಹಾಸಿಗೆ ಬಿಟ್ಟು ೩

ತನ್ನ ತಾ ತಿಳಿವ್ಹಾಂಗೆ ಕಣ್ದೆರೆದಿನ್ನು ೪

ಎದ್ದಿದ್ದರೆ ನೀವಿನ್ನು ಶುದ್ಧ ಬದ್ಧರಾಗಿ ೫

ಮನದಲ್ಲಿ ಇನಕೋಟಿ ತೇಜನ ಕಾಣುಹಾಂಗೆ ೬

ದೀನ ಮಹಿಪತಿ ಸ್ವಾಮಿ ಮನೋಹರ ಮಾಡೊಹಾಂಗೆ ೭

## ೨೧೧

ಏನು ಗಳಿಸಿದ್ಯೊ ಪ್ರಾಣಿ
ಜ್ಞಾನಕ ಮಾಡಿ ನೀ ಹಾನಿ ಧ್ರುವ

ಶಬ್ಧಜ್ಞಾನದ ಅಂಗಡಿನೀ ಹಾಕಿ
ಲುಬ್ದಿಸಿದೊ ಬಲು ಪಾಕಿ
ಲಬ್ದಾಲಬ್ಧಿಯು ತಿಳಿಯದೆ ಡೊಂಕಿ
ಸ್ತಬ್ಧನಾದ್ಯೊ ವಿಶ ಸೋಂಕಿ ೧

ವಿದ್ಯಾ ವ್ಯುತ್ಪತ್ತಿ ತೋರಿ ನೀ ಬಹಳ
ಸದ್ಯಮಾಡಿದ್ಯೊ ತಾಳ ಮೇಳ
ಸಿದ್ಧಾಂತನುಭವ ನೀ ಮಾಡಿ ಹಾಳ
ಬಿದ್ಯೊ ಬಲ್ಲತನದ ಕೋಳ ೨

ಗಳಿಸುವದೇನೆಂದರಿಯದೇ ಖೂನ
ಬಾಳಿ ಬದುಕಿ ಪಡದೇನ
ಬೆಳಗು ಬೀರುತಿರೆ ಮಹಿಪತಿ ಗುರುಜ್ಞಾನ
ತಿಳಕೊಬಾರದೆ ನಿಜಖೂನ ೩

## ೨೧೨

ಏನು ಸಾಧಿಸುವದೇನರಿದು
ಜ್ಞಾನಗಮ್ಯ ಗುರುಮಾರ್ಗದೊರೆಯಲರಿಯದು ಧ್ರುವ

ನೀತಿಶಾಸ್ತ್ರವನೋದಿ ಪಂಡಿತನಾಗಲಿಬಹುದು
ಶ್ರುತಿ ಸ್ಮೃತಿಗಳ ತಿಳಿದು ತರ್ಕಸ್ಯಾಡಲಿಬಹುದು
ಅತಿ ಬಲ್ಲತನದಿ ಯತಿಯನಿಸಿಕೊಳ್ಳಲಿಬಹುದು
ಕ್ಷಿತಿಯೊಳು ಮೆರೆಯಲಿಬಹುದು
ಸುತತ್ವ ಜ್ಞಾನಖೂನ ದೊರೆಯಲರಿಯದು ೧

ಗೃಹತ್ಯಾಗಮಾಡಿ ಸಂನ್ಯಾಸಿ ಅಗಲಿಬಹುದು
ದೇಹ ದಂಡಿಸಿ ವನವಾಸಿಯಾಗಲಿಬಹುದು
ಗುಹ್ಯಗೊಪೆಯಲಿ ಸೇರಿ ತಪಸಿಯೆನಿಸಲಿಬಹುದು
ಬಾಹ್ಯನಿಷ್ಠೆಯದೋರಬಹುದು
ಸೋಹ್ಯ ಸದ್ಗುರುಮಾರ್ಗ ದೊರೆಯಲರಿಯದು ೨

ಹಲವು ಕುಟಿಲದ ವಿದ್ಯವನು ಸಾಧಿಸಲಿಬಹುದು
ಜಲದೊಳಗೆ ಮುಳಗಿ ಮಂತ್ರವನು ಜಪಿಸಲಿಬಹುದು
ಸೀಲಿ ಸಾಲ್ವಳಿಯ ಸುಶಕುನ ಪೇಳಲಿಬಹುದು
ಮ್ಯಾಲೆ ಜನರಂಜಿಸಲಿಬಹುದು
ಮೂಲ ಮುಕ್ತಿ ಕೀಲ ತಿಳಿಯಲರಿಯದು ೩

ಪೃಥ್ವಿಯನೆ ತಿರುಗಿ ಬಹುಭಾಷೆಯಾಡಲಿಬಹುದು
ಮತಿವಂತನಾಗಿ ಕವಿತ್ವಮಾಡಲಿಬಹುದು
ಗೀತರಾಗವು ಜಂತ್ರದೊಳು ನುಡಿಸಲಿಬಹುದು
ಚದುರಂಗ ಪಗಡ್ಯಾಡಿ ಗೆಲಬಹುದು
ಮತ್ತ ಮನ ಬೆರೆವ ಘನಸುಖವು ದೊರೆಯಲರಿಯದು ೪

ಶೂರತನದಲಿ ಪರಾಕ್ರಮ ಹಿಡಿಯಲಿಬಹುದು
ಧೀರಗುಣದಲಿ ಮಹಾಧೀರನೆನಿಸಲಿಬಹುದು
ನೂರ್ಬಲದ ಪೌರುಷಲಿ ರಾಜ್ಯನಾಳಲಿಬಹುದು
ಸಿರಿಸೌಖ್ಯದೊಳಿರಲಿಬಹುದು
ಸಾರ ಸುಜ್ಞಾನಸುಖ ದೊರೆಯಲರಿಯದು ೫

ಪರ್ವತಾಗ್ರದಲೇರಿ ಧರೆಗೆರಗಲಿಬಹುದು
ಹರಿವ ನದಿಯನೆ ಹಾರಿ ಹೋಗಲಿಬಹುದು
ಮೊರೆವುತಿಹ್ಯ ಸರ್ಪದಾ ವಿಷವು ಧರಿಸಲಿಬಹುದು
ಕ್ರೂರ ಮೃಗದೊಳು ತಿರುಗ್ಯಾಡಬಹುದು
ಪರಮ ಜ್ಞಾನ ವೈರಾಗ್ಯ ಪಥ ದೊರೆಯಲರಿಯದು ೬

ಪೊಡವಿಯೊಳು ಹವಲು ವಿದ್ಯವ ಸಾಧಿಸಲುಬಹುದು
ಬಡದ ಬವಣಿಯ ಬಟ್ಟು ನಾಡ ಶೋಧಿಸಬಹುದು
ಗೂಢ ವಿದ್ಯದ ಮಾತು ಆಡಿ ತೋರಿಸಬಹುದು
ಹಿಡಿದು ಮೌನವ ಕೂಡಬಹುದು
ಮೂಢಮಹಿಪತಿ ಒಡಿಯನ ಕೃಪೆ ಪಡೆವದೆ ದುರ್ಲಭವು ೭

## ೨೧೩

ಏನೆಂದುಸರಲಿ ನಾ ನೆರೆ ಸಂತರಾ ।
ಸ್ವಾನುಭವಗಳನುವಾಗೀ
ಮಾನಿಸಿರೋಳುಸಲೆ ಮಾನಿಸ ಸ್ಥಿತಿಯಲಿ
ತಾನಿಹ ಉನ್ಮನಿಯಾಗಿ ಪ

ಕಾಮವು ಹರಿಪದ ತಾಮರಸವ ನಿ ।
ಷ್ಕಾಮದ ಭಕುತಿಗಳಲ್ಲಿ ।
ಆ ಮಹಾ ಕೋಪವು ಈ ಮನಸಿನ ಗುಣ ।
ನೇಮಿಸಿ ಶೀಕ್ಷಿಸುವಲ್ಲಿ ।
ಆ ಮೋಹ ಲೋಭವು ಯಾಮವಳಿಯದಾ ।

ನಾಮ ಕೀರ್ತನೆಯಲ್ಲಿ ।
ತಾ ಮರೆಯದ ಅತಿ ವ್ಯಾಮೋಹ ತನ್ನಯ ।
ಪ್ರೇಮದ ಕಿಂಕರರಲ್ಲಿ ೧

ಮದವತಿ ಇಂದ್ರಾದಿ ಪದಗಳ ಸಿದ್ಧಿಗೆ ।
ಳಿದಿರಡೆ ಕಣ್ಣೆತ್ತೆ ಲೆಕ್ಕಿಸರು ।
ವದಗಿಹ ಮತ್ಸರ ಕುದಿವಹಂಕಾರದ ।
ಮೊದಲಿಗೆ ತಲೆಯತ್ತಿಸಗುಡರು ।
ಇದರೊಳು ಸುಖದುಃಖ ಉದಿಸಲು ಹರಿಯಾ ।
ಜ್ಞದೆಗತಿಗಡ ಸಮಗಂಡಿಹರು ।
ಉದಕದಲಿ ಕಮಲದ ಎಲೆಯಂದದಿ ।
ಚದುರತೆಯಿಂದಲಿ ವರ್ತಿಪರು ೨

ಜಲದೊಳು ಕಬ್ಬಿಣಸಲೆ ಮುದ್ದಿಯ ನೆರೆ ।
ನಿಲಿಸದೆ ನಿಲ್ಲದೆ ಮುಣಗುವದು ।
ಇಳೆಯೊಳಗದೆ ತಿದ್ದಲು ಪಾತ್ರೆಯಾ ಪರಿ ।
ನಳನಳಿಸುತ ತೇಲುತಲಿಹುದು ।
ಕಳೆವರ ವೃತ್ತಿಯ ಕಳೆ ಸುವೃತ್ತಿಯ ಮಾಡಿ ।
ಬೆಳಗಿನ ಘನದೊಳು ಮನ ಬೆರೆದು ।
ನಲವರು ಮಹಿಪತಿ ವಲುಮೆಯ ಪಡೆಯದ ।
ಹುಲು ಮನುಜರಿಗಿದು ಭೇದಿಸದು ೩

## ೨೧೪

ಒಳ್ಳ್ಯಾವರ ಕೇಳಿ ಉಳುವ ಉಪಾಯದ ಮಾತು ಧ್ರುವ

ಒಳ್ಳ್ಯಾವರಿಹರು ಗುಪ್ತದಲಿ ಉಳ್ಳಷ್ಟಿಹ್ಯ
ನಿಜ ಕಂಡು ಸುಖದಲಿ
ಹೇಳ್ಯಾಡಿಕೊಳ್ಳುದು ಜಗದಲಿ ತಿಳಿದು ಮನದಲಿ ೧

ತಳ್ಳಿಗೆ ತಳ್ಳದೆ ಭವತಳ್ಳಿ ತಿಳಿಯದವನೆ
ಪಾಮರ ಹೊಡಹುಳ್ಳಿ
ಉಳ್ಳವರ ಪಾದಕೆ ಬಲಗೊಳ್ಳಿ ಕಳೆದುಹೋಗುದು ತಳ್ಳಿ ೨

ಸುಲಲಿತವಾಗೇದ ಸುಜ್ಞಾನ ನೆಲೆಯಗೊಂಬುವ
ಮಹಿಪತಿ ಸ್ವಧನ
ಹೊಳೆವುತದೆ ಸದ್ಗುರುಕರುಣ ಬಲಗೊಂಬುದು ಪೂರ್ಣ ೩

## ೨೧೫

ಒಂದು ಪಥವ ಹೊಂದಲರಿಯರೀ ಮನುಜರು
ಇಂದಿರೇಶನ ಪಾದವ ಕಾಣದೆ ಕೆಡುವರು ಧ್ರುವ

ಒಂದರೆ ಘಳಗಿ ನಾನೆವೆ ಮಾಡಿದೆನೆಂಬರು
ಒಂದರೆ ಘಳಗಿ ಪ್ರಾಚೀನವೆಂಬರು
ಒಂದರೆ ಘಳಗಿ ಈಶ್ವರ ಸೂತ್ರವೆಂಬರು
ಒಂದರೆ ಘಳಗಿ ತಾ ಏನೋ ಎಂತೆಂಬರು ೧

ಒಮ್ಮೆ ಜಾಗ್ರತಿಯೊಳಿದೇ ನಿಜವೆಂಬರು
ಒಮ್ಮೆ ಸ್ವಪ್ನದೊಳಿದೇ ಖರೆ ಎಂಬರು
ಒಮ್ಮೆ ಸುಷುಪ್ತಿಯೊಳಿದೇ ಸತ್ಯವೆಂಬರು
ಒಮ್ಮೆ ಇದರ ಶುದ್ಧಿ ತಿಳಿಯದಂತಿಹರು ೨

ಒಂದು ತಿಳಿದರ ಸಕಲವು ಒಂದಾಗಿ ದೋರುವದು
ಒಂದರೊಳಗ ಸಕಳ ದೊರೆಕೊಂಬುದು
ಒಂದಾಗಿ ಸಲಹುವ ಮಹಿಪತಿ ಸ್ವಾಮಿಯ
ತಂದೆ ಸದ್ಗುರು ಭಾಸ್ಕರ ಕೋಟಿ ತೇಜನು ೩

## ೨೧೬

ಒಂದೆ ಸುಪಥವೆ ಲೇಸು ಸದ್ಗುರು ಭಕುತಿಗೆ ಧ್ರುವ

ಪಿಡಿದರೆ ದೃಢ ಗುರುಭಕುತಿ ಸಾಕು
ಷಡದರುಷಣ ಗೂಢವ್ಯಾತಕೆ ಬೇಕು
ನಡಿನುಡಿಯಲಿ ನಿಜ ಭೇದಿಸಬೇಕು
ಪಡಕೊಂಡರೆ ಬಾಹುದು ಘನಥೋಕಾ ೧

ಒಂದರಿಯದೆ ನಿಜದೋರುದು ಖೂನ
ಸಂದಿಸಿ ಬೆರೆವುದು ಮನ ಚಿದ್ಘನ
ತಂದೆ ಸದ್ಗುರು ದಯದನುಸಂಧಾನ
ಎಂದೆಂದಿಗೆ ಅದ ತಾ ನಿಧಾನ ೨

ಒಂದಾಗುದೆ ನಿಜಗುರು ದಯಕರುಣ
ವಂದಿಸಿ ನೋಡಬೇಕಿದೆ ಘನಸ್ಫುರಣ
ಹೊಂದಿ ಬದುಕಿರೊ ಮಹಿಪತಿಗುರುಚರಣ
ಚಂದವಿದೆ ಇಹಪರ ಭೂಷಣ ೩

## ೨೧೭

ಕೇಳಿರೋ ಈ ಮಾತ ಈ ಮಾತ
ತಿಳಿದು ಕೋಳ್ಳಿರೊ ಸ್ವಹಿತ
ಹೇಳುತಿಹ್ಯದು ವೇದಾಂತ ವೇದಾಂತ
ಇಳಿಯೋಳಿದುವೆ ಸಿದ್ಧಾಂತ ಸಿದ್ಧಾಂತ ೧

ಹಿಡಿಯಬ್ಯಾಡಿರೊ ಕಾಮ ಕ್ರೋಧ ಕ್ರೋಧ
ಮಾಡಬ್ಯಾಡಿರೋ ಭೇದ ಭೇದಾ ಭೇದ
ಈ ಡ್ಯಾಡಿರೊ ವಿವೇದ ವಿವೇದ
ಪಡೆದುಕೊಳ್ಳಿರೊ ಗುರು ಬೋಧ ಸುಬೋಧ ೨

ದೋರುತದೆ ತಾ ಸುಪಥ ತಾ ಸುಪಥ
ಸುರ ಜನರ ಸನ್ಮತ ಸನ್ಮತ
ದೋರುತಿಹ್ಯ ಗುರುನಾಥ ಶ್ರೀ ಗುರುನಾಥ
ಪರಮಾನಂದ ಭರಿತ ಭರಿತ ೩

ನೋಡಿರೊ ಈ ಖೂನ ಈ ಖೂನ
ಮಾಡಿ ಸದ್ಗತಿ ಸಾಧನ ಸಾಧನ
ಗೂಢ ಗುಹ್ಯ ನಿಜಧನ ನಿಜಧನ
ದೃಢ ಭಕ್ತರ ಜೀವನ ಜೀವನ ೪

ಈಹ್ಯ ಪರಿಪೂರ್ಣ ಪರಿಪೂರ್ಣ
ಮಹಾಗುರು ಶ್ರೀ ಚರಣ ಶ್ರೀ ಚರಣ
ಸಾಹ್ಯದೋರುವ ಸುಗುಣ ಸುಗುಣ
ಮಹಿಪತಿ ಜೀವ ಪ್ರಾಣ ಸುಪ್ರಾಣ ೫

## ೨೧೮

ಕೇಳು ಕಿವಿಗೊಟ್ಟು ನಿನ್ನ ನಿಜಗುಹ್ಯದ ಸುಮಾತ ।
ಹೇಳುತಿಹ್ಯಾ ನಂದಬೋಧ ತಿಳಿಯಾ ವಿಶ್ವನಾಥ ಧ್ರುವ

ನೋಡಿ ನಿನ್ನ ಗೂಡಿನೊಳು ಮಾಡಿಕೊ ಸ್ವಹಿತ
ಚಾಡುವಿಡಿದು ನಡೆದು ಹೋಗಿ ಕೂಡಿರೊ ಸುಪಥ
ಹಿಡಿಯದೆ ಆಲೇಶದ ಮನೆಯ ನೀ ಪಡಕೊ ಘನ ಅಮೃತ
ಬೇಡಿ ಬಯಸಿದರಾಗದು ವಸ್ತು ಹಿಡಕೊಡುವ ಗುರುನಾಥ ೧

ಖೂನ ಕಂಡು ಗುರುಪಾದದಲಿ ತನುಮನದಲಿ ನೀಜಡಿಯೊ ।
ಮೌನಮುಗ್ಧದಲಿ ನೀನೆಂದು ಅನುಭವದ ನೀಹಿಡಿಯೊ

ನಾನು ನೀನೆಂಬುದು ತಾ ಬಿಟ್ಟರೆ ಸನ್ಮತ ಸುಖನಿಲುಕಡಿಯೊ
ಜ್ಞಾನ ದೈವತೆಯಂಬು ಮಾರ್ಗದಲಿ ಅನುಸರಿಸಿ ನೀ ನಡಿಯೋ ೨

ಒಂದೆ ಮನದಲಿ ಹೊಂದಿ ನಿಜವುಸಂದಿಸಿಕೊಸ್ವಾನಂದ
ಬಂದ ಜನ್ಮವು ಸಾರ್ಥಕ ಮಾಡುದು ಇದು ನಿನಗೆ ಬಲುಚಂದ
ಹಿಂದೆ ಮುಂದೆ ತಾ ತುಂಬ್ಯಾನೆ ಮಹಿಪತಿಸ್ವಾಮಿ ಸಚ್ಚಿದಾನಂದ
ಹೊಂದಿದವರನುಮಾನವ ಬಿಡಿಸಿ ಛೇದಿಸುವ ಭವಬಂಧ ೩

## ೨೧೯

ಕೊಟ್ಟು ಕೊಂಡಾಡ ಬೇಕು ಘಟ್ಟಿಕೊಂಡು ಗುರುಭಕ್ತಿ
ಗುಟ್ಟಿನೊಳು ನೋಡ ಬೇಕು ಇಟ್ಟು ದೋರುತದ ಮುಕ್ತಿ ಧ್ರುವ

ಕೊಟ್ಟು ಗುರುವಿಗೆ ಮನಕೊಳ್ಳಬೇಕು ನಿಜಘನ
ಇಟ್ಟಾದೆ ನಿಜಧನ ಪಡಿಬೇಕು ಸಾಧನ
ಕೊಟ್ಟಾಂಗ ಕೊಂಬು ಖೂನ ಹೇಳಿ ಕೊಡುವ ಗುರು ಜ್ಞಾನ
ಮುಟ್ಟಿ ಭಜಿಸುದು ಪೂರ್ಣ ಸ್ವಾಮಿ ಶ್ರೀನಾಥಾರ್ಪಣ ೧

ಕೊಟ್ಟು ಕೊಂಡು ನೋಡಿ ನೇಮ ಸೃಷ್ಟಿಯೊಳು ಸುಧಾಮ
ಮುಷ್ಟಿ ಅವಲಕ್ಕಿ ಧರ್ಮ ಪಡೆದು ಕೊಂಡ ದಿವ್ಯಗ್ರಾಮ
ಕೊಟ್ಟು ಶ್ಯಾಖದಳವಮ್ಮ ದ್ರೋಪದ್ಯಾದಳು ಸಂಭ್ರಮ
ಕೃಷ್ಣಗಿದೆ ಅತಿ ಪ್ರೇಮ ಶಿಷ್ಟ ಜನರ ಸುಕ್ರಮ ೨

ಮುಕ್ತಿಗಿದೇ ಮೇಲು ಭಕ್ತಿನೋಡಿ ಸಜ್ಜನರ ಯುಕ್ತಿ
ಭೋಕ್ತ ಬಲ್ಲ ಗುರುಮೂರ್ತಿ ಮಾಡಬೇಕು ಭಾವ ಭಕ್ತಿ
ಮುಕ್ತ ಜನರಿಗಿದೇ ಗತಿ ಕೊಟ್ಟು ಕೊಂಡಾಡುವ ಶಕ್ತಿ
ಅರ್ತು ಇದೇ ಮಹಿಪತಿ ಕೊಂಡಾಡೋ ಗುರುಸ್ತುತಿ ೩

## ೨೨೦

ಕಂಡುಕೊಳ್ಳಿರೋ ಸುಖ ಸ್ವಾತ್ಮವ
ಕಂಡುಕೊಳ್ಳಿರೋ ಧ್ರುವ

ಕಣ್ಣಿಟ್ಟರ ತಾಂ ಕಾಣಿಸುತದೆ
ಚೆನ್ನಾಗನುಭವಕಿದಿರಿಡುತದೆ ೧

ಮನವಿಟ್ಟರಲನುಗೂಡುತಲ್ಯದೆ
ನೆನೆದರೆ ನಿಜಘನ ನೀಡುತಲ್ಯದೆ ೨

ಲಯವಿಟ್ಟರ ದಯಬೀರುತಲ್ಯದೆ
ಶ್ರಯ ಸುಖ ಸುರಮಳೆಗರೆಯತಲ್ಯದೆ ೩

ಭಾವಕ ಅತಿಸುಲಭವಾಗ್ಯದೆ
ಆವಾಗ ತಾನೆಲೆ ನಿಭವಾಗ್ಯದೆ ೪

ಮಹಿಪತಿ ಮನೋಹರ ಮಾಡುತಲ್ಯದೆ
ಬಾಹ್ಯಾಂತ್ರವು ತಾನೆವೆ ಆಗ್ಯದೆ ೫

## ೨೨೧

ಕೊಂಡಿರ್ಯಾ ನೀವು ಕೊಂಡಿರ್ಯಾ
ಮಂಡಲದೊಳು ವಸ್ತು ಕೊಂಡಿರ್ಯಾ ಧ್ರುವ

ಕೊಳಬೇಕಾದರ ನೀವು ತಿಳಿದುಕೊಂಡು ಬನ್ನಿ ೧

ತಿಳಿಯದಿದ್ದರೆ ಖೂನ ಕೇಳಿ ಸದ್ಗುರುವಿನ ೨

ಬೆಲೆಯು ಹೇಳುವದಲ್ಲ ನೆಲೆಯ ತಿಳಿಯುವದಲ್ಲ ೩

ಅಳೆದು ಕೂಡುವುದಲ್ಲ ಕೊಳಗ ಎಣಿಸುವುದಲ್ಲ ೪

ತೂಕ ಮಾಡುವುದಲ್ಲ ಲೆಕ್ಕ ಇಡುವುದಲ್ಲ ೫
ಇಟ್ಟು ಮಾರುವದಲ್ಲ ಕೊಟ್ಟರ್‍ಹೋಗುವುದಲ್ಲ ೬
ಪಂಡಿತರಿಗೆ ಪ್ರಾಣ ಕೊಂಡವರಿಗೆ ತ್ರಾಣ ೭
ಹೇಳಿದ ನಾ ನಿಮಗೊಂದು ಸುಲಭವಾಗಿಂದು ೮
ಒಮ್ಮನವಾದರ ಸುಮ್ಮನೆಬಾಹುದು ೯
ಸಾಧುಸಜ್ಜನರಿಗೆ ಸಾಧ್ಯವಾಗುದಿದು ೧೦
ಸಾರಿ ಚೆಲ್ಲೇದ ಮಹಿಪತಿ ವಸ್ತುಮಯಮಿದು ೧೧

## ೨೨೨

ಗಳಿಸಿಕೊಳ್ಳಿರೊ ಸಾಧು ಸಜ್ಜನರ ಸಂಗವ
ಗಳಿಗಿಯೊಳು ದೋರಿಕೊಡುವರು ಅಂತರಂಗವ ಧ್ರುವ

ಹೊಟ್ಟೆಗೆ ಮೊಟ್ಟೆಗೆ ಕಟ್ಟು ಹೋಗಬ್ಯಾಡಿರೊ
ಹುಟ್ಟಿಬಂದ ಮ್ಯಾಲೆ ಹರಿನಾಮ ಘಟ್ಟಿಗೊಳ್ಳಿರೊ
ಗುಟ್ಟಲಿದ್ದ ವಸ್ತು ನೀವು ಮುಟ್ಟಿ ಮನಗಾಣಿರೊ
ಕೆಟ್ಟ ಗುಣಕಾಗಿ ಬಿದ್ದು ಸಿಟ್ಟು ಹಿಡಿಯಬ್ಯಾಡಿರೊ ೧

ಹೊನ್ನಿಗೆ ಹೆಣ್ಣಿಗೆ ಬಾಯಿ ತೆರಿಯಬ್ಯಾಡಿರೊ
ಕಣ್ಣಗೆಟ್ಟು ಹೋಗಿ ನೀವು ದಣ್ಣನೆ ದಣಿಯಬ್ಯಾಡಿರೊ
ಹೆಣ್ಣಿಗಾಗಿ ರಾವಣೇನು ಪಡೆದುಕೊಂಡ ಕಾಣಿರೊ
ಹೊನ್ನಿಗಾಗಿ ವಾಲಿ ಏನು ಸುಖವ ಪಡೆದ ನೋಡಿರೊ ೨

ಉರ್ವಿಯೊಳು ಬಂದು ನೀವು ಗರ್ವಹಿಡಿಯ ಬ್ಯಾಡಿರೊ
ಕೌರವೇಶ ಮಣ್ಣಿಗೆ ಗರ್ವಹಿಡಿದು ಕೆಟ್ಟ ನೋಡಿರೊ
ಅರ್ವಪಥವ ಬಿಟ್ಟು ಮರ್ವಿಗ್ಹೋಗಬ್ಯಾಡಿರೊ
ಸರ್ವಸಾರಾಯ ಸುಖ ಹರಿಯ ಭಕ್ತಿ ಮಾಡಿರೊ ೩

ಕಾಮ ಕಳವಳಿಗಿನ್ನು ಕುಣಿದು ಕೆಡಬ್ಯಾಡಿರೊ
ನೇಮದಿಂದ ಸ್ವಾಮಿ ಶ್ರೀಪಾದ ಬೆರೆದು ಕೂಡಿರೊ
ನಾಮರೂಪಕವಗಿ ಬಿದ್ದು ಹಮ್ಮು ಹಿಡಿಯಬ್ಯಾಡಿರೊ
ತಾಮಸೆಂಬ ದೈತ್ಯನ ಸುಟ್ಟು ಹೋಮಮಾಡಿರೊ ೪

ಕಳೆಯಬೇಕು ನೋಡಿ ಭವ ಬಂಧವಾದ ದುಸ್ತರ
ಹೋಳಿಯಾಡಬೇಕು ಒಂದೆ ಸೀಳಿ ಮದಮತ್ಸರ
ಹೇಳಿಕೊಟ್ಟ ಗುರುವಿನ ಕೊಂಡಾಡಬೇಕು ಎಚ್ಚರ
ಕೇಳಬೇಕು ಒಂದೆ ನೋಡಿ ಜ್ಞಾನ ಬೋಧ ಶ್ಯಾಸ್ತ್ರರ ೫

ಲೋಕವೆಲ್ಲ ಬಂದು ಹೊನ್ನ ಹೆಣ್ಣು ಮಣ್ಣಿಗಾಯಿತು
ಬೇಕಾದ ವಸ್ತು ಬಿಟ್ಟು ಪೋಕುಬುದ್ಧಿಗ್ಹೋಯಿತು
ಸುಖ ಸೂರೆಗೊಳ್ಳದೆ ತೇಕಿ ದಣಿದುಹೋಯಿತು
ಏಕವಾಗಿ ನೋಡಲು ದೈಥಯ್ಯಗೊಟ್ಟಿತು ೬

ಮಹಿಪತಿಯ ಸ್ವಾಮಿಯ ನೆನೆದು ಒಮ್ಮೆ ನೋಡಿರೊ
ಇಹಪರಸುಖ ಸೂರ್ಯಾಡಿ ನಲಿದಾಡಿರೊ
ಮಹಾಮಹಿಮೆದೋರುತದೆ ಮಯ್ಯ ಮರಿಯಬ್ಯಾಡಿರೊ
ತ್ರಾಹಿತ್ರಾಹಿ ಎಂದು ಮನಗಂಡು ಕುಣಿದಾಡಿರೊ ೭

## ೨೨೩

ಗಳಿಸಿದೆ ನಾಕಳತಿ ತಿಳಿಯದೆ ನಿನ್ನಳತಿ
ಅಳೆದು ಹಾಕಿ ತೊಳಲಿ ಬಳಲಿದೆ ಚಿತ್ತ ಹೊಲತಿ ೧

ಏಸು ಜನ್ಮ ತಾಳಿ ಹೆಸಲಿಲ್ಲ ಮೂಳಿ
ಘಾಸಿಯಾದೆ ಸೋಶಿಲಿನ್ನು ಆಶಿಯಲಿ ಬಾಳಿ ೨

ವಿಷಯದಾಶಿವಳಗ ವಶವನೀಗೊಂಡಲಗ
ಪಶುವಿನಂತೆಗಳದಿ ಜನ್ಮವ್ಯಸನದಾಶಿ ಕೆಳಗೆ ೩

ಏನ ನೀನಾದರ ಜ್ಞಾನಹೀನನಾದರೆ
ಭಾನುಕೋಟಿ ತೇಜನ ನೀ ಶರಣು ಪುಗು ಇನ್ನಾರೆ ೪

ಪಿಡಿದು ನಿಜಖೂನ ಪಡೆದುಕೋ ಸುಜ್ಞಾನ
ಬಿಡದೆ ಸಹಲುತ್ತಾನೆ ಮಹಿಪತಿಯ ಸ್ವಾಮಿ ಪೂರ್ಣ ೫

## ೨೨೪

ಘನ ಲಂಪಟಗೆಲ್ಲಿಹುದು ಗುರುಕೃಪೆ ಜ್ಞಾನ
ತನು ಲಂಪಟಗೆಲ್ಲಿಹುದು ತನ್ನೊಳು ಖೂನ ಧ್ರುವ

ವಿಷಯ ಲಂಪಟಗೆಲ್ಲಿಹುದು ತಾ ವಿರಕ್ತಿಯು
ದೆಸೆಗೆಟ್ಟವಗೆಲ್ಲಿಹುದು ಯುಕ್ತಿಯು
ಮುಸುಕಿದ ಮಾಯದವಗೆಲ್ಲಿಹುದು ಮುಕ್ತಿಯು
ಹುಸಿಯಾಡುವಂಗೆಲ್ಲಿಹುದು ಋಷಿ ಭಕ್ತಿಯು ೧

ಮರುಳಗುಂಟೆ ಅರುಹ ರಾಜಸನ್ಮಾನದ
ತರಳಗುಂಟೆ ಭಯವು ಘಟಸರ್ಪದ
ಎರಳೆಗುಂಟೆ ಖೂನ ಮೃಗ ಜಲವೆಂಬುವದ
ಸೂರಿಗೆ ಉಂಟೆ ಮಾತು ಚಾತುರ್ಯದ ೨

ಕನಸ ಕಾಂಬುವಗೆಲ್ಲಿಹುದು ತಾನಿರುವ ಸ್ಥಾನ
ಮನದಿಚ್ಛೆಲಿದ್ದವಗೆಲ್ಲಿಯ ಧ್ಯಾನ
ದೀನ ಮಹಿಪತಿ ಸ್ವಾಮಿ ಕಾಣದವಗೆಲ್ಲಿ ಘನ
ಅನುಭವಿಸಿಕೊಳ್ಳದೆ ಜನ್ಮಕ ಬಂದದ್ದೇನ ೩

## ೨೨೫

ಜಾಣತನದ ಮಾತು ಏನು ಕೆಲಸವಯ್ಯ ಖೂನ ನೋಡಿ
ಪ್ರಾಣನಾಯಕನ ತಿಳಿವುದೊಂದೆ ಜ್ಞಾನಾಭ್ಯಾಸ ಮಾಡಿ ಧ್ರುವ

ಕರಿಮಣಿ ಒಂದಿಲ್ಲದೆ ಹೆಂಗಸಿಗೆ ಸರಮುತ್ತು ಯಾಕೆ
ಸಾರ ಸಂಜೀವನಿಲ್ಲದೆ ನೂರು ಗಿಡಮೂಲಿಕೆ ಯಾಕೆ
ನೆರೆ ಇಲ್ಲದೆ ಸಾಧುಸಜ್ಜನರು ಸರ್ವಬಳಗವ್ಯಾಕೆ
ಪರಮ ತತ್ವಜ್ಞಾನ ಒಂದಿಲ್ಲದೆ ಸುರಿಯುವ ಮಾತಿನ್ಯಾಕೆ ೧

ಪ್ರಾಣವಿಲ್ಲದ ಸುಂದರವಾದ ಶರೀರ್‍ಯಾಕೆ
ಖೂನವಿಲ್ಲದೆ ನೂರು ಕಾಲ ಬದಕುವುವದ್ಯಾಕೆ
ಸ್ವಾನುಭವದ ಸುಖ ನೆಲೆಯುಗೊಳ್ಳದೆ ಒಣ ಡಂಭವ್ಯಾಕೆ
ತಾನಾಗಿಹ್ಯ ವಸ್ತು ದೊರಕಿಲ್ಲದೆ ನಾ ನೀನೆಂಬುದ್ಯಾಕೆ ೨

ಶ್ರೀ ಹರಿಮಹಿಮೆಯ ಸೋಹ್ಯ ತಿಳಿಯದೆ ದೇಹ್ಯವ್ಯಾಕೆ
ಗುಹ್ಯಗುರುತವಿಲ್ಲದೆ ಸಾಯಸಬಡುವದ್ಯಾಕೆ
ಸಾಹ್ಯಮಾಡುವ ಸದ್ವಸ್ತು ನೋಡದ ಕಣ್ಣು ನೋಟವ್ಯಾಕೆ
ಮಹಿಪತಿಸ್ವಾಮಿ ಸದ್ಗುರುಪಾದ ಕಾಣದ ಜನ್ಮವ್ಯಾಕೆ ೩

## ೨೨೬

ಜ್ಞಾನಕಿದೆ ಖೂನ ಸ್ವಾನುಭವ ಸ್ಥಾನ
ನಾನು ನೀನೆಂಬುದಕಾಗುವದಿದೆ ಉದಯಮಾನ ಧ್ರುವ

ಅರಹು ನಿನ್ನೊಳರಿಯಾ ಅರುವ್ಹಿನೊಳು ಬೆರಿಯಾ
ಅರಹು ಅರಿಯಲಿಕ್ಕೆ ಗುರುಕುರುಹು ನಿಜವರಿಯಾ ೧

ಮರೆಸುವದರ ಅರಿಯಾ ಅರಿಸುವದರ ಜರಿಯಾ
ಅರಸಿ ಮರಿಸಗುಡದರನುಭವದ ನಿಜಪರಿಯಾ ೨

ಅರುವಿಲಹ ಖೂನ ಗುರುಕೃಪ ಜ್ಞಾನ
ತರಳ ಮಹಿಪತಿ ಅರಿಯೊ ಪರಮ ಸುನಿಧಾನ ೩

## ೨೨೭

ಜ್ಞಾನದ ನಡಿಬ್ಯಾರೆ ತತ್ವಜ್ಞಾನದ ನಡಿ ಬ್ಯಾರೆ ಧ್ರುವ

ದೇಹದಂಡನೆ ಮಾಡಿದರೇನು
ಬಾಹ್ಯಾರಂಜನೆ ದೋರಿದರೇನು ೧

ಶಬ್ದ ಜ್ಞಾನ ಸೂರಾಡಿದರೇನು
ಲಭ್ಯಾ ಲಬ್ಧೇಲಾಡಿದರೇನು ೨

ರಿದ್ಧಿ ಸಿದ್ಧಿಯ ದೋರಿದರೇನು
ಗೆದ್ದು ಮಂತ್ರಾಂತ್ರಸೋಲಿಪರೇನು ೩

ಮಾತು ಗೀರ್ವಾಣ ಆಡಿದರೇನು
ಭೂತ ಭವಿಷ್ಯ ಹೇಳಾಡಿದರೇನು ೪

ವ್ರತ ತಪ ತೀರ್ಥಾಶ್ರೈಸಿದರೇನು
ಕೃತ ಕೋಟ್ಯಜ್ಞಾವ ಮಾಡಿದರೇನು ೫

ಯೋಗಾಯೋಗಾಚರಿಸಿದರೇನು
ಭೋಗ ತ್ಯಾಗ ಮಾಡಿದರೇನು ೬

ಏನು ಸಾಧನೆ ಮಾಡಿದಫಲವೇನು
ಖೂನ ದೋರದೆ ಮಹಿಪತಿಗುರುತಾನು ೭

## ೨೨೮

ಜ್ಞಾನಗುರು ಶುದ್ಧ ಮಡಿವಾಳ
ಮನ ಮೈಲಿ ತೊಳೆವ ನಿರ್ಮಳ ಧ್ರುವ

ದೃಢ ಮಾಡುವ ಬಂಡೆಗಲ್ಲು
ತೊಡೆವ ಸುಭೋಧ ಸಬಕಾರ ಮೇಲು
ಹಿಡಿದು ಹಿಂಡುವ ಮನ ಮೈಲು
ಕುಡುವ ವೈರಾಗ್ಯದ ಬಿಸಿಲು ೧

ಉದ್ದಿ ಒರಸುವ ಸಬಕಾರ ಕೈಯ
ಎದ್ದಿ ವಿವೇಕ ಉದರ ನಿಶ್ಚಯ
ಶುದ್ಧದೋರಿಸಿ ಸಾಂಪ್ರದಾಯ
ಸಿದ್ಧ ಮಾಡುವ ಗುರು ನಮ್ಮೈಯ್ಯ ೨

ಸೆಳೆದು ಒಗೆವ ವ್ಯಾಳೆವ್ಯಾಳಗಯ್ಯ
ತೊಳೆದು ಅಹಂಭಾವದ ಕಲೆಯ
ಕೊಳ್ಳದೆ ಒಗೆವಾ ತಾ ಕೂಲಿಯ
ಬಿಳಿದು ಮಾಡುವ ಮೂಳೆ ಕಳಿಯ ೩

ಆಶಿ ಎಂಬುದ ಹಾಸಿ ಒಣಗಿಸಿ
ಹಸನಾಗಿ ಘಳಿಗೆ ಕೂಡಿಸಿ
ಭಾಸಿ ಕೊಡುವ ತಾ ಘಟ್ಟಿಸಿ
ಲೇಸು ಲೇಸಾಗಿ ಅನುಭವಿಸಿ ೪

ಶುದ್ಧ ಮಾಡಿದ ಮನ ನಿಶ್ಚಯ
ಸಿದ್ಧ ಸಾಕ್ಷಾತ್ಕಾರ ನಮ್ಮಯ್ಯ
ಸದ್ಬೋಧಿಸಿದ ಜ್ಞಾನೋದಯ
ಸದ್ಗೈಸಿದ ಮಹಿಪತಿಯ ೫

## ೨೨೯

ಜ್ಞಾನವಿಲ್ಲದೆ ಬಾಳೂದೊಂದು ಸಾಧನವೆ
ಗಾಣದೆತ್ತಿನಂತೆ ಕಾಣದಿಹ್ಯದೊಂದು ಗುಣವೆ ಧ್ರುವ

ತನ್ನ ನರಿಯಲಿಲ್ಲ ಬನ್ನವಳಿಯಲಿಲ್ಲ
ಕಣ್ಣದೆರೆದು ಖೂನಗಾಣಲಿಲ್ಲ
ಸಣ್ಣದೊಡ್ಡರೋಳೆನೆಂದು ತಿಳಿಯಲಿಲ್ಲ
ಬಣ್ಣ ಬಣ್ಣದ ಶ್ರಮ ಬಿಡುವದುಚಿತವಲ್ಲ ೧

ಶಮದಮಗೊಳ್ಳಲಿಲ್ಲ ಕ್ಷಮೆಯು ಪಡೆಯಲಿಲ್ಲ
ಸಮದೃಷ್ಟಿಯಲಿ ಜನವರಿಯಲಿಲ್ಲ
ಸಮರಸವಾಗಿ ಸದ್ಘನವ ನೋಡಲಿಲ್ಲ
ಭ್ರಮೆ ಅಳಿದು ಸದ್ಗುರುಪಾದಕೆರಗಲಿಲ್ಲ ೨

ಗುರು ಕೃಪೆ ಇಲ್ಲದೆ ಗುರುತಾಗುವದಲ್ಲ
ಗುರುತಿಟ್ಟು ನೋಡಿಕೊಂಡವನೇ ಬಲ್ಲ
ಗುರು ಭಾನುಕೋಟಿ ತೇಜನಂಘ್ರಿ ಕಂಡವನೆಬಲ್ಲ
ತರಳ ಮಹಿಪತಿ ಸ್ವಾಮಿ ಸುಖ ಸೋರ್‍ಯಾಡುವದೆಲ್ಲ ೩

## ೨೩೦

ಜ್ಞಾನವೆಂಬುದಕೇನು ಕ್ಷಣ ನಡಿಯು ಕಠಿಣ
ಅನುಭವದ ನಿಜಖೂನ ಅಗಮ್ಯ ಸ್ನಾನ ಧ್ರುವ

ಅಹಂ ಬ್ರಹ್ಮಾಸ್ಮಿ ಎಂಬ ಸೋಹ್ಯ ತಿಳುವದೆ ಗುಂಭ
ಬಾಹ್ಯ ರಂಜನದೆ ಡಂಭ ದೇಹದಾರಂಭ
ಸೋಹ್ಯ ತಿಳಿದುಕೊಂಬ ಗುಹ್ಯಗುರುತದ ಇಂಬ
ಮಹಾಮಹಿಮೆಲೆ ಉಂಬ ಸಹಸ್ರಕೊಬ್ಬ ೧

ಸಾಧಿಸುವದಾಗ ಸದ್ಗುರು ಮೂರ್ತಿ ಶ್ರೀಪಾದ
ತುದಿ ಮೊದಲಿಲ್ಲದ ಬೋಧ ಆದಿತತ್ವದ
ಭೇದಿಸದಲ್ಲದ ಭೇದ ಮದಮತ್ಸರದ ಕ್ರೋಧ
ಹಾದಿ ತಿಳಿಯದು ವಸ್ತುದ ಉದಯಸ್ತಿಲ್ಲದ ೨

ಜ್ಞಾನಕ ಜ್ಞಾನೊಡಮೂಡಿ ಖೂನಕ ಬಾವ್ವಾಂಗ ಮಾಡಿ
ನಾ ನೀನೆಂಬುದು ಈಡಾಡಿ ಅನುಭವ ನೋಡಿ
ಮನೋನ್ಮದ ನಡಿ ಅನುದಿನವೆ ಕೊಂಡಾಡಿ
ಘನಕ ಮಹಿಪತಿ ನೀ ಕೂಡಿ ನೆನಿಯೊ ಬೆರೆದಾಡಿ ೩

## ೨೩೧

ಜ್ಞಾನಭ್ಯಾಸವ ಮಾಡಿ ಹೀಗೆ
ತಾನೊಲಿದು ಜ್ಞಾನ ಗುರು ಖೂನಾಗುವ್ವಾಂಗೆ ಧ್ರುವ

ಮನದಲಿ ಬಾವ್ವಾಂಗ ನೆನೆದಲಿ ಕಾಂಬ್ವಾಂಗೆ
ತನುವಿನಲಿ ನಿಜಗೊಂಡು ತಾ ನೆಲೆಯಗೊಂಬ್ವಾಂಗೆ
ಅನುದಿನನದಲ್ಯನುಭವಿಸುವ್ವಾಂಗೆ
ಕನಗರಸಿದಲಿ ಮನೋಹರ ಮಾಡುವ್ವಾಂಗೆ ೧

ಅರ್ವಿನಲಿರುವ್ವಾಂಗೆ ಕುರುಹುದೋರುವ್ವಾಂಗೆ
ಇರುವ್ವ ನೆಲೆಗೊಂಡು ತಾನೆವೆ ಸ್ಥಿರವಾಗುವ್ವಾಂಗೆ
ಮರವು ಮರದೀಡ್ಯಾಡುವ್ವಾಂಗೆ
ಗುರು ಚರಣ ಕಮಲವನು ಗುರುತಾಗುವ್ವಾಂಗೆ ೨

ಧ್ಯಾಸ ನೀಜ ಬಲುವ್ವಾಂಗೆ ವಾಸನೆ ಪೂರಿಸುಹಾಂಗೆ
ಭಾಸ್ಕರ ಕೋಟಿ ಪ್ರಕಾಶ ಭಾಸಿಸುವ್ವಾಂಗೆ
ಭಾಸ್ಕರ ಬಾಹ್ಯಾಂತ್ರಲಿವ್ವಾಂಗೆ
ಲೇಸಾಗಿ ಮಹಿಪತಿ ಸ್ವಾಮಿಒಲುವ್ವಾಂಗೆ ೩

## ೨೩೨

ತತ್ತ್ವ ತಿಳಿಯದು ಅಹಂಮತ್ವ ಅಳಿಯದನಕ ಧ್ರುವ

ದೇವ ವಿದೇಹ ಸುದೇಹಾಗದನಕ
ಸಂದೇಹ ಸಂಶಯ ಸಂಕಲ್ಪ ಹೋಗದನಕ ೧

ಪ್ರವೃತ್ತಿ ನಿವೃತ್ತಿ ಸುವೃತ್ಯಾಗಕನಕ
ಸ್ವಪ್ನ ಸುಷಪ್ತಿ ಜಾಗ್ರ್ಯತ್ಯಾಗದನಕ ೨

ದೃಷ್ಟ ಅದೃಷ್ಟ ಸದ್ರಷ್ಟಾಗದನಕ
ದುಷ್ಟನಷ್ಟಗಳ ಸಂಕಷ್ಟೋಗದನಕ ೩

ಲಬ್ಧ ಅಲಬ್ಧ ಪ್ರಾಲಬ್ಧಾಗದನಕ
ಶಬ್ಧ ನಿಶ್ಯಬ್ಧ ಸುಶಬ್ದಾಗದನಕ ೪

ಭಾವ ಅಭಾವ ಸ್ವಭಾವಾಗದನಕ
ಮಾಯ ಮೋಹದ ಮನೆಯು ಮುಕ್ಕಾಗದನಕ ೫

ಸದ್ಗುರು ದಯಕರುಣ ಕೃಪೆ ಅಗದನಕ
ಮಹಿಪತಿ ನಿನ್ನೊಳು ನೀ ಬೆರಿಯತನಕ ೬

## ೨೩೩

ತನ್ನ ತಾ ತಿಳಿಯುವದೆ ಜ್ಞಾನ ಮನಮುಟ್ಟು ಪೂರ್ಣ
ಚೆನ್ನಾಗಿ ಸದ್ಗುರುವಿನ ಕೇಳಿರೊ ಖೂನ ಧ್ರುವ

ತನು ಮನವಿಟ್ಟು ತಿಳಿವದೀ ಗುರುಗುಟ್ಟು
ಧನ ದ್ರವ್ಯಾರ್ಜಿತವನಿಟ್ಟು ಕೇಳಿ ಕಿವಿಗೊಟ್ಟು
ಅನುಬವದ್ಹೆಚ್ಚಿ ಮೆಟ್ಟು ಸಾಧಿಸಿ ವೈರಾಗ್ಯ ಕೊಟ್ಟು
ಖೂನಮಾಡಿಕೊ ಬೇಕಿಟ್ಟು ಅನುಮಾನ ಬಿಟ್ಟು ೧

ಗಿಳಿಯಾಡಿದಂತೆ ನುಡಿಯಾತಕ ಬಾಹುದು ನೋಡಿ
ಹೇಳ್ಯಾಡಕೊಂಬುದೀಡ್ಯಾಡಿ ಮಾತಿನ ರೂಢಿ
ತಿಳಿಯಬೇಕೊಂದು ನೋಡಿ ತತ್ವಜ್ಞಾನ ಒಡಮೂಡಿ
ಬೆಳಗಿನೊಳು ಬೆರದಾಡಿ ಘನಕ ಘನ ಕೂಡಿ ೨

ನುಡಿ ನಡಿ ಒಂದಾದರೆ ವಸ್ತು ತಾನಿಹುದು ದೂರ
ಬಿಡಲರಿಯದು ಹಾಂಗಾದರ ಎಂದಿಗಾರು ಒಡಗೂಡಿ
ನೋಡಿದರೆ ತನ್ನೊಳು ತಾಂ ನಿಜ ಖರೆ
ಬಿಡಬ್ಯಾಡೊ ಮಹಿಪತಿನ್ನಾರ ಕೂಡಿದ ಸಾರ ೩

## ೨೩೪

ತನ್ನನರಿಯದವ ಜ್ಞಾನದ ಮಾತಾಡಿದರೇನು
ಕಣ್ಣಿಲ್ಲದವ ಕನ್ನಡಿ ಪಿಡಿದರೇನು ಧ್ರುವ

ಧೈರ್ಯವಿಲ್ಲದವ ಕೈಯಲಿ ಶಸ್ತ್ರ ಹಿಡಿದರೇನು
ಸ್ಥೈರ್ಯವಿಲ್ಲದವ ತಪಸ್ಯಾದರೇನು
ಮರ್ಯಾದಿಲ್ಲದವ ಗುರು ಸನ್ನಿಧವಿದ್ದರೇನು
ಕಾರ್ಯಕೊದಗದ ಬಂಟ ಬಲ್ಲಿದನಾದರೇನು ೧

ಗಂಡ ನಿಲ್ಲದ ನಾರಿ ಸುಗುಣ್ಯುದ್ದಂಡಾದರೇನು
ಷಂಡ ಸಾವಿರ ಹೆಣ್ಣು ಮದುವ್ಯಾದರೇನು
ಖಂಡಿಸದೆ ಅನುಮಾನ ಪಂಡಿತನೆನಿಸಿದರೇನು
ಕಂಡು ಕಾಣದ್ಹೇಳವನ ಕೊಂಡಾಡಲೇನು ೨

ಭಾನುಕೋಟಿ ತೇಜನಂಘ್ರಿ ಗುರುತಲ್ಲದರಿವೇನು
ಅನುಭವಿಸಿ ಕೊಳ್ಳದ ನರಜನ್ಮವೇನು
ದೀನ ಮಹಿಪತಿಸ್ವಾಮಿಕಾಣದ ಕಂಗಳವೇನು
ಜ್ಞಾನ ಉಂಟುಮಾಡಿಕೊಳ್ಳದವನ ಬಾಳಿವೇನು ೩

## ೨೩೫

ತನ್ನೊಳು ತಿಳಿಯೊ ಪ್ರಾಣಿ ಪುಣ್ಯಸಾಧನಿ ಧ್ರುವ

ತನ್ನಿಂದಲೆ ತಾ ನೋಡುವ ಖೂನ
ಚೆನ್ನಾಗ್ಯದನುಭವ ಜ್ಞಾನ
ಸನ್ಮತ ಸುಖದೋರುವ ಚಿದ್ಘನ
ಭಿನ್ನವಿಲ್ಲದೆ ನೋಡುವದುನ್ಮನ ೧

ಮೂಲವಿಡಿದು ನಿಜ ನೋಡುವದರಿಂದ
ಮ್ಯಾಲೆ ದೋರುತಲದೆ ಬ್ರಹ್ಮಾನಂದ
ಕೀಲು ತಿಳಿದರೆ ಸದ್ಗುರು ಕೃಪೆಯಿಂದ
ಒಲಿದು ಬಾಹನು ತಾ ಮುಕುಂದ ೨

ಸೆರಗವಿಡಿದು ನೋಡುಲು ಗುರುಮುಖ
ಮೂರು ಲೋಕಕ ಬಲು ಪರಮ ವಿವೇಕ
ತರಳ ಮಹಿಪತಿ ಆತ್ಮಾನುಭವ ಸುಖ
ದೋರುತಲದೆ ತಾ ಘನ ಕೌತುಕ ೩

## ೨೩೬

ತಪ್ಪಲರಿಯದು ಬರೆದ ಬ್ರಹ್ಮನಿರ್ಮಿತವು
ಒಪ್ಪುವದು ಯತಿ ಮುನಿ ಋಷಿಯ ಸಂತತಿಯು ಧ್ರುವ

ಆನಿ ಮೊದಲಿರುವೆ ಕಡೆ ಅಣುಮಾತ್ರಾಕಾರವನು
ಮುನ್ನ ಬರೆದಂತೆ ತಾನಡೆಯುತಿಹಂದು
ಇನ್ನು ಮುತ್ತನ್ಯ ದೈವಕ ಬಯಸಿ ಬೇಡಿದರೆ
ಮುನ್ನಿಗೆ ಕೊಡಬಲ್ಲವೆ ಬಿನಗುದೈವವು ೧

ಭಿನ್ನವಿಲ್ಲದೆ ತನುವಿನೊಳು ಆನಂದ ಘನ
ಉನ್ನತ ಮಹಿಮ ಪರಿಪೂರ್ಣವಿರಲು
ಚೆನ್ನಾಗಿ ಚಿನಮಯ ಮೂರ್ತಿ ಶ್ರೀಪಾದವನು
ಅನುದಿನ ಭಜಿಸಿ ಘನ ಸುಖವ ಪಡಿಯೊ ಮನವೆ ೨

ಕಕ್ಕುಲಾತಿಯ ಬಟ್ಟು ಕಂಡವರ ಕಾಲ್ಗೆರಗಿ
ಫಕ್ಕಸಾರಿಯ ಧರ್ಮ ಜರಿಯ ಬ್ಯಾಡ
ಸಕಲ ಸಹಕಾರ ಮಹಿಪತಿಸ್ವಾಮಿ ನಿನಗಿರಲು
ಭಕುತಿ ಮುಕುತಿಯ ಉಂಟು ಮೂಢ ಜನವೆ ೩

## ೨೩೭

ತಾನಾರು ತನುವು ಆರು ತಿಳಿದು ನೋಡಿ ಧ್ರುವ

ತಾನಾರು ತನುವಾರು
ತನ್ನೊಳೂ ತಾನೆ ತಿಳಿದು ನೋಡಿ
ಘನ ಬ್ರಹ್ಮದೊಳು ಮನ ಬೆರೆದಾತ ಶರಣನು ೧

ಕಾಯದೊಳಿಹ್ಯ ಕಳವಳಗಳೆದು
ಮಾಯ ಮೋಹದ ಮಲಗಳ ತೊಳೆದು
ದೇಹ ವಿದೇಹವಾದಾತ ಶರಣನು ೨

ಭ್ರಾಂತಿಯ ಅಭಾವಗಡಿದು
ನೀತಿ ಸುಪಥದ ಮಾರ್ಗವ ಹಿಡಿದು
ಜ್ಯೋತಿ ಸ್ವರೂಪವ ಕಂಡಾತ ಶರಣನು ೩

ಭಾವ ಭಕ್ತಿಯ ಕೀಲವ ತಿಳಿದು
ಹ್ಯಾವ ಹೆಮ್ಮೆಯ ಮೂಲವನಳಿದು
ಜೀವ ಶಿಶುವು ತಿಳಿದಾತ ಶರಣನು ೪

ಜಾತಿಯ ಕುಲಗಳ ಭೇದವ ತಿಳಿದು
ಯಾತನೆ ದೇಹದ ಸಂಗವನಳಿದು
ಮಾತಿನ ಮೂಲವ ತಿಳಿದಾತ ಶರಣನು ೫

ಸೋಹ್ಯ ಸೊನ್ನೆಯ ಸೂತ್ರವಿಡಿದು
ಲಯ ಲಕ್ಷಿಯ ಮುದ್ರೆಯ ಜಡಿದು
ಧ್ಯೇಯ ಧ್ಯಾತವ ತಿಳಿದಾತ ಶರಣನು ೬

ನಾದದಿಂದ ಕಳೆಯ ಮುಟ್ಟಿ
ಸಾಧಿಸಿ ಉನ್ಮನ ಮುದ್ರೆಯ ಮೆಟ್ಟಿ
ಆದಿತತ್ವದ ಗತಿ ತಿಳಿದಾತ ಶರಣನು ೭

ಆಧಾರ ದೃಢದಿಂದ ಅರಹುತನಾಗಿ
ಮಧ್ಯ ಮುಪ್ಪುರದಲಿ ಸ್ಥಿತಿವಾಗಿ
ಊರ್ಧ್ವ ಮಂಡಲಗತಿ ಬೆರೆದಾತ ಶರಣನು ೮

ಬಾಹ್ಯಾಂತ್ರ ಪರಿಪೂರ್ಣ ಘನಮಯಗಂಡು
ಸಾಯೋಜ್ಯ ಸದ್ಗತಿ ಸವಿಸುಖನುಂಡು
ಮಹಿಪತಿ ಗುರುಮನಗಂಡಾತ ಶರಣನು ೯

## ೨೩೮

ತಿಳಿದುಕೊಳ್ಳಿ ಖೂನ ಬಲ್ತು ನಿಜ ಜ್ಞಾನ ಧ್ರುವ

ಹಾದಿ ಅದೆ ಹಿಂದಗಾಧ ಅದೆ ಮುಂದೆ
ಭೇದಿಸಿನ್ನು ತಿಳಿದುಕೊಳ್ಳಿ ಗುರುಕೃಪೆಯಿಂದ ೧

ಲಬ್ಧ ಅದೆ ಹಿಂದೆ ಶಬ್ದ ಅದೆ ಮುಂದೆ
ಲಬ್ಧವಾಗಿ ಕೇಳಿಕೊಳ್ಳಿ ಗುರುದಯದಿಂದ ೨

ಅರ್ಥ ಅದೆ ಹಿಂದೆ ಸ್ವಾರ್ಥ ಅದೆ ಮುಂದೆ
ಅರ್ತು ಇದೆ ಕೇಳಿಕೊಳ್ಳಿ ಗುರು ಜ್ಞಾನದಿಂದೆ ೩

ಗುಂಭ ಅದ ಹಿಂದೆ ಡಂಭ ಅದೆ ಮುಂದೆ
ಇಂಬು ಇದೇ ತಿಳಿದುಕೊಳ್ಳಿ ಗುರು ಜ್ಞಾನದಿಂದೆ ೪

ನೋಟ ಅದೆ ಮುಂದೆ ಕೂಟ ಅದೆ ಹಿಂದೆ
ನೀಟವಾಗಿ ಗುರುವಿಗೆ ಕೇಳಬೇಕು ಒಂದೆ ೫

ಮನವು ಅದೆ ಮುಂದೆ ಘನವು ಅದೆ ಹಿಂದೆ
ತನುವಿನೊಳು ಮಾಡಿಕೊಳ್ಳಿ ಖೂನ ನಿಜ ಒಂದೆ ೬

ದೇಹ್ಯ ಅದೆ ಮುಂದೆ ಸೋಹ್ಯ ಅದೆ ಹಿಂದೆ
ಸೋಹ್ಯ ದೋರಿಕೊಡುವ ಮಹಿಪತಿ ಗುರು ತಂದೆ ೭

## ೨೩೯

ತಿಳಿದು ನೋಡಿ ತನುವಿನೊಳು ಗುಹ್ಯ ಗುರುತವು ಪೂರ್ಣ
ಸುಳ್ಹವುದೋರಿಕೊಡುವ ನಿಜ ಸದ್ಗುರು ಕರುಣ ಧ್ರುವ

ಜೀವ ಶಿವ ದಾವ ದೆಂದಿಳಿವ್ಯಾವ ನೋಡಿ
ನಾವು ನೀವೆಂದು ಹ್ಯಾವ ಹೆಮ್ಮೆಯ ಹಿಡಿಯ ಬ್ಯಾಡಿ
ಮಾವಮಕರ ಗುಣಬಿಟ್ಟು ಭಾವ ಭಕ್ತಿ ಮಾಡಿ
ದೇವದೇವೇಶನ ದಿವ್ಯಪಾದಪದ್ಮ ಕೂಡಿ ೧

ಬಾಯ್ದೆರೆದು ಬರೆ ಭ್ರಮೆಗೆ ಸಾಯಗೊಂಬುದು ಏನು
ನ್ಯಾಯ ಜರೆದು ನೋಯಗೊಂಬುಪಾಯ ನಿನ್ನಾಧೀನ

ಮಾಯ ಮರ್ಮಪಾಯವರಿದು ಧ್ಯಾಯಿಸೊ ನಿಧಾನ
ಸೋಹ್ಯದೋರುತಿದೆ ನೋಡಿ ಸದ್ಗತಿ ಸಾಧನ ೨

ಸಾವಧಾನವೆಂದು ಶ್ರುತಿ ಸಾರುತಿದೆ ನೋಡಿ
ಗೋವಿಸುವ ವಿದ್ಯದೊಳು ಸಿಲುಕಿಬೀಳಬ್ಯಾಡಿ
ಆವ ಪರಿಯ ಭಾವ ಕಾವ ದೈವ ನೋಡಿ
ಜೀವ ಜೀವಾಗಿಹ್ಯ ಮಹಿಪತಿ ನಿಜಗೂಡಿ ೩

## ೨೪೦

ತಿಳಿದು ನೋಡಿ ತನುವಿನೊಳು ತಮ್ಮ ನಿಜಖೂನ
ಸುಳುಹು ದೋರಿಕುಡುವ ನೋಡಿ ನಿಜಾನಂದ ಘನ ಧ್ರುವ

ತಮ್ಮ ಶುದ್ಧಿ ತಮಗಿಲ್ಲವೊ ಹೆಮ್ಮೆ ಬಹಳ
ಘಮ್ಮ ಆದರೆ ಎಲ್ಲ ನೋಡಿ ಹೊಕ್ಕು ಮೃಗಜಲ
ನಮ್ಮ ನಿಮ್ಮದೆಂದು ಹೊಡೆದಾಡಿ ಬಿತ್ತು ಬೀಳ
ಸಮ್ಯಗ್ ಜ್ಞಾನದಿಂದ ತಿಳಿದವನೆ ವಿರಳ ೧

ತನ್ನ ತಾ ತಿಳಿದವಗೇನು ಭಿನ್ನಭೇದವಿಲ್ಲ
ಉನ್ಮನವಾಗಿ ಪೂರ್ಣ ತಿಳಿದವನೆ ಬಲ್ಲ
ಧನ್ಯವಾದ ಮಹಿಮರಿನ್ನು ಮನಿಮನಿಗೆ ಇಲ್ಲ
ಕಣ್ಣಾರೆ ಕಾಣುತಿಹ್ಯ ಗುಪ್ತಗುಹ್ಯವೆಲ್ಲ ೨

ತಿಳುಹದೋರಿಕೊಟ್ಟ ಗುರು ಎನ್ನೊಳಗೆ ಪೂರ್ಣ
ಹೊಳೆಹುತಿಹ್ಯಾನಂದ ಘನಸದ್ಗುರು ಪೂರ್ಣ
ಥಳಥಳಿಸುತಿಹದು ಸದ್ಗತಿ ಸಾಧನ
ಕಳೆದ ಮಹಿಪತಿ ನೋಡಿ ಜನನ ಮರಣ ೩

## ೨೪೧

ತಿಳಿದು ನೋಡೊ ನಿನ್ನೊಳಗೆ ನಿಜಬಣ್ಣ
ಬೆಳಗಿನೊಳು ಬೆಳಗುದೋರುತಿಹ್ಯ ಜಗಜೀವನ ಧ್ರುವ

ಒಳಗೆ ವಿಷ ಮ್ಯಾಲೆ ವೇಷ ಇಳೆಯೊಳ್ಯಾಕೆ ಸೋಗು
ಕಳೆದು ಕೋಪ ಅಳಿದು ತಾಪ ತಿಳಿದು ನಿಜವಾಗು ೧

ಕೈಯೊಳು ಜಪ ಮೈಯೊಳು ಕೋಪ ಬಾಯೊಳಗ್ಯಾಕ ಮಂತ್ರ
ದೇಹ್ಯೊಳಗಿಹ್ಯ ಸೋಹ್ಯವ ತಿಳಿದು ಧ್ಯಾಯಿಸೊ ಸೂತ್ರಾಂತ್ರಾ ೨

ಮುಸುಕಿನೊಳು ಹಸಕವಿಟ್ಟು ಠಸಕ ದೋರಬ್ಯಾಡೊ
ಉಸುರಿನೊಳು ಹಸನಗೊಂಡು ಮೀಸಲು ಮನಮಾಡೊ ೩

ಹಿಡಿದು ಜನ ಪಡೆದಗುಣ ಒಡನೆ ಕೂಡೊ ಸುಪಥ
ಹಿಡಿದು ಗುರುಪಾದ ಮಹಿಪತಿ ನೋಡೊ ಸ್ವಹಿತ ೪

## ೨೪೨

ತಿಳಿಯೊ ಪ್ರಾಣಿ ತನು ಮನದೊಳಗಿಹ್ಯ
ನಿಜ ವಸ್ತುನೆ ಮುಂದುಗಾಣಿ
ಥಳ ಥಳ ಗುಡುವುತ ಹೊಳೆವುತಲ್ಯದೆ ಬಲಿಯೊ
ಸದ್ಗುರು ಸುಪ್ರಾರ್ಥನೆ ಧ್ರುವ

ಹಿಂದೆ ನಿಂದೆಂಬುದು ತಿಳಿಯಿತೆಂಬುದು
ಜನ್ಮದ ಸಂದೇಹಗಳೀತೆ
ಮುಂದೆ ಸಾಧ್ಯವೆಂಬುದು ಹೊಳೆಯಿತೆ
ಒಂದಾದರ ಮಾತಿಗಿಳಿಯಿತೆ

ಹಿಂದೆ ಮುಂದಿನದು ಕತ್ತಲಳಿಯಿತೆ ನಿಂದ
ನಿಜಘನ ನೆಲೆಗೊಳ್ಳಿತೆ
ಅಂದಿಗಿಂದಿಗೆ ಬಂದ್ಹೋಳಿಯುತೊಳಿಯಿತೆ
ಹೊಂದಿತೆ ಅರಿಯದಿಹುದು ಒಳಿತೆ ೧

ನಿನ್ನೊಳು ನೀ ನಿಜ ತಿಳಿಯದೆ ಖೂನ ಇನ್ನೊಬ್ಬರಿಗ್ಹೇಳುವುದೇನ
ಕನ್ನಡಿಯೊಳು ಕಾಂಬುವ ಕಾಂಚನ ಸನ್ನಿದಾಗುವದೆ ಪೂರ್ಣ
ಭಿನ್ನಭೇದವು ಹೋಗದೆ ಅನುಮಾನ ಚೆನ್ನಾಗ್ಯಾಗುವದೆ ಜ್ಞಾನ
ಧನ್ಯಗೈಸುವ ಸದ್ಗುರು ಕರುಣ ಮನ್ನಿಸಿ ಪಡಕೊ ನಿಧಾನ ೨

ಖೂನತಿಳಿಯಲಿಕ್ಹಿಡಿಯೊ ಶರಣ ಮೌನ
ಮುಗ್ಧದಿ ಗುರುಪಾದ ಈಗ
ಏನೆಂದು ತಾ ತಿಳಿಯುವದು ಆಗ ಸ್ವಾನುಭವದ ಸ್ವಸುಖಭೋಗ
ಅನುದಿನ ಹೊಳೆಯುತಲಿದೆ ಸುಯೋಗ
ಅಣುರೇಣುದೊಳಗ ತಾ ಬ್ಯಾಗ
ದೀನ ಮಹಿಪತಿಗದೆ ಒಳಹೊರಗೆ ಘನ ಭಾಸುತಲ್ಯದೆ ಆವಾಗ ೩

## ೨೪೩

ತೊಡಕ ಹರವ ಮಾಡಿಕೊಳ್ಳಿರೊ ಹುಟ್ಟಿ ಬಾಹ್ವ ಮನುಜರೆಲ್ಲ ಧ್ರುವ

ನಾನು ನನ್ನದೆಂದು ಜ್ಞಾನಹೀನನಾಗಿ ಬಾಳುತಿಹ್ಯ
ಗಾಣ-ದೆತ್ತಿನಂತೆ ಮುಂದೆಗಾಣದಿಹ್ಯ ಭ್ರಮೆಯದ ೧

ಜೀವ ಶಿವ ದಾವದೆಂದು ಠಾವಿಕಿಲ್ಲ ದಿಹ್ಯದಾಗಿ
ನಾವು ನೀವು ಎಂದು ಹ್ಯಾವ ಹೊಮ್ಮಿ ಹೊಡೆದಾಡುವ ೨

ಸಂಚಿತ ಪ್ರಾರಬ್ಧ ಕ್ರಿಯಮಾಣದೊಳು ಸಿಲ್ಕಿ ಪ್ರ
ಪಂಚ ಪರಮಾರ್ಥ ದಾವದೆಂದು ಮುಂಚೆ ತಿಳಿಯದ ೩

ತನವು ತಾನೆಂದು ಘನವು ಮರೆದು ದಣಿದು ತಿರುಗುತಿಹ್ಯ
ಮನದ ಮಾಯದೊಳು ಸಿಲ್ಕಿ ತನಗೆ ತಾಂ ತಿಳಿಯದೆ ೪

ತೊಡಕು ಹರವ ಮಾಡಿಗೊಳ್ಳಿ ಪಡದು ಜ್ಞಾನಭಕ್ತಿಯಿಂದ
ಮೂಢ ಮಹಿಪತಿಯನ್ನೊಡೆಯ ಬಿಡದೆ ನೆಲೆಗೊಳ್ಳುವ್ಹಾಂಗೆ ೫

## ೨೪೪

ದಾವಗಿಲ್ಲ ಖೂನ ತನ್ನೊಳಗ
ಅವಗೆಲ್ಲಿಯ ಜ್ಞಾನ ಜಗದೊಳಗ ಧ್ರುವ

ತಿಳಿದುಕೊಳ್ಳದವ ಆತ್ಮವಿಚಾರ
ಕಳೆದು ಕೊಂಡವನೆ ಹಿತ ಅಪಾರ
ಒಳಗದಾಂವ ನೋಡ ನಿರಂತರ
ಹೊಳಿಯದವಗ ಎಂದು ವಸ್ತುದಾಧಾರ ೧

ದಾವಗಿಲ್ಲ ಖೂನ ಗುರುಮುಖ
ಅವನೆ ತಾಳಿ ಬಾಹ್ವ ಜನ್ಮ ಅನೇಕ
ಭಾವಿಸದು ದಾವಗಿನ್ನ ವಿವೇಕ
ಅವಗೆಲ್ಲಿಹದು ನೋಡಿ ಸ್ವಸುಖ ೨

ಖೂನ ತನ್ನ ತಿಳಿವದು ತ್ವರಿತ
ಅನುಭವಕಿದೆ ತಾಮ ಸನ್ಮತ
ದೀನ ಮಹಿಪತಿಗೆ ಸ್ವಹಿತ
ಭಾನು ಕೋಟೆ ತೇಜನಾದ ಉದಿತ ೩

## ೨೪೫

ದಾವ ಪಡೆದ ಸ್ವಹಿತ ಅವನೆ ಉಪಾಧಿ ರಹಿತ ಧ್ರುವ

ಆಶ್ರೈಸಿಹ್ಯ ದಾವನು ಶ್ರಯಧೇನು
ನಾಸ್ತಿಕ್ಯವಗೆಲ್ಲಿಹುದು ತಾನು ೧

ಇಷ್ಟದಾವನು ಸುರತರುವಿನ ಬಲಿ(ಳಿ?) ಯು
ಅವಗೆಲ್ಲಿಹುದುದರದ ಕಳವಳಿಯು ೨

ಸುರನದಿಯಲ್ಲಿ ದಾವನ ಸಹವಾಸ
ಧರೆಯೊಳಗವಗೆಲ್ಲಿಹ ಮಹಾ ದೋಷ ೩

ರವಿ ಪ್ರಭೆಯೊಳು ದಾವನಿಹನು ಕೂಡಿ
ಅವಗೆಗೆಲ್ಲಿಯ ಕಗ್ಗತ್ತಲೆ ನೋಡಿ ೪

ದಾವ ಮಹಿಪತಿ ಗುರು ಪಾದ್ಹೊಂದಿಹ್ಯ
ಅವಗೆಲ್ಲಿಹದು ತಾ ಭವಬಂಧ ೫

## ೨೪೬

ದೇಹದ ಒಳಗಿಹ್ಯ ದೇವರ ತಿಳಿದಿಹ ಆತನೆ ದೇಹಾತೀತನು ಮಾ ೧

ತನ್ನೊಳು ಪರಬ್ರಹ್ಮ ವಸ್ತುವನರಿದಿಹ
ಆತನೇ ಶ್ರೀಹರಿಭಕ್ತನು ಮಾ ೨

ಅಂಗದೊಳಗೆ ಪ್ರಾಣ ಲಿಂಗವು ತಿಳಿದಿಹ ಆತನೆ
ಲಿಂಗವಂತನು ಮಾ ೩

ಷಟಸ್ಥಳ ಶೋಧಿಸಿ ಸಾಧಿಸಿ ತಿಳದಿಹ ಆತನೆ ಶೀಲವಂತನು ಮಾ ೪

ಶುದ್ಧಾತ್ಮ ಶಿವತತ್ವ ಸೂತ್ರವ ತಿಳದಿಹ ಆತನೆ ಶಿವಭಕ್ತನು ಮಾ ೫

ಷಡಚಕ್ರ ಕಳೆಗಳ ನೆಲೆಗಳ ತಿಳದಿಹ ಆತನೆ
ದೃಢ ನಿರ್ವಾಣೆಯು ಮಾ ೬

ಬ್ರಹ್ಮಾಂಡ ಧುಮುಕಿ ಪಿಂಡಾಂಡ ತಿಳದಿಹ
ಆತನೆ ಮಹಾಪಂಡಿತನು ಮಾ ೭

ಪರಾಪಶ್ಯಂತಿ ಮಧ್ಯಮ ವೈಖರಿ ತಿಳದಿಹ
ಆತನೆ ಆಚಾರ ನಿಷ್ಠನು ಮಾ ೮

ಐದು ತತ್ವದ ಗತಿಗಳ ತಿಳದಿಹ ಆತನೆ ಮಹಾ ವೈದಿಕನು ಮಾ ೯

ಪಂಚ ಮುದ್ರೆಯ ಸ್ಥಾನವು ತಿಳದಿಹ ಆತನೆ ಸುಬ್ರಾಹ್ಮಣನು ಮಾ ೧೦

ಅರುವಿನ ಖೂನ ಮರೆವವು ತಿಳದಿಹ ಆತನೆ
ಗುರುವೆಂದರುವದು ಮಾ ೧೧

ಹಸುವಿ ನಿದ್ರಿಗಳು ಶಮೆದಮೆವಾಗಿಹ
ಆತನೆ ಸಿದ್ಧ ಶರಣನು ಮಾ ೧೨

ನೋಡುವ ನೋಟವು ಪರುಷವು ಆಗಿಹ
ಆತನೆ ಮಹಾ ಸತ್ಪುರುಷನು ಮಾಟ ೧೩

ಕರದಲಿ ಪರಬ್ರಹ್ಮ ನೆಲೆಯನು ತಿಳದಿಹ
ಆತನೆ ವರಗುರು ಮೂರ್ತಿಯು ಮಾ ೧೪

ಉತ್ಪತ್ತಿ ಸ್ಥಿತಿಲಯ ತಾರಿಸುತಿಹನು ಆತನೆ.
ಅವತಾರ ಮಹಿಮನು ಮಾ ೧೫

ನಾದ ಬಿಂದು ಕಳೆ ಸಾಧಿಸಿದೋರವ
ಆತನೆ ಸಾಧು ಸಂತನು ಮಾ ೧೬

ಸದ್ಗತಿ ಮುಕ್ತಿಯು ಸಾಧಿಸಿದೋರುವ ಆತನೆ
ಸದ್ಗುರು ಮೂರ್ತಿಯು ಮಾ ೧೭

ಈಸುಪರಿಯಲಿಹ ಸರಿಗೊಪ್ಪು ತಿಹ್ಯ ಆತನೆ
ಮಹಾ ಜ್ಞಾನಿಪುರುಷನು ಮಾ ೧೮

ಮಿಕ್ಕ ಲೋಕಕವಿನ್ನು ಹುರುಳಿಲ್ಲದಿಹರು
ಮರುಳಮಂಕ ಮನುಜರು ಮಾ ೧೯

ಗುರುವಿಗೆ ನರನಲ್ಲವೆಂದು ತಾ ತಿಳದಿಹ
ಆತನೆ ಶ್ರೀ ಗುರುದಾಸನು ಮಾ ೨೦

ಭಾಸ್ಕರಮೂರ್ತಿ ಶ್ರೀಪಾದವು ತಿಳದಿಹ
ಮಹಿಪತಿ ಭವನಾಶವಾಯಿತು ಮಾ ೨೧

## ೨೪೭

ದ್ವೈತ ಅದ್ವೈತೆಂದು ಹೊಡದಾಡದಿರೊ ಪ್ರಾಣಿ
ಚೇತಿಸಿ ಬ್ಯಾರಿಹ ವಸ್ತುಗಾಣಿ ಧ್ರುವ

ದ್ವೈತ ಎನಲಿಕ್ಕೆ ತಾಂ ಆದೆವೆ ಅದ್ವೈತ ಅ-
ದ್ವೈತ ಎನಲಿಕ್ಕೆ ಅದೆನೆ ತಾಂ ದ್ವೈತ ೧

ಹಿಂದು ಮುಂದಾಗಿ ಆಡಿಸುತಿಹ್ಯ ನಿಜಖೂನ
ಎಂದಿಗಾದರು ತಿಳಿಯಗುಡದು ಪೂರ್ಣ ೨

ಅತಿಸೂಕ್ಷ್ಮ ತಿಳುವಾದರಲ್ಲೆ ಬಿದ್ದದ ಮಲಕು
ನೇತಿ ನೇತೆಂದು ಸಾರುತಿದೆ ಶ್ರುತಿ ಇದಕೆ ತಿಳಿಕೊ ೩

ದ್ವೈತ ಎಂದವನೆ ತಾಂ ಪರಮ ವೈಷ್ಣವನಲ್ಲ, ಅ
ದ್ವೈತನೆಂದವನೆ ತಾಮ ಪರಮ ಸ್ಮಾರ್ತನಲ್ಲ ೪

ಸ್ಮಾರ್ತ ವೈಷ್ಣವ ಮತ ಗುರು ಮಧ್ವಮುನಿಬಲ್ಲ
ಅರ್ತು ಸ್ಥಾಪಿಸುವದು ಮನುಜಗಲ್ಲ ೫

ಮೂರುವರಿ ಮೊಳದ ದೇಹದ ಶುದ್ಧಿ ನಿನಗಿಲ್ಲ
ದೋರುವರೆ ತರ್ಕಸ್ಯಾಡುವ ಸೊಲ್ಲ ೬

ದ್ವೈತ ಅದ್ವೈತಕ ಬ್ಯಾರಿಹ ಗುರುಗುಟ್ಟು
ಚಿತ್ತ ಶುದ್ದಾಗಿ ಮಹಿಪತಿಯ ಮುಟ್ಟು ೭

## ೨೪೮

ಧನಲಂಪಟಗೆ ಎಲ್ಲಿಹುದು ಗುರುಕೃಪೆಯ ಜ್ಞಾನ
ತನುಲಂಪಟಗೆ ಎಲ್ಲಿಹುದು ತನ್ನೊಳು ಖೂನ ಧ್ರುವ

ವಿಷಯಲಂಪಟಗೆ ಎಲ್ಲಿಹುದು ತಾ ವಿರಕ್ತಿಯು
ದೆಸೆಗೆಟ್ಟವಗೆ ಎಲ್ಲಿಹುದು ಯುಕ್ತಿಯು
ಮುಸುಕಿದ ಮಾಯದವಗೆಲ್ಲಿಹುದು ಮುಕ್ತಿಯು
ಹುಸಿಯಾಡುವವಗೆಲ್ಲಿಹುದು ಋಷಿಭಕ್ತಿಯು ೧

ಮರುಳಗುಂಟೆ ಅರಿವು ರಾಜಸನ್ಮಾನದ
ತರಳಗುಂಟೆ ಭಯವು ಘಟಸರ್ಪದ
ಎರಳೆಗುಂಟೆ ಖೂನ ಮೃಗಜಲವೆಂಬುವದ
ಸೋರೆಗುಂಟೆ ಮಾತು ಚಾತುರ್ಯದ ೨

ಕನಸು ಕಾಂಬವಗೆ ಎಲ್ಲಿಹುದು ತಾನಿಹ ಸ್ಥಾನ
ಮನದಿಚ್ಛೆಯಿದ್ದವಗೆ ಎಲ್ಲಿ ಧ್ಯಾನ
ದೀನಮಹಿಪತಿ ಸ್ವಾಮಿ ಕಾಣದವಗೆಲ್ಲಿ ಘನ
ಅನುಭವಿಸಿಕೊಳದೆ ಜನ್ಮಕೆ ಬಂದಿದೇನ ೩

## ೨೪೯

ನಮ್ಮ ನಿಮ್ಮಗೊಂದಾದ ಮಾತು
ಸುಮ್ಮನವೆ ಕೇಳೊ ನಿವಾಂತು
ಬ್ರಹ್ಮಾದಿಗಳು ಹೋದರು ಸೋತು
ಒಮ್ಮನಾದರೆ ತಿಳಿವದಂತು ೧

ಬಿಟ್ಟು ಕೊಡೊ ನಿನ್ನ ಬಾಜಿ
ಗಂಟುಹಾಕಿಹೆ ಬಲು ಗಜಿಬಿಜಿ
ಮುಟ್ಟಲಾರದು ಮೊನೆ ಸಣ್ಣ ಸೂಜಿ
ಗುಟ್ಟು ಹೇಳೊ ಸದ್ಗುರು ದೇವಾಜಿ ೨

ನಮ್ಮ ನಿಮ್ಮಳಗ್ಯಾಕೆ ತೊಡಕು
ಇಮ್ಮನಾದರೆ ಹುಟ್ಟಿತು ಒಡಕು
ಹಮ್ಮು ಎನ್ನೊಳಗಿಲ್ಲ ನೀ ಹುಡುಕು
ಸುಮ್ಮನ್ಯಾಕಿದು ಶ್ರಮೆಯ ತಿಡುಕು ೩

ಗುರು ಹೇಳಿದ ಮಾತಿಗೆ ಮುಟ್ಟಿ
ತೋರಿ ಕೊಡಬೇಕು ನೀನೆ ಗಟ್ಟಿ
ಅರಿತ ಮ್ಯಾಲೆ ಮಿಸುಕನು ತುಟ್ಟಿ
ಖರೆ ಮಾಡಿಕೊ ಜಗಜಟ್ಟಿ ೪

ಒಂದು ಮಾತು ಎಂಬುದು ಬಲ್ಲಿ
ಸಂದ ಸಂದೇಹ್ಯಾರಿಸೊ ನೀ ಇಲ್ಲಿ
ಕಂದ ಮಹಿಪತಿ ಮನದಲ್ಲಿ
ಚಂದವಾಗಿರೊ ನೀನೆವೆ ಅಲ್ಲಿ ೫

## ೨೫೦

ನಿನ್ನ ನೀ ತಿಳಿದು ನೋಡೊ ಪ್ರಾಣಿ ಧ್ರುವ

ನಿನ್ನ ನೀ ತಿಳಿಯೊ ನೀ
ಭಿನ್ನಬೇದವಳಿದು
ಚೆನ್ನಾಗ್ಯನುಭವದಲಿ ಉನ್ಮನವಾಗಿ ೧

ನಾನಾರು ಎಂದು ನೀ
ಖೂನ ತಿಳಿದು ನೋಡೊ
ಘನ ಗುರು ಕೃಪೆಯಿಂದಲಿ ತನುವಿನೊಳು ೨

ಎಲ್ಲಿಂದ ಬಂದ್ಯೊ ನೀ
ಎಲ್ಲಿಗ್ಹೋಗುವಿ ಮುಂದೆ
ಇಲ್ಲೆವೇ ತಿಳಿದು ನೋಡೊ ಸುಲಭದಿಂದ ೩

ಬಂದೆ ನಾ ತಂದೆ ನಾ
ಬಂದು ಫಳಿಸಿದೆ ನಾ
ಹೊಂದಿಕಿ ಹೊಲಬು ನೋಡೊ ಸಂಧಿಸಿ ಘನ ೪

ನಡೆದೆ ನಾ ನುಡಿದೆ ನಾ
ಹಿಡಿದೆ ನಾ ಪಡೆದೆ ನಾ
ಒಡನೆ ನಿನ್ನೊಳು ನೀ ನೋಡೊ ಪಿಡಿದು ನಿಜ ೫

ತಾನೇನು ತನುವೇನು
ತನ್ನೊಳಗಿಹುದೇನು
ಮನಮುಟ್ಟಿ ಘನವ ನೋಡೊ ಚಿನ್ನುಮಯನ ೬

ಏನುಂಟು ಏನಿಲ್ಲ
ಅನಿಮಿಷದಲಿ ನೋಡೊ
ಘನಕ ಘನವ ಬೆರೆದು ಸನ್ಮತವಾಗಿ ೭

ಮರ ಹುಟ್ಟಿ ಮರಬಿದ್ದ
ತೆರನಾಗದಿರೊ ನೀನು
ಎರಗೊ ಶ್ರೀಗುರುಪಾದಕ ಕರಿಗಿ ಮನ ೮

ಎಡಬಲ ನೋಡದೆ
ಪಿಡಿದು ಸದ್ಗುರು ಪಾದ
ಕೂಡೊ ಮಹಿಪತಿ ಬೋಧ ನೋಡಿ ನಿನ್ನೊಳು ೯

## ೨೫೧

ನಿನ್ನ ನೀ ತಿಳಿಯೋ ಮೂಢ ಭೇದಿಸಿ ಗೂಢ
ಧನ್ಯಗೈಸುವ ಪ್ರೌಢ ಸದ್ಗುರು ದೃಢ ಧ್ರುವ

ಬಂದು ಬಂದು ಹೋಪಾದೇನ ಸಾಧಿಸಿದಲ್ಲದೆ ಖೂನ
ಸಂಧಿಸಿ ಬೀಳುವುದು ಹೀನ ಜನ್ಮಕೆ ನಾನಾ
ಹೊಂದು ಮನವೆ ನೀ ಪೂರ್ಣ ಸದ್ಗತಿ ಸುಖ ಸಾಧನ
ಎಂದೆಂದಿಗಾದ ನಿಧಾನ ಸಾಂದ್ರ ಸದ್ಘನ ೧

ಮುತ್ತಿನಂಥ ಸುಜನ್ಮ ವ್ಯರ್ಥಗಳೆವುದಧರ್ಮ
ಹತ್ತಿಲ್ಯಾದಾನಂದೋ ಬ್ರಹ್ಮ ತಿಳಿಯೋ ನೀವರ್ಮ
ಚೆನ್ನೊಬ್ಬಳೆ ಮಾಡೊಮ್ಮ ಕಿತ್ತಿಬಿಸ್ಯಾಡೊ ದುಷ್ಕರ್ಮ
ಎತ್ತ ನೋಡಲು ಸಂಭ್ರಮ ಸದ್ಗುರು ಧರ್ಮ ೨

ತನ್ನ ತಿಳಿದು ನೋಡೊ ಭಿನ್ನ ಭೇದವೆಂಬುದೀಡ್ಯಾಡೊ
ಸನ್ಮತ ಸುಖ ಸೂರ್ಯಾಡೊ ಅನುಮಾನ ಬಿಡೊ
ನಿನ್ನೊಳೂ ಮಹಿಪತಿ ನೋಡೊ ಅನುಭವನೇ ಕೊಂಡಾಡೊ
ಉನ್ಮತವಾಗಿ ನೀ ಕೂಡೊ ಘನ ಬೆರೆದಾಡೊ ೩

## ೨೫೨

ನಿನ್ನೊಳು ನೀನೆ ನಿನ್ನೊಳು ನೀನೆ
ನಿನ್ನೊಳು ನೀನೆ ನೋಡಿ ಪೂರ್ಣ
ಚನ್ನಾಗೇನಾರೆ ಮಾಡು ಪ್ರಾಣಿ ಧ್ರುವ

ಕಾಯಕ ವಾಚಕ ಮಾನಸದಿಂದ
ಸ್ಥಾಯಿಕನಾಗಿ ನೋಡಿ ಸ್ಥಾಯಿಕನಾಗಿ ನೋಡಿ
ಮಾಯಿಕಗುಣದೋರುದು ಬಿಟ್ಟು
ನಾಯಕನಾಗಿ ಕುಡು ಪ್ರಾಣಿ ೧

ಸೆರಗ ಬಿಟ್ಟು ಮರಗಬ್ಯಾಡ
ಕರಗಿ ಮನ ಕೂರು ಕರಗಿ ಮನ ಕೂಡು
ಎರಗಿ ಗುರು ಪಾದಕ್ಕಿನ್ನು
ತಿರುಗಿ ನಿನ್ನ ನೋಡು ಪ್ರಾಣಿ ೨

ಮರೆವು ಮಾಯ ಮುಸುಕ ಬಿಟ್ಟು
ಅರುವಿನೊಳು ಕೂಡು ಅರುವಿನೊಳು ಕೂಡು
ತರಳ ಮಹಿಪತಿ ನಿನ್ನ
ಗುರುತು ನಿಜ ಮಾಡು ಪ್ರಾಣಿ ೩

## ೨೫೩

ನುಡಿ ಜ್ಞಾನದ ಮಾತು ಒಡನೆ ನಂಬುದ್ದೇತು
ನಡಿ ಜ್ಞಾನದ ಮಾತು ಕಡೆಗಾಣಿಸಿತು ಧ್ರುವ

ನುಡಿಯ ಒಡಲೊಳಗಿಟ್ಟು ನಡಿಯೊಳಗ ನುಡಿದೋರಿ
ಕೊಡುವರಿಗ್ಯದೆ ಘನಮಹಿಮೆ ನೋಡಿ
ನುಡಿದಂತೆ ನಡೆದರೆ ನಡೆನುಡಿ ಆಗುವದು
ನುಡಿ ಅಡಿ ತೋರುವರಿಗೆಲ್ಲಿ ನಡೆನುಡಿ ೧

ನಡೆಯೊಳಗ ನುಡಿಯದೆ ಪಡೆದುಕೊಂಬವ ಬಲ್ಲ
ಒಡನೆ ಸದ್ಗುರು ದಯದೊಲವಿಲಿದ್ದು
ನಡೆನುಡಿ ನಿಜವಾಗಲರಿಯದೆ ನಾಡೊಳಗೆ
ಅಡಿಗಡಿಗೆ ಹೇಳ್ಯಾಡು ಮಾತೆ ಬರದು ೨

ನುಡಿವುದೆ ವೇದಾಂತ ನಡೆವುದೆ ಸಿದ್ಧಾಂತ
ನಡೆನುಡಿಗೆ ಸಾಕ್ಷ ಶ್ರೀದೇವದತ್ತ
ನುಡಿಗೆ ನಿಜ ನೆಲೆದೋರಿ ನಡಿಗೆ ನಿಲುಕಡೆ ಮಾಡಿ
ಕೊಡುವನೊಬ್ಬನೆ ಮಹಿಪತಿ ಗುರು ಸಮರ್ಥ ೩

## ೨೫೪

ನುಡಿದಂತೆ ನಡಿಯಬೇಕು
ಪಿಡಿದು ಸುಪಥ ಧ್ರುವ

ಸಾಧಿಸಿ ತಿಳಿಯದೆ ತನ್ನೊಳು ಖೂನ
ಬೋಧಿಸಿ ಹೇಳುದು ಇನ್ನೊಬ್ಬರಿಗೇನ
ಅದಿತತ್ವದ ಗತಿಯ ನಿಜಸ್ಥಾನ
ಭೇದಿಸುವುದು ಸದ್ಗುರು ಕೃಪೆ ಜ್ಞಾನ ೧

ನಡೆನುಡಿ ಒಂದಾದರೆ ಬಲು ಮೇಲು
ದೃಢಭಕ್ತಿಗೆ ಒಂದಿದೆ ತಾ ಕೀಲು
ಪಡೆವದು ಮನಮಾಡಿ ಮೀಸಲು
ಬಿಡದೆ ಮಾಡುವ ಗುರು ದಯ ಕೃಪಾಳು ೨

ಹೇಳಿಕಿಗಿದೆ ಬಿದ್ದದೆ ಬಲುಜನ
ತಿಳುಹಿಸಿಕೊಡಲಿಕ್ಕಿಲ್ಲದೆ ಜ್ಞಾನ
ತಿಳಿವು ತಿಳಿದರೆ ತನ್ನೊಳು ನಿಧಾನ
ಹೊಳವ ಮಹಿಪತಿ ಗುರು ನಿಜ ಚಿದ್ಘನ ೩

## ೨೫೫

ಪ್ರಾಣಿ ದಿನ ಮೋಸಗಳೆಯಬ್ಯಾಡ ಧ್ರುವ

ವಂದಿಸದೆ ಸಾಧು ಸಜ್ಜನರ ಶ್ರೀಪಾದವನು
ಬರುದೆ ಶೋಧವಿಯ ನೀ ಮಾಡಬ್ಯಾಡ
ಅರಿಯದ ಧಮರಸಂಗ ಕೂಡಬ್ಯಾಡ
ಪರನಿಂದೆ ದೂಷಣೆಯ ಮಾಡಬ್ಯಾಡ
ಗುರುಹಿರಿಯರ ಮಾತು ಮೀರಬ್ಯಾಡ ೧

ಏನೆಂದು ತಿಳಿಯದೆ ಜ್ಞಾನಿಗಳ ಮಹಿಮೆಯನು
ಅಜ್ಞಾನತನದಲಿ ಉಳಬ್ಯಾಡ
ಹೀನ ಗುಣದಲಿ ನೀ ಬಾಳಬ್ಯಾಡ
ಅನ್ಯಾಯತನವೆ ನೀ ಕೇಳಬ್ಯಾಡ
ನಿನ್ನ ಸ್ತುತಿ ನೀನೆವೆ ಹೇಳಬ್ಯಾಡ ೨

ನಿನ್ನೊಳು ನಿನ್ನ ಸ್ಥಿತಿಗಳನು ತಿಳಿಯದೆ
ಮುನ್ನಿನವರ ಕುಂದ ನೀ ನೋಡಬ್ಯಾಡ
ನಾನೆ ದೊಡ್ಡವನೆಂದು ಆಡಬ್ಯಾಡ
ಮಹಿಪತಿ ನೀ ದಗಿಯ ಬೀಳಬ್ಯಾಡ
ಗುರು ಆಜ್ಞೆಯಿಂದ ಕಡಿಗ್ಯಾಗಬ್ಯಾಡ ಪ್ರಾಣಿ ೩

## ೨೫೬

ಬರುದೆ ಭ್ರಮೆಯಗೊಂಡ್ಯೊ ಮರುಳ ಮನುಜ ನೀನು ಧ್ರುವ

ಎರವ್ಹಿನ ಮನೆಯೊಳು ಮರಹು ಮರೆಯಗೊಂಡು
ಗರವು ಹಿಡಿದು ನಿನ್ನ ಕುರುಹು ತಿಳಿಯಲಿಲ್ಲ
ಹರೆದು ಭ್ರಾಂತಿಗೆ ಬಿದ್ದು ಸೊರಗಿ ದಣಿದೆಲ್ಲ ೧

ಏನು ಮರುಳಗೊಂಡ್ಯೊ ಹೀನಯೋನಿಯ ಮುಖಕೆ
ಕಾನನದೊಳು ಪೊಕ್ಕು ಖೂನ ತಿಳಿಯದೆ ನಿನ್ನ
ಜನುಮಜನುಮ ಬಂದ್ಯೊ ಜ್ಞಾನಶೂನ್ಯದಲಿ ೨

ನಾನು ನನ್ನದು ಎಂದು ಏನು ಗಳಿಸಿಕೊಂಡ್ಯೊ
ಸ್ವಾನುಭವದ ಸುಖ ಅನುಭವಿಸದೆ ಹೋಗಿ
ಸ್ವಾನ ಸೂಕರಯೋನಿ ಮುಖಸೋಸಿದೆಲ್ಲ ೩

ಹೊನ್ನು ಹೆಣ್ಣಿನ ಸವಿಯು ಬಣ್ಣಿಸಿ ನೀ ಬಯಸಿದಲ್ಲ
ಮಣ್ಣೇ ಮಾಣಿಕವೆಂದು ದಣ್ಣನೆ ದಣುವರೆ
ಕಣ್ಣಗೆಟ್ಟರೆ ಬ್ಯಾಡೊ ತನ್ನೊಳರಿಯದೆ ೪

ಮುತ್ತಿನಂಥ ಜನುಮ ವ್ಯರ್ಥಗಳಿಯಬ್ಯಾಡ
ಅರ್ತು ಸದ್ಗುರು ಪಾದ ಬೆರ್ತು ಮಹಿಪತಿ ಪೂರ್ಣ
ಸಾರ್ಥಕ ಮಾಡಿಕೊಳ್ಳೊ ಗುರುತುವರಿತು ನೀ ೫

## ೨೫೭

ಬಲಗೊಳ್ಳಿರೊ ಭಾವ ಭಕ್ತಿಯಿಂದ ನೆಲೆಯಗೊಂಡು
ಮೂಲವಿಡಿದು ನಿಜಮೂಲ ಮೂರ್ತಿಯ ಬಲಗೊಳ್ಳಿ ೧

ಏರಿ ನೋಡಿ ಅರುಚಕ್ರದಾಟಿ ತೋರುತಿಹ್ಯ
ಪೂರ್ಣಾನಂದ ಶ್ರೀ ಗುರುಮೂರ್ತಿಯ ಬಲಗೊಳ್ಳಿ ೨

ಸೆರಗವಿಡಿದು ನೋಡಿ ಕರಗಿಮನ ಅರವಿನೊಳು
ಬೆರೆದು ಕೂಡಿ ಹರಿ ಪರಬ್ರಹ್ಮನ ಬಲಗೊಳ್ಳಿ ೩

ಆಸಿಯನೆ ಜರೆದು ನಿರಾಸಿಯಲ್ಲಿ ಧ್ಯಾಸವಿಡಿದು
ಲೇಸಾಗಿ ಕೂಡಿರೊ ವಾಸುದೇವನ ಬಲಗೊಳ್ಳಿ ೪

ಮೂರು ಗುಣಕೆ ಮೀರಿ ತೋರಿತಿಹ್ಯ ನಿರ್ಗುಣನ
ನೆರೆದು ಕೂಡಿ ನಿಜ ನಿರುಪಮನ ಬಲಗೊಳ್ಳಿ ೫

ಸಹಸ್ರದಳಮಂಟಪದೊಳು ಸೋಹ್ಯವರಿತು
ಸಾಯಸದಿಂದ ಶ್ರೀಹರಿಯ ಬಲಗೊಳ್ಳಿ ೬

ತಾನೆ ತಾನಾಗಿಹ್ಯ ತನುವಿನೊಳು ಆನಂದೋಬ್ರಹ್ಮ–
ಜ್ಞಾನದಿಂದ ನೋಡಿ ಜ್ಞಾನಸಾಗರನ ಬಲಗೊಳ್ಳಿ ೭

ಮನವಿಡಿದು ಮಾಡಿರೊ ಧ್ಯಾನ ಮೌನ ಅನುದಿನ
ಅನುಕೂಲಾಗುವ ಅನಂತ ಗುಣನ ಬಲಗೊಳ್ಳಿ ೮

ಕಣ್ದೆರೆದು ನೋಡಿ ತನ್ನೊಳಗೆ ತಾನೆ ತಿಳಿದು
ತನುಮನರ್ಪಿಸಿ ಗುರುಮೂರ್ತಿಯ ಬಲಗೊಳ್ಳಿ ೯

ಗುರು ಕರುಣದೊಲವಿಂದ ಪಡೆದು ಪೂರ್ಣ
ಹರಿಯು ಸುಖ ಸೂರ್‍ಯಾಡಿ ಪರಮ ಅನಂದ ಸುಪಥ ೧೦

ಅರ್ತುಕೂಡಿದ ನೋಡಿ ಅರ್ತಿಯಿಂದ ಮಹಿಪತಿಯ
ಬೆರ್ತುಕೂಡಿದ ಮನ ಕರ್ತುಗುರುವಿನ ಬಲಗೊಳ್ಳಿ ೧೧

## ೨೫೮

ಬಿಡೋ ಬಿಡು ಮನುಜ ಭ್ರಾಂತಿಯ
ಪಡಕೊ ನಿನ್ನೊಳು ತಿಳಿಯುವ್ಹಾಂಗ ಸದ್ಗುರು ಭಕ್ತಿಯ ಧ್ರುವ

ಬುಡದಲಿ ಫಲವಿರಲಿಕ್ಕೆ ಅಡರುವದ್ಯಾಕೊ ತುದಿಗೆ
ಪಡಬ್ಯಾಡೋ ನಾನಾ ಸಾಯಾಸ ತೊಡಕಿ ಬೀಳುವ ೧

ಕಾಶಿಗೆ ಹೋಗಬೇಕೆಂದು ಕಾಸಿನ ಚಾಲವರಿಕ್ಯಾಕ
ಆಸಿ ಅಳಿದರೊಂದೇ ಸಾಕು ಭಾಸುದು ತನ್ನೊಳಗೆ ೨

ದೇವರೆ ತಾ ದೂರಿದ್ದರೆ ಆವದೊ ನಿನ್ನ ಕಾವ ದೈವ
ಠಾವಿಕೆ ಮಾಡಿಕೊಳ್ಳೊ ಸಾವಧ ವಾಗಿ ૩

ತಿಳಿಯದಿದ್ದರೆ ಸ್ವಕೀಲು ಕೇಳಿಕೊ ಸದ್ಗುರುವಿಗೆ ನೀಟ
ಹೇಳಿಕೊಡುವ ಸ್ವಾಮಿ ಬೆಳಗ ತಾ ಝಾಡಿ ೪

ಸಾಯಾಸವಿಲ್ಲದೆ ಮಹಿಪತಿಗೆ ಶ್ರಯದೋರಿತು ಗುರುವಾಕ್ಯದಲಿ
ಆಯಿತು ಮಾಡಿದ ಗುರು ತಾಯಿತಂದೆನಗೆ ೫

## ೨೫೯

ಬೆಜ್ಜರವಿಡಿಯಲು ಗುರುಭಕ್ತಿಗೆ ತಾ ಹೆಜ್ಜೆಜ್ಜಿಗೆ ನಿಧಾನ
ಸಜ್ಜನರನುದಿನ ಕೊಡುವರು ಸುಖ ಸಾಮ್ರಾಜ್ಯದ ಸುಸನ್ಮಾನ ಧ್ರುವ

ಅಂಜಿಕೆಂಬುದು ಅಂಜನ ಕಣ್ಣಿಗೆ ಕಂಜನಾಭನ ಖೂನ
ರಂಜಕವೆಂಬುದು ಇದೇ ಭಕ್ತರಿಗೆ ನಿಜತತ್ವದ ಸಾಧನ
ರಂಜನೆದೋಲು ಒಣ ಭಂಜನೆ ತಾ ಪ್ರಾಂಜಳಾಗುರು ಜ್ಞಾನ
ಸಂಜೆ ಉದಿಯೆನ್ನದೆ ನಿರಂಜನ ಸೇವೆಯ ಮಾಡುದೆ ಪೂರ್ಣ ೧

ಭಕ್ತಿಗೆ ಸಲಿಗಿ ಕೆಲಸಕೆ ಬಾರದು ಯುಕ್ತಿವಂತರು ನೋಡಿ
ಶಕ್ತನಾದರೆ ಬಾಗಿರಬೇಕು ಅಹಂ ಭ್ರಮ ಈ ಡ್ಯಾಡಿ
ಯುಕ್ತಿಗಿದೊಂದೇ ಕೀಲು ದೃಢ ಭಕ್ತಾಶ್ರಯ ಮಾಡಿ
ಭೋಕ್ತಭಾವದ ಸದ್ಗುರುರಾಯ ತಾ ಬಾಹನು ಕೈ ಗೂಡಿ ೨

ಅಂಜಂಜಿ ನಡೆದಮ್ಯಾಲೆ ಮಹಿಪತಿ ನಿಶ್ಯಂಕ ನೀನಾಗೊ
ಗುಂಜಿನಮಣಿಯಂತ್ಯಾತಕೆ ಸಿಲುಕದೆ
ಅಂಜುವ ಭವಭಯ ನೀಗೊ
ಗುಂಜಾಗಿಹ ಕರ್ಮದ ಬಾಧಿಯೊಳು ಸಿಲಕುವದೆಲ್ಲ ಸೋಂಗೊ
ರಂಜಿಸುತಿ ಹ್ಯ ಸದ್ಗುರು ಪಾದಕೆ ನೀ ವಾಜಿಲಿ ಶರಣ್ಹೋಗೊ ૩

## ೨೬೦

ಬೇಡಿಕೋತೆ ಕೇಳಿ ನೋಡಿ ನಿಜಬಾಳಿ
ಗೂಢಗುರುತವ ಮನಗಂಡು ನೆಲೆಗೊಳ್ಳಿ ೧

ಒಂದಕೊಂದು ಮಾಡಿ ಒಂದು ಪಥಗೂಡಿ
ಹಿಂದ ಮುಂದೆ ನೋಡುವ ಸಂದೇಹವೀಡಾಡಿ ೨

ಅರ್ತುಕೊಳ್ಳಿ ಖೂನ ತ್ವರಿತ ಗುರುಜ್ಞಾನ
ಕರ್ತು ಮಹಿಪತಿಸ್ವಾಮಿದೋರುವ ನಿಧಾನ ೩

## ೨೬೧

ಬೇರ್‍ಯದ ಭಾವ ಮುಕುತಿ ಸುವರ್ಮ
ತೋರುವದೊಂದೇ ಸದ್ಗುರು ದಯಾಧರ್ಮ ಧ್ರುವ

ನೆನವಿಗೆ ನೆಲೆಗೊಳದೆ ನಿಜಧ್ಯಾನ
ಅನಕಾ ದೋರುವಾದ ಸದ್ವಸ್ತುದಾ ಖೂನಾ ೧

ಮನದಿಂದಲಿ ಮನವಾಗದೆ ಉನ್ಮನ
ತಾನಾಗುವದೆ ಸದ್ಗುರು ಕೃಪೆಜ್ಞಾನ ೨

ದೀನ ಮಹಿಪತಿಗೆ ತೋರಿ ನಿಜಗುಟ್ಟು
ಭಾನುಕೋಟಿ ತೇಜ ತಾನಾದ ಉಂಟು ೩

## ೨೬೨

ಭಕ್ತಿಗೆ ಮೂರು ಗುಣಗಳು ಬೇಕು ಯುಕ್ತಿವಂತರು ಕೇಳಿ
ಮುಕ್ತಿಶೀಲವು ತಿಳಿದು ನಿಜವಿರಕ್ತತನದಲಿ ಬಾಳಿ ಧ್ರುವ

ಪ್ರೇಮ ಪ್ರೀತಿ ರತಿ ನೇಮದಲಿ ಶ್ರೀಸ್ವಾಮಿ ಚರಣದಲಿಡಬೇಕು
ಸೌಮ್ಯ ಸಮಾಧಾನದಲಿ ತಾನಮೃತವನು ಹಿಡಿಯಬೇಕು

ರೋಮರೋಮವನು ಕೋಮಲವಾಗಿ
ನಿರ್ಮಳದಲಿ ನಡಿಬೇಕು
ಶಮೆ ದಮೆಯಲಿ ತಾ ಕ್ಷಮೆಯನು
ಪಡೆದು ಸಮದೃಷ್ಟಿಗುಡಬೇಕು ೧

ನಿತ್ಯ ನಿತ್ಯ ವಿವೇಕವು ತಿಳಿದು ಪಥ್ಯದಲಿ ನಡಿಯಬೇಕು
ಚಿತ್ತವೃತ್ತಿ ಸವೃತ್ತಿಯ ಮಾಡಿ ಸತ್ಯದಲಿ ನುಡಿಯಬೆಕು
ಉತ್ತಮೋತ್ತಮ ವಸ್ತುದ ನಿಜಸುಖ ಹೃತ್ಕಮಲದಲಿಡಬೇಕು
ಭಕ್ತಿಗೆ ಭಾವನೆ ಬಲಗೊಂಡು ವೈರಾಗ್ಯದ ಸುಖ ತೊಡಬೇಕು ೨

ಸೋಹ್ಯ ಸೋನ್ನಿಯ ಸೂತ್ರವ ತಿಳಿದು ಸ್ಥಾಯಿಕನಾಗಿರಬೇಕು
ಧ್ಯೇಯಧ್ಯಾತಧ್ಯಾನವ ತಿಳಿದು ಮಾಯದ ಮೊನೆ ಮುರಿಬೇಕು
ನ್ಯಾಯ ನೀತಿಯ ನೆಲೆನಿಭವನು ಉಪಾಯದಲಿ ಅರಿಯಬೇಕು
ಪಾಯಕನಾಗನುದಿನ ಮಹಿಪತಿ ಗುರುಪಾದದಿ ಸ್ಥಿರವಿರಬೇಕು ೩

## ೨೬೩

ಭಕ್ತಿನೋಡಿ ಜನ ಮಾಡುವ ಪರಿಯ ಮುಕ್ತಿಯ ಮಾರ್ಗವ
ಯುಕ್ತಿಯನರಿಯದೆ ಭಕ್ತ ನಾನೆಂದಾಡುವರ್‍ಹೊರಿಯ ಧ್ರುವ

ಚಕ್ಕಮಲಕು ಭಕ್ತಿಯ ನೋಡಿ
ಉಕ್ಕಿ ದೋರುತಲ್ಯದ ಬಲಗೂಡಿ
ಸಿಕ್ಕವಲ್ಲದ ಸಾರವಸ್ತು ತಾಂ
ಮಿಕ್ಕ ಮಾನವರಿಗೆ ದಯಮಾಡಿ ೧

ಡಂಭದೋರು ವನೇಕಚಂದ
ಗುಂಭಹೇಳನು ಸರಕ್ಕನೆ ಬಂದು
ಕೊಂಬುಕೊಡುವ ಮಾತಿಗೆ ಬಂದರೆ
ನಂಬದೆ ಹೋಗುವರತ್ತತ್ತ ಹಿಂದ ೨

ಹೊಟ್ಟಿನಮ್ಯಾಲೆ ಸಾರಿಸಿದಂತೆ
ನಿಷ್ಠೆನೋಡಿ ಜನ ಮೋಹಿಸುವಂತೆ
ಘಟ್ಟಿಸುತ ತಮ್ಮ ಹೊಟ್ಟೆಯ ಹೊರೆದರು
ಮುಟ್ಟ ಭಜಿಸುವ ಗುಟ್ಟುದೋರಿದಂತೆ ೩

ರಚ್ಚಿಗೆ ಬಂತು ಭಕ್ತಿ ಇದೇ ಬಹಳ
ಹೆಚ್ಚು ನಮ್ಮದೆಂದು ಮಾಡುರು ಮ್ಯಾಳಿ
ಮತ್ಸರದೊಳಗಿದ್ದು ಸಚಲಸ್ನಾನ
ಮಾಡಿದೆವೆಂದು ಹೇಳುರು ನಿರ್ಮಲ ೪

ನಗೆ ಬರುತ್ತದೆ ಭಕ್ತಿಯ ಕಂಡು
ಜಗದೊಳಗೆಲ್ಲ ಇದೇವೆ ಭಂಡು
ಸುಗಮ ಸುಪಥ ಬ್ಯಾರದೆ ಎಂದು
ಮಹಿಪತಿ ಘನಬೆರೆದು ಸದ್ಗುರು ಬಲಗೊಂಡು ೫

## ೨೬೪

ಭ್ರಮಮೂಲಮಿದಂ ಜಗತು ನೇಮದ ನಿಜಮಾತು ಧ್ರುವ

ಭ್ರಮೆಯಿಂದಲಿ ಭ್ರಮಣ್ಣತ್ಯದ ನೋಡಿ
ಭ್ರಮೆ ನೆಲೆಗೊಳಿಸದು ಮನ ಸ್ಥಿರಮಾಡಿ
ಭ್ರಮಿಸೇದನೇಕ ಜನ್ಮ ತಿರುಗಾಡಿ
ಭ್ರಮಿಯಲಿ ಬಾರದು ನಿಜ ಕೈಗೊಡಿ ೧

ಭ್ರಮೆಯಕ ಭ್ರಮೆ ಹತ್ತೇದ ಬಲು ಬಹಳ
ಭ್ರಮಯು ಮಾಡೇದ ಸಂಸಾರದ ಮೇಳ
ಭ್ರಮೆ ಇಲ್ಲದ್ಯಾತಕೆ ಏನ್ಹೇಳ
ನೇಮದಿ ಹೊಳೆವುದು ವಸ್ತು ಅಚಲ ೨

ನಾ ನೀನೆಂಬುದು ಭ್ರಮೆಯದ ಮೂಲ
ಅನುದಿನ ಬೆನ್ನಟ್ಟಿದೆ ಬಹುಕಾಲ
ಖೂನಕೆ ಬಾರದೆ ಆತ್ಮಾನುಕೂಲ
ತಾನೆ ಮುಸುಕ್ಯದೆ ಭ್ರಮಿ ಸಕಲ ೩

ನಿಶ್ಚಲವಾಗದೆ ಜ್ಞಾನದ ಉಗಮವು
ಹೆಚ್ಚು ಕುಂದಿಗೆ ಹೊಡೆದಾಡುದು ಭ್ರಮೆಯು
ಹುಚ್ಚುಮಾಡೇದ ವಿಷಯ ಭ್ರಮೆಯು
ಎಚ್ಚರಿಸುವ ಸದ್ಗುರು ದಯಕ್ರಮವು ೪

ನಾ ಮವನಿಷ್ಟರೊಳಾಡಿದ ಮಾತು
ನಿಮಿಷಾರ್ಧದಲಿ ಭ್ರಮೆಯಗಳೆಯಿತು
ಸ್ವಾಮಿಸದ್ಗುರು ಕೃಪೆಯಲಿ ತಿಳದೀತು
ನೇಮಿಸಿ ತಿಳಿಕೊ ಮಹಿಪತಿನಿವಾಂತು ೫

## ೨೬೫

ಮನಗೊಂಡವರಲ್ಲಿ ಘನಗೊಳ್ಳಿ ಜ್ಞಾನಾಗಮ್ಯದ ಧ್ರುವ

ಮನಗಂಡವರೆಲ್ಲದ ನಿಜಖೂನ
ಮುನಿಜನರಾರಾಧಿಸುವ ನಿಧಾನ
ಅನಿಮಿಷದಲಿ ನೋಡುವ ತ್ರಾಣ ಉನ್ಮನಲಿಹ ಧನ ೧

ಜಾಣನೇ ಮಾಡಿಕೊಂಬನು ಪರೀಕ್ಷೆ ಸ್ವಾನುಭವದಲಿ ಪ್ರತ್ಯಕ್ಷ
ಅನುದಿನದಲಿಹುದ ದಕ್ಷ ಘನಗುರು ಕಟಾಕ್ಷ ೨

ಮನಗಂಡಾತನೆ ಘನಗುರು ನಮ್ಮ ದೀನ
ಮಹಿಪತಿಸ್ವಾಮಿಯು ಪರಬ್ರಹ್ಮ
ಖೂನಮಾಡವಗಿದು ಸಂಭ್ರಮ ಅನಂದೋಬ್ರಹ್ಮ ೩

## ೨೬೬

ಮನದಿಂದಲಿ ಮನನೋಡಿ
ಮನವರಿತು ಘನ ಕೂಡಿ ಧ್ರುವ

ಮನಸಿನಿಂದ ತಾ ನೋಡುವ ಖೂನ
ಮನ ಮರೆಯಲದೆ ನಿಧಾನ
ಮನವರಿಯದೆ ಇಹುದ್ಯಾತರ ಜ್ಞಾನ
ಮನವೇ ಸ್ವಹಿತ ಕಾರಣ ೧

ಮನದ ಕೊನಿಯಲಿದೆ ಘನಸುಖದಾಟ
ಅನುದಿನ ನೋಡುದು ನೀಟ
ಸ್ವಾನುಭವದಲಿದು ನೋಡುವ ನೋಟ
ಮುನಿಜನರ ಸುಖದೂಟ ೨

ಮನೋನ್ಮನದೊಳಗದೆ ಘನಸ್ಫೂರ್ತಿ
ಜ್ಞಾನಕಿದೆ ಮನೆ ವಾರ್ತಿ
ಮನದೊಳಗಿಹ್ಯ ಮಹಿಪತಿ ಗುರುಮೂರ್ತಿ
ಮನಕಾಗಿಹ ತಾಂ ಸಾರ್ಥಿ ೩

## ೨೬೭

ಮನ ಬಲಿಯದನಕ ಅನುಕೂಲಾಗದನುಭವ ಧ್ರುವ

ಮನವೇ ಮರೆಯ ಮಾಡೇದೆ ನೆನವಿಗೆ ತಾಂ ತಂದು ತೋರದೆ
ಹೆಣ್ಣ ಹೊನ್ನದಾಶೆ ಹಚ್ಯಾದೆ ಘನತನಗರಸದೆ ೧

ಹುಚ್ಚಮಾಡಿಬಿಟ್ಟದೆ ಎಚ್ಚರ ಎಡಿಯಗೊಡದೆ
ಕಚ್ಚಿ ವಿಷಯಕೆ ಬಿದ್ದದೆ ಬೆಚ್ಚಿ ಬೆದರದೆ ೨

ಮನಸಿಗೆ ಮನಸಿನಿಂದ ಅನುಭವವಾಗಬೇಕಾನಂದ
ಘನ ಗುರುವಿನ ಕೃಪೆಯಿಂದ ಮನ ಬಲಿವುದು ಚೆಂದ ೩

ಮನೋನ್ಮನವಾಗಿ ತಾ ಘನ ಬೆರೆದು ಸ್ವಹಿತ
ಜ್ಞಾನಕಿದೇ ತಾ ಸನ್ಮತ ಮುನಿಜನರ ಸುಪಥ ೪

ಮನಬಲಿದು ನೀ ನೋಡೋ ಘನಸುಖ ಮಹಿಪತಿಗೊಡೊ
ಅನುಭವಾಮೃತ ಸೂರ‍್ಯಾಡೊ ಅನುಮಾನೀಡ್ಯಾಡೊ ೫

## ೨೬೮

ಮನಮರಿಯಲಿದ್ದವಗೆಲ್ಲಿಹುದು ಆತ್ಮದ ಖೂನ
ತನುವನಾಗಿದ್ದವಗೆಲ್ಲಿಹುದು ಜ್ಞಾನ ಧ್ರುವ

ನಿಗಮ ಓದಿದರೇನು ಅಗಮ ಹೇಳಿದರೇನು
ಬಗೆ ಬಗೆ ವೇಷ ಜಗದೊಳುದೋರಿದರೇನು ೧

ಮಠವು ಮಾಡಿದರೇನು ಅಡವಿ ಸಾರಿದರೇನು
ಸತೆ ಮಾಡಿ ಸಂಸಾರ ಹಟವಿಡಿದರೇನು ೨

ನಿಗದಿ ಹಾಕಿದರೇನು ಗಗನಕ್ಹಾರಿದರೇನು
ಮಿಗಿಲಾಗಿದೋರಿ ಬಗವಿಯ ಪೊದ್ದರೇನು ೩

ಗುಹ್ಯ ಸೇರಿದರೇನು ಬಾಹ್ಯ ಮೆರೆದರೇನು
ದೇಹ ದಂಡಿಸಿ ಹರವ ತೊರೆದರೇನು ೪

ಮನಕೆ ಮೀರಿಹ್ಯ ಸ್ಥಾನ ಘನಸುಖದಧಿಷ್ಠಾನ
ದೀನಮಹಿಪತಿ ನೀ ಸಾಧಿಸೊ ಗುರುಜ್ಞಾನ ೫

## ೨೬೯

ಮನಮುಟ್ಟಿ ಮಾಡುವದೆ ಭಕ್ತಿಗಳು
ಶ್ರುತದೃಷ್ಟನು ಮನದಿಂದ ಮಾಡುವ ನೇಮನಿತ್ಯಗಳು
ವಿವೇಕವು ಅಗಮ ಪುರಾಣ ವಿಚಾರವೆ
ಮಹಾ ಧರ್ಮಶಾಸ್ತ್ರಗಳು
ಸನ್ಮತವೆ ಮತವೆಂದರಿದಿಹ ಮಹಾ ಯೋಗೇಶ್ವರ
ಯತಿ ಕುಲದೀಪಗಳು ೧

ಇಡಾಪಿಂಗಳ ಸುಷಮ್ನದಿ ಭ್ರೂಮಧ್ಯ
ತ್ರಿವೇಣಿ ಸಂಗಮ ಸ್ನಾನಗಳು
ಶ್ರೀ ಗುರು ಸ್ವಸ್ವರೂಪದಿ ಬೆರೆದಿಹ
ಮಹಾದಿವ್ಯ ಮಡಿಯಗಳು
ದ್ವಾದಶನಾದದ ಶ್ರುತಿ ಮೊದಲಾದವು
ಇಟ್ಟಿಹ ದ್ವಾದಶ ನಾಮಗಳು
ಪಂಚಮುದ್ರೆಯ ಸ್ಥಾನವು ಆತ್ಮದಿ
ಮನಗಂಡಿಹದೇ ಶ್ರೀಮುದ್ರೆಗಳು ೨

ಸ್ವಾನುಭವದಿಂದಲಿ ಸದ್ಗುರುವಿನ
ಸ್ಮರಣೆಯೊಳಿಹುದೆ ಸಂಧ್ಯಾನಗಳು
ಇಪ್ಪತ್ತೊಂದು ಸಾವಿರದಾರುನೂರು ಪ್ರಣಮ್ಯವೆ
ಜಪಸರ ಮಾಲೆಗಳು
ಗುರುವಾಕ್ಯವು ನಂಬಿಹ ವಿಶ್ವಾಸವು
ಜಪತಪ ಧ್ಯಾನವೆ ಮೌನಗಳು
ನಿರ್ಧಾರದಿ ಗುರುಪಾದ ನಿಶ್ಚೈಸಿಹ ವ್ರತ ಆಚಾರವೇ ನಿಷ್ಠೆಗಳು ೩

ತನುವಿನೊಳು ಘನದವಲೋಕನೆ
ಮಾಡುವುದೇ ದೇವಪೂಜೆಗಳು
ಅಂತ:ಕರಣದಿ ಗುರುಚರಣದ ಅಭಿಷೇಕಜ್ಞಾನ
ಭಾಗೀರಥಿ ತೀರ್ಥಗಳು

ನೆನವಿನ ಸಂಪುಷ್ಪದಿ ಘನಮೂರ್ತಿಯ
ಚಿತ್ತಚಿಂತನದಿ ದಿವ್ಯ ವಸ್ತ್ರಗಳು
ಬುದ್ಧಿ ಭೇದ ನಿನು(?) ಗಂಧಾಕ್ಷತೆಯ ಪ್ರೇಮವೆ
ಪರಿಮಳಪುಷ್ಪಗಳು ೪

ಅನಿಮಿಷ ನೇತ್ರದಿ ನೋಡುವ ಘನ ಚಿತ್ಪ್ರಕಾಶವೆ ಸದಾನಂದದ
ದೀಪಗಳು ಅಹಂಕಾರವು ಧೂಪಾರ್ತಿಯ
ಮೊದಲಾದ ಸತ್ವರಜತಮ
ಏಕಾರ್ತಿಗಳು ಸದ್ಭಾವನಿ ತಾಂಬೂಲಗಳಿಂದಲಿ ರತಿಮನ ಘನ
ನೈವೇದ್ಯಗಳು ಸುವಾಸನಿ ಕರ್ಪೂರಗಳಿಂದಲಿ
ಮಂಗಳಾರ್ತನಿ ಪಂಚ ಪ್ರಕಾಶಗಳು ೫

ಪಂಚತತ್ವದ ಮಹಾ ಮಂಟಪದೊಳು
ಶ್ರೀಗುರು ಸೇವೆ ಸತ್ಕಾರಗಳು
ಜಯ ಲಕ್ಷ್ಮಿಯ ಷೋಡಶ ಉಪಚಾರಗಳಿಂದಲಿ ಮಹಾದಿವ್ಯ
ಪೂಜೆಗಳು ತಲ್ಲೀನವು ಅಗಿಹ ಗುರುಪಾದದಿ ಪ್ರದಕ್ಷಿಣೆವೆ
ನಮಸ್ಕಾರಗಳು ಉತ್ಪತ್ತಿ ಸ್ಥಿತಿಲಯ ತಾರಿಸಿದ
ಗುರುನಾಮವೇ ಸದ್ಗತಿ ಮುಕ್ತಿಗಳು ೬

ಆತ್ಮಾನುಭವ ಗುರುದಾಸರಿಗಲ್ಲದೆ ಬಲ್ಲವೇನು ಪಶುಪ್ರಾಣಿಗಳು
ದಿವಾರಾತ್ರಿಯಲಾನಂದ ಸದೋದಿತದೋರುತಿಹ
ಸಾಕ್ಷಾತ್ಕಾರಗಳು
ಈ ಪರಿಯಲಿ ಮಹಿಪತಿ ಬಾಹ್ಯಾಂತ್ರವು ವಸ್ತುಗತಿ
ಭಾಸ್ಕರ ಸ್ವಾಮಿಗಳು
ಏಕೋದೇವನು ಏಕೋಭಕ್ತಿಯು ತ್ರಾಹಿ ತ್ರಾಹಿ
ತ್ರಾಹಿ ಜೀವನಮುಕ್ತಿಗಳು ೭

## ೨೭೦

ಮನೋಮಲಹರವಾಗುದು ಗುರು ಬೋಧದಿಂದ
ತನ್ನ ತಾಂ ತಿಳಿಯಲು ಶುದ್ಧ ಬುಧ ಆಹಿರಿ ಧ್ರುವ

ಅಂತರಂಗವು ನೋಡಿ ಜರೆವದು ಬಹಿರವಿ
ಬೆರೆದು ನೋಡಿಲು ಘನವಸಂತವು
ಗುರುಹಸ್ತ ಸ್ಪರ್ಶದಿಂದಲಿ ಕಲ್ಯಾಣ
ಅರಿಯಲಾತ್ಮಾನುಭವ ಮುಕ್ತಿಗೆ ದಾರಿಯಯ್ಯ ೧

ಸಾಧನವ ಮಾಡಿ ಸದ್ಗತಿಯಕಾಂಬೋದವು
ಧನ್ಯ ಧನ್ಯವಾಹುದು ಜ್ಞಾನುಪದೇಶಲಿ
ತಿಳಿಯಲಗಾಧ ಬಳಿಲಿ ಶ್ರೀಗುರುವಿನ ಸಕಲಾಭರಣ
ಇದೇ ಸದ್ಗುರು ಕೃಪೆಯಯ್ಯ ೨

ಧ್ಯಾಯಿಸುವ ಆತ್ಮಾರಾಮ ಕ್ರಿಯವರಿದು
ಪಯಸ್ವನಿ ಜಿಹ್ವದಲಿ ಗುರುಸ್ಮರಣೆಯು ನಾಟಿ
ಗುರುಪಾದ ಹೃದಯದಲಿ ಸಾಳಂಗವನು ಮಾಡಿ
ಪಾವನ್ನವಾದ ಮಹಿಪತಿ ಗುರುವಿನ ಪಾಡಿ ೩

## ೨೭೧

ಮಾಡಬಾರದು ನೋಡಿ ಕೇಡಿಗರ ಸಂಗ
ಬೇಡಿ ಕಾಡದೆ ಬಾಹುದಭಿಮಾನ ಭಂಗ ಧ್ರುವ

ಹೊಟ್ಟೆಯನು ಹೊಕ್ಕು ಕಟ್ಟಿಗೆ ತಂದು ನಿಲಿಸುವರು
ಗುಟ್ಟಲೀಹ ಮಾತು ತುಟ್ಟಿಗೆ ತಾಹರು
ಕೊಟ್ಟಿದೆನೆ ಬಾಯಾರಿ ಬಟ್ಟೆಗೆಳ ತಾಹರು
ನಟ್ಟಸ್ನೇಹದ ಬಳಕಿ ತುಟ್ಟಿಸುವರು ೧

ಬೆಲ್ಲ ಬಾಯಲಿ ಸುರಿಸಿ ಎಲ್ಲರನು ಮೋಹಿಸುತ
ಅಲ್ಲಹುದು ಮಾಡಿ ಗೆಲವಿಸಿಕೊಂಬರು
ಸಲ್ಲದರ ಕೈವಿಡಿದು ಇಲ್ಲದನೆ ಸ್ಥಾಪಿಸುತ
ಬಲ್ಲಿದರ ಭ್ರಮೆಗೆಡಿಸಿ ಅಣಕವಾಡುವರೋ ೨

ಏನನಾದರೆ ಕೊಟ್ಟು ಹೀನಮನುಜರ ಸಂಗ
ಮಾನ್ನಣೆಯಲಿದ್ದು ತಾಂ ತ್ಯಜಿಸಿ ಬ್ಯಾಗೆ
ದೀನಮಹಿಪತಿ ಪ್ರಾಣದೊಡೆಯ ಶ್ರೀನಿಧಿಚರಣ
ನೆನವರ ನೆರೆಲಿದ್ದು ಸುಖಿಸುವುದು ಲೇಸು ೩

## ೨೭೨

ಮಾಡಿ ನೀವು ಸತ್ಸಂಗ
ನೋಡಿ ಘನ ಅಂತರಂಗ ಧ್ರುವ

ಸಾರಿದೂರಲಿಕ್ಕೆ ವೇದ
ಅರರಿವದೆನಗಗಾಧ
ದಾರಿದೋರಿಕುಡು ಬೋಧ
ಗುರುಪ್ರಸಾದ ೧

ಬದಿಲಿರಲಿಕ್ಕೆ ಖೂನ
ಇದಕ್ಯಾಕುದ್ದರಿ ಜ್ಞಾನ
ಛೇದಿಸಿ ಅನುಮಾನ
ಭೇದಿಸಿರೊ ಪೂರ್ಣ ೨

ಹಿಡಿಯಲಿಕ್ಕೆ ಸತ್ಸಂಗ
ಓಡಿಬಾವ್ವಾ ಶ್ರೀರಂಗ
ಮಾಡಿ ಭವಭಯಭಂಗ
ನೋಡುವ ಕೃಪಾಂಗ ೩

ಎಲ್ಲಕ್ಕೆ ಶಿಖಾಮಣಿ
ಸುಲಭ ಈ ಸಾಧನಿ
ಸೊಲ್ಲಿಗೆ ಮುಟ್ಟಿದ ಪ್ರಾಣಿ
ಬಲ್ಲವ ಸುಜ್ಞಾನಿ ೪

ಪಿಡಿದು ಸತ್ಸಂಗತಿ
ಕಡಿದು ಹೋಯಿತು ಭ್ರಾಂತಿ
ಪಡೆದ ಸುಖ ವಿಶ್ರಾಂತಿ
ಮೂಢ ಮಹಿಪತಿ ೫

## ೨೭೩

ಮಾಡಿ ಸಾಧುಸಂಗ ನೋಡಿ ಅಂತರಂಗ ಧ್ರುವ

ಕೇಳಿ ಎನ್ನಮಾತ ಹೇಳುವೆ ನಾ ಹಿತ
ಅಳಿಯದಾರ್ಜಿತ ತ್ವರಿತ ೧

ಕೂಡಿ ಪಥ ಬ್ಯಾಗ ಗೂಢ ರಾಜಯೋಗ
ಮಡಬ್ಯಾಡಿ ಸೋಂಗ ನೋಡಿ ಬ್ರಹ್ಮಭೋಗ ೨

ಠಕ್ಕಠವಳಿ ಅಲ್ಲ ಸುಖಸಾಧು ಬಲ್ಲ
ಮಿಕ್ಕವರಿಗೆಲ್ಲ ಸಿಕ್ಕುದು ತಾನಲ್ಲ ೩

ಒಮ್ಮನ ಮಾಡಿ ನಿಮ್ಮೊಳಗ ನೋಡಿ
ಬ್ರಹ್ಮರಸ ಕೂಡಿ ಸುಮ್ಮನೆ ಸೂರ್‍ಯಾಡಿ ೪

ಇಹ್ಯಪರ ಪೂರ್ಣದಯಾಳು ನಿಧಾನ
ಮಹಿಪತಿ ಪ್ರಾಣ ಗುರು ಶ್ರೀಚರಣ ೫

## ೨೭೪

ಮಾತಿನಂತಲ್ಲನುಭವ ಜ್ಞಾನ ಮರುಳಜನ ಬಲ್ಲವೇನ
ಯತಿಮುನಿಗಳು ಸಾಧಿಸುವ ಖೂನ ಮನೋನ್ಮನದ ಸಾಧನ ಧ್ರುವ

ನುಡಿಜ್ಞಾನಾಡಿ ತೋರಬಹುದು ನಾಡ ಲೋಕದೊಳೆಲ್ಲ
ನಡಿಜ್ಞಾನದೆ ದುರ್ಲಭವದು ಆಡಿ ದೋರಲಿಕ್ಕಿಲ್ಲ
ಗೂಢ ಗುಹ್ಯ ನಿಜಬೋಧಿದು ಒಡೆದ್ಹೇಳುವದಲ್ಲ
ಒಡನೆ ಸದ್ಗುರು ಘನ ದಯದಲಿದು ಪಡೆದವನೆ ತಾಂ ಬಲ್ಲ ೧

ಕಲಿತಾಡುವ ಮಾತಿಗೆ ಸಿಲುಕದ ಮೂಲವಸ್ತುದ ಖೂನ
ನೆಲೆನಿಭವೆ ತಾ ಅಗಮ್ಯಿದು ಬಲು ಸೂಕ್ಷ್ಮಸ್ಥಾನ
ಬಲಿಯದೆ ರೇಚಕ ಪೂರ್ವಿದು ನೆಲೆಗೊಳ್ಳದು ಸಾಧನ
ನಿಲಕಡ್ಯಾಗದೆ ಕುಂಭಕಲಿದು ಬಲಿಯದು ಗುರುಜ್ಞಾನ ೨

ಸ್ವಾನುಭವ ಸುಖ ಸಾಧಿಸಿ ಅನುದಿನದಿ ನೋಡಿ
ಮನಗೆದ್ದು ಜನಕೆ ಮೋಹಿಸುವ ಅನುಭವ ಹೇಳಬ್ಯಾಡಿ
ಭಾನುಕೋಟಿತೇಜನೊಲಿದು ತಾ ಖೂನಾಗುವ್ಹಾಂಗ ಮಾಡಿ
ದೀನ ಮಹಿಪತಿ ಸ್ವಾಮಿ ಮನಗಂಡು ಮನೋಹರ ಕೊಂಡಾಡಿ ೩

## ೨೭೫

ಮಾತು ಬಿಡಬೇಕು ನೀತಿ ಹಿಡಿಬೇಕು
ಪ್ರೀತಿಯಿಂದಧ್ಯಾತ್ಮ ನಿಜಸ್ಥಿತಿಗೂಡಬೇಕು ಧ್ರುವ

ಕೋಟಿ ಮಾತಾದೇನು ಕೋಟಲಿದ್ದಾವೇನು
ನೋಟ ನೆಲೆಗೊಳದ ಶಾಸ್ತ್ರಪಾಠ ಮಾಡಿನ್ನೇನು ೧

ಪಡಿಯದೆ ಸಂಜೀವ ಗಿಡಮೂಲವ್ಯಾತಕೆ ಸರ್ವ
ನಡಿಯು ಜ್ಞಾನವರಿಯದಿಹ ನುಡಿಯಾತಕೆ ಬೀರ್ವ ೨

ನಡೆನುಡಿ ಒಂದೇ ಮಾಡಿ ದೃಢ ಭಾವನೆ ಕೂಡಿ
ಒಡನೆ ಬಾಹ್ವ ಮಹಿಪತಿ ಒಡಿಯ ಕೈಗೂಡಿ ೩

## ೨೭೬

ಮಾತು ಸವಿಯೋ ಅವರ ಮಾತು ಸವಿಯೋ
ಮಾತಿಲಾತ್ಮಾನುಭವದ ಸ್ಥಿತಿಯಗೂಡಿಸುವರ ಧ್ರುವ

ನಿತ್ಯಾನಿತ್ಯದಿತ್ಯರ್ಥದ ತತ್ವಾರ್ಥಸಾರಾಯ ಬೀರಿ
ಸತ್ಯ ಸನಾತನದ ಸುಪಥವಗೂಡಿಸುವರ ೧

ಚಿತ್ತ ಶುದ್ದವನೆ ಮಾಡಿ ಮತ್ತವಾದ ಪರಬ್ರಹ್ಮಯ
ಎತ್ತ ನೋಡಿದರತ್ತ ಪ್ರತ್ಯಕ್ಷ ತೋರಿಸುವರ ೨

ಸ್ವಾನುಭವಾಮೃತವನು ಜ್ಞಾನಾಂಜನದುಲುಣಿಸಿ
ತಾನೆ ತಾನಾದ ದೀನ ಮಹಿಪತಿ ಸ್ವಾಮಿಯ ೩

## ೨೭೭

ಮುತ್ತು ಕೊಳ್ಳಿರೋ ಉತ್ತುಮರೆಲ್ಲ ಧ್ರುವ

ಜ್ಞಾನ ಸಮುದ್ರಲಿನ್ನು ಧ್ಯಾನವೆಂಬ ಸಿಂಪಿನೊಳು
ಘನಗುರುಕರುಣದ ಮಳಿಯಾದ ಮುತ್ತು ಕೊಳ್ಳಿರೋ ೧

ಪಿಂಡ ಬ್ರಹ್ಮಾಂಡವೆಂಬ ಗಡ್ಡೆಯೊಳಿನ್ನು
ಪುಟ್ಟಿ ಭಕ್ತಿಭಾವ ಹಡಗದೊಳು ಬಂದ ಮುತ್ತು ಕೊಳ್ಳಿರೋ ೨

ಸಾಧುಸಜ್ಜನರೆಂಬ ಮುತ್ತಿನ ಜೋಹರೇರ ಕೈಯ
ನಿಜಹಸ್ತಸ್ಪರ್ಶವಾದು ನೀವು ಮುತ್ತು ಕೊಳ್ಳಿರೋ ೩

ಅತ್ತಲಿತ್ತಲಾಗದೆ ಈ ಮುತ್ತು ಜತನಮಾಡಿ
ನಿಮ್ಮ ಚಿತ್ತ ಮನದೊಳು ಇಟ್ಟುಕೊಳ್ಳಿರೋ ೪

ತನುಮನಧನವನರ್ಪಿಸಿಕೊಂಡಿಹ ಮುತ್ತು
ಮಹಿಪತಿ ಇಹರಪವಸ್ತು ಮುತ್ತು ಕೊಳ್ಳಿರೋ ೫

## ೨೭೮

ಮೈಹೋಳು ನೀ ಬಂದು ಮೈಯ ಮರಿಯ ಬ್ಯಾಡವೋ
ಮಹಿಮಾನಂದನಂಘ್ರಿಯ ಬಿಡಬ್ಯಾಡವೋ ಧ್ರುವ

ಮಾಯಾ ಮೋಹದೊಳು ಸಿಲ್ಕಿ ದೇಹ್ಯ ಭ್ರಮೆಯಗೊಂಡು
ಕಾಯ ಸೌಖ್ಯಕೆ ಬಾಯಿದೆರಿಯಬ್ಯಾಡವೋ ೧

ಹೊನ್ನು ಹೆಣ್ಣು ಮಣ್ಣಿಗಾಗಿ ಬಣ್ಣ ಪರಿಯಲಿನ್ನು
ಕಣ್ಣು ಗೆಟ್ಟು ಕರುಡನಂತೆ ದಣಿಯಬ್ಯಾಡವೋ ೨

ನಾನು ನೀನು ಎಂಬ ಭಾವ ಮಹಿಪತಿಗಳೆದು
ಭಾನುಕೋಟಿತೇಜನಂಘ್ರಿ ಬೆರೆದು ಮನಕೂಡವೂ ೩

## ೨೭೯

ವಸ್ತು ಒಂದೆ ಅದೆ ಅನಾದಿಯಿಂದ
ಸ್ವಸ್ತ ಮಾಡಿಕೊಳ್ಳಿ ಗುರುಮುಖದಿಂದ ಧ್ರುವ

ಹೂವಿಲ್ಲದೆ ಫಲವಾಗುವ ಕಾಯಿ
ಠಾವಿಲ್ಲದೆ ಮ್ಯಾಲೆ ಮುಚ್ಯಾದೆ ಮಾಯಿ

ಭಾವಿಕರಿಗಾದೆವು ಪಾಯಿ
ಠಾವಿಕಿ ಮಾಡಿಕೊಬೇಕು ತಾಯಿ ೧

ಬೀಜಿಲ್ಲದೆ ಫಲ ನಿಜವಾಗ್ಯದೆ
ಮೂಜಗದೊಳು ರಾಜಿಸುತ್ತದೆ
ಸೂಜಿಮೊನೆಗಿಂತ ಸಣ್ಣವ್ಯಾಗದೆ
ವಾಜಿಹೀನರ ವರ್ಜಿಸುತದೆ ೨

ನೋಡೇನೆಂದರೆ ನೋಟಕತೀತ
ಹಿಡಿದೇನಂದರೆ ಸಿಕ್ಕದು ಸ್ವಸ್ಥ
ಪಡೆದುಕೊಂಡವರಿಗ್ಯೆದೆ ಆಯಿತ
ಮೂಢ ಮಹಿಮತಿ ಗುರು ನಿಜಹಿತ ೩

## ೨೮೦

ವ್ಯರ್ಥವಲ್ಲವೇ ಜನ್ಮವ್ಯರ್ಥವಲ್ಲವೆ
ಕರ್ತು ಸದ್ಗುರು ಪಾದ ಅರ್ತು ಬೆರೆಯದವನ ಜನ್ಮ ಧ್ರುವ

ಇಡಾ ಪಿಂಗಳೆರಡು ಥಡಿಯ ಮಧ್ಯಸುಷಮ್ನದಲಿ
ಗುಪ್ತವಾಹಿನಿಯ ಸುಸ್ನಾನ ಮಾಡದವನ ೧

ಪಿಂಡ ಬ್ರಹ್ಮಾಂಡ ಭ್ರೂಮಧ್ಯ ತ್ರಿವೇಣೀಕ್ಷೇತ್ರ
ಪುಣ್ಯಸಂಗಮದ ತೀರ್ಥಯಾತ್ರೆ ಮಾಡದವನ ಜನ್ಮ ೨

ಆರು ಸೋಪಾನವೇರಿ ಮೂರು ಗೋಪುರವ ದಾಟಿ
ಮೇಲಗಿರಿಯಲಿಪ್ಪ ಮಹಿಪತಿಯ ಮೂರ್ತಿ
ನೋಡದವನ ಜನ್ಮ ೩

## ೨೮೧

ವ್ಯಸನ ವಿಷಯದ ಘಸಣಿ ಕುಸುಕಿತಿಹ್ಯ ಉಸುರು ಮಿಸುಕದೆ
ಹಸನಗೊಂಡವ ಹರಿದಾಸ ನೆಂದ ಮಹಿಪತಿಯು ೧

ಚಿತ್ತವೃತ್ತಿ ಮಾಡಿಹ ನಿತ್ಯ ನಿಜಪಥಗೂಡಿದವರ
ಭೃತ್ಯನೆಂದ ಮಹಿಪತಿಯ ೨

ಸಣ್ಣ ದೊಡ್ಡದೆನ್ನಗುಡದಿಹ ಭಿನ್ನಭೇದವ ಮಾಡದಿಹರ
ಚೆಣ್ಣ ಕಿಂಕರನೆಂದ ಮಹಿಪತಿಯು ೩

## ೨೮೨

ವೇದದ ಮೂಲ ಆದಿ ಅನುಕೂಲ
ಸಾಧು ಜನರ ಸದ್ಘನ ಲೋಲ ಧ್ರುವ

ಸದಾ ಸುವಿಮಲ ಇದೇವೆ ನಿಶ್ಚಲ ಸಾಧನ
ಕೀಲ ಬುಧರಕನುಕೂಲ
ಇದೇ ನಿಜ ನೋಡಿರೊ ಸಾಧಿಸಿ ಘನಸುಖಗೂಡಿರೊ ೧

ಜ್ಞಾನದಾಸರ ಧ್ಯಾನದಂತರ ಖೂನದಾ ವಿವರ ಅನುಭವಾಧಾರ
ಅನುದಿನುದಾರ ಘನದಾಸರ ಕಾಣುದು
ಕಣ್ಣಾರ ಎನ್ನ ಮನೋಹರ ೨

ಗುಹ್ಯ ಗೌಪ್ಯಸ್ಥ ಮಹಾಪ್ರಶಸ್ತ ಈಹ್ಯ ಸೌಭ್ಯಸ್ಥ ಮಹಿಮರ ತಸ್ತ
ಸ್ವಹಿತ ಸುಪ್ರಸ್ತ ಸಾಧು ಸಮಸ್ತ ಮಹಿಪತಿ
ಸುವಸ್ತ ಶ್ರೀಗುರು ಸಮರ್ಥ ೩

## ೨೮೩

ವೈಶ್ವದೇವೆಂಬುದು ಇದೆ ನೋಡಿ
ಶ್ವಾಸೋಚ್ಛ್ವಾಸನೆಂಬುದು ಪುಟಮಾಡಿ ಧ್ರುವ

ಬ್ರಹ್ಮಜ್ಞಾನವೆಂಬುದು ಕುಂಡಮಾಡಿ
ಕರ್ಮಕಾಷ್ಟದಗ್ನಿ ಪುಟಗೂಡಿ
ನಾಮ ದಿವ್ಯ ನೆನೆಹು ತಾ ಊದಿಬಿಡಿ
ಕಾಮಕ್ರೋಧವೆಂಬ ಧೂಮ್ರ ಹೋಗಾಡಿ ೧

ಜ್ಞಾನವೈರಾಗ್ಯೆಂಬುದು ಅಗ್ನಿ ನಾ ನೀನೆಂಬುದು
ಆಹುತಿ ಪೂರ್ಣನೀಡಿ
ಭಿನ್ನಭೇದ ಭೂತ ಬಲಿಮಾಡಿ ಮನಮೈಲಿ
ತೊಳೆದು ಶುದ್ಧಮಾಡಿ ೨

ವೈಶ್ವದೇವ ಮಹಿಪತಿಗಿದೆ ನೋಡಿ
ವಿಶ್ವದೊಳಿದೆ ನಿಜ ನಿತ್ಯಮಾಡಿ
ಹಸನಾದ ಸತ್ಕರ್ಮ ಇದೆ ನೋಡಿ
ಲೇಸುಲೇಸಾಯಿತು ಪುಣ್ಯಗೂಡಿ ೩

## ೨೮೪

ಶುದ್ಧ ಸನ್ಮಾರ್ಗ ಸರ್ವರಿಗಿದು ಒಂದೆ
ಬುದ್ಧಿವಂತರು ತಿಳಿದರು ಇದರಿಂದೆ ೧

ಇದರಿಂದೇವೆಂಬುದು ನಿರ್ವಾಣ
ಒದರುತಲಿಹುದು ವೇದಪುರಾಣ ೨

ಪುರಾಣ ಪುಣ್ಯದ ಹಾದಿಯು ನಿಜ
ಸುರಮುನಿಗಳಿಗಿದು ಹೊಳೆವದು ಸಹಜ ೩

ಸಹಜಾನಂದದ ಸುಖಸಾಗರ
ಬಾಹ್ಯಾಂತ್ರ ಸದೋತಿತ ಸಹಕಾರ ೪

ಸಹಕಾರವು ಚಿನ್ಮಯ ಚಿದ್ರೂಪ
ಸೋಹ್ಯದೋರುವ ಶ್ರೀ ಗುರುಸ್ವರೂಪ ೫

ಸ್ವರೂಪವೆ ಸದ್ಗೈಸುವ ಹಾದಿ
ಪರಮ ವೈಷ್ಣವರ ಮೂಲಾಗ್ರದ ಆದಿ ೬

ಅಧಿವೆಂಬುದು ನಿಜನಿರ್ಧಾರ
ಸಾಧಿಸುದವರಿಗೆ ಸಾಕ್ಷಾತಾರ ೭

ಸಾಕ್ಷಾತ್ಕಾರವೆ ಮೋಕ್ಷದಮನೆಯು
ಅಕ್ಷಯ ಪದ ಅದ್ವೈತದ ಖಣಿಯ ೮

ಅದ್ವೈತವೆ ಆಧ್ಯಾತ್ಮ ಸುವಿದ್ಯ
ಸಿದ್ದಸಾಧಕರಿಗೆ ಆಗುವ ಸಾಧ್ಯ ೯

ಸಾಧ್ಯವೆಂಬುದು ನಿಜಸಿದ್ಧಾಂತ
ಭೇದಿಸಿದವರಿಗೆ ಇದು ಸನ್ಮತ ೧೦

ಸನ್ಮತವೆ ಮತ ಸರ್ವರಿಗೆಲ್ಲ
ಉನ್ಮನಲೀಹ ಮಹಾಯೋಗಿಯು ಬಲ್ಲ ೧೧

ಬಲ್ಲೆವೆಂಬುದು ಬಲು ಅಗಾಧ
ಸೊಲ್ಲಿಗೆ ಸಿಲುಕದು ಗುರುನಿಜಭೋದ ೧೨

ಬೋಧವೆ ಸದ್ಗುರುವಿನ ದಯಕರುಣ
ಸದ್ಗತಿಸುಖ ಸಾಧನದ ಸ್ಫುರಣ ೧೩

ಸ್ಫುರಣವೆ ಬ್ರಹ್ಮಾನಂದದ ಹರುಷ
ತರಣೋಪಾಯದ ಮಹಾ ಉಪದೇಶ ೧೪

ಉಪದೇಶವೆ ನಿಜ ಉಪನಿಷದ್ವಾಕ್ಯ
ಒಪ್ಪಿಡುವದು ಭೂಸ್ವರ್ಗತ್ರೈಲೋಕ್ಯ ೧೫

ತ್ರೈಲೋಕ್ಯಕೆ ಇದು ನಿಜನಿಧಾನ
ಭಯವಿಲ್ಲದ ಮಹಾಸುಖಸಾಧನ ೧೬

ಸಾಧನದಿಂದ ಸದ್ಗತಿ ಸಂಪೂರ್ಣ
ಸಾಧು ಸಜ್ಜನರಿಗೆ ಸಕಲಾಭರಣ ೧೭

ಸಕಲಾಭರಣ ಸದ್ಗುರು ನಿಜ ಅಭಯವು
ಶುಕಾದಿ ಮುನಿಗು ಕೂಡಿದ ಪ್ರಭೆಯು ೧೮

ಪ್ರಭೆಗಾಣಲು ತೋರದು ನೆಲೆನಿಭವು
ನಿಭವೆ ಮಹಾಮಂಗಳಕರ ಶುಭವು ೧೯

ಶುಭದೋರುದು ಸದ್ಗುರು ಕೃಪೆಯಿಂದ
ಭ್ರಮೆಹಾರಿತು ಮಾಯೆ ಇದರಿಂದ ೨೦

ಇದರಿಂದೆ ಇದರಿಟ್ಟಿತು ಪುಣ್ಯ
ಒದಗಿ ಕೈಗೂಡಿತು ಬಂತು ತಾರ್ಕಣ್ಯ ೨೧

ತಾರ್ಕಣ್ಯವು ಬಂತೆನ್ನೊಳು ಪೂರ್ಣ
ಸರ್ಕನೆ ದೊರೆಯಿತು ಸದ್ಗುರುಖೂನ ೨೨

ಖೂನವೆ ಎನ್ನೊಳಗಾಯಿತು ಧ್ಯಾನ
ಘನಸುಖದೋರುವ ಅನುಸಂಧಾನ ೨೩

ಅನುಸಂಧಾನವೆ ಅನುಭವಸಿದ್ದ
ಅನುಕೂಲಾದ ನಮ್ಮಯ್ಯ ಪ್ರಸಿದ್ಧ ೨೪

ಪ್ರಸಿದ್ಧವೆ ಪ್ರತ್ಯಕ್ಷ ಪ್ರಮಾಣ
ಭಾಸುತಿಹುದು ಶ್ರೀಗುರು ಶ್ರೀಚರಣ ೨೫

ಶ್ರೀಚರಣಕೆ ಎರಗಿಹ ಮಹಿಪತಿಯು
ಸೂಚನೆ ಮಾತ್ರ ಕೊಂಡಾಡಿದ ಸ್ತುತಿಯು ೨೬

## ೨೮೫

ಶಬ್ದ ಜ್ಞಾನದಿಂದ ನಿಗಗೇನು ಲಬ್ಧ
ಲಬ್ಧಾ ಲಬ್ಧ ತಿಳಿಯಗೊಡುದು ನಿನ್ನ ಪ್ರಾರಬ್ಧ ಧ್ರುವ

ಡಂಭ ತೋರಿದರೆ ಬಂತೆ ಇಂಬವಾಗದ ಗುಂಭಗುರುತ
ಅಂಬುಜಾಕ್ಷನ ಶ್ರೀಪಾದ ಕಾಂಬುದೇ ಪಥ ೧

ನೀರ ಕಡಿದರೆ ಬಂತೆ ಸಾರಸದ ನವನೀತ
ಮಾರಪೀತನಂಘ್ರಿ ಗುರುತಾಗುದೇ ಹಿತ ೨

ಹರಿವ ಮೃಗಜಲವಾಯಿತೆ ಅರಿತುಕೊಂಬಗೆ ಗಂಗಾಮೃತ
ತೋರಿ ಕುಡುದೊಂದೆ ಗುರು ಅಮೃತ ಹಸ್ತ ೩

ಕಾಜಿನ ಮಣಿ ಆದೀತೆ ರಾಜಿಸುವ ನವರತ್ನ
ನಿಜತತ್ವ ತಿಳಿಯುದೊಂದೇ ವಾಜಿಯ ಯತ್ನ ೪

ಹೊಂದಿ ಬದುಕಿರೊ ಮಹಿಪತಿ ತಂದೆಯ ಗುರುಪಾದ
ಚಂದವಿದೇ ಜನ್ಮಕಿದು ಸ್ವಾನಂದ ಬೋಧ ೫

## ೨೮೬

ಶುದ್ಧಿ ತಿಳಿಯೋ ನಿನ್ನ ಬುದ್ಧಿ ದೈವತ್ವವನ್ನ ಧ್ರುವ

ಹೊರಗೆ ನೋಡಬ್ಯಾಡ ತಿರುಗಿ ನೋಡೊ ಮೂಢ
ಸೆರಗು ಬಲುಗೂಢ ಬೆರಯೊ ನಿಜಗಾಢ ೧

ನಡೆ ಹೆಜ್ಜಿಮೆಟ್ಟಿ ಕೇಡಿಗ್ಯಾಗಿ ಕೆಟ್ಟ
ನೋಡು ಮನಮುಟ್ಟಿ ಕೂಡು ನಿಜ ಘಟ್ಟಿ ೨

ಬುದ್ಧಮುಕ್ತವೇನು ದ್ವಂದ್ವ ತಿಳಿಯೋ ನೀನು
ಹೊಂದಿಹೊಳೆವನು ತಂದೆ ಸದ್ಗುರು ತಾನು ೩

ಬುದ್ಧಿ ತಿಳಿಯದ್ಹೋಗಿ ಬಿದ್ಯೋ ಭವಕಾಗಿ
ಶುದ್ಧಿ ಹೇಳಲಾಗಿ ಸದ್ಗುರು ನಿನಗಾಗಿ ೪

ತಿಳಿದು ನಿಜಗತಿ ನೆಲೆಯಾಗೊ ಮಹಿಪತಿ
ಹೊಳೆವ ವಸ್ತುನೀತಿ ಬಲಿಯೊ ನಿಜಸ್ಥಿತಿ ೪

## ೨೮೭

ಶೋಧಿಸಿ ನೋಡಿರೋ ಸದಾ
ಬೋಧದ ನಿಜಬೋಧ ಧ್ರುವ

ಸಾಧಿಸಿ ನೋಡಿ ಸದ್ಗುರು ಕೃಪೆಯಿಂದ
ಸಾಧನಕೆದುರಿಡುವುದು ಆನಂದ
ಭೇದಿಸಿ ನೋಡುವದಿದೇ ತನ್ನಿಂದ
ಆದಿ ಅನಾದಿದೇ ಸಹಜಾನಂದ ೧

ತಂದುವಿಡಿದರಂತತ್ತೆ ನೋಡಿ
ಎಂತೆಂತೀಹ್ಯ ನಿಜದಂತೆ ಗೂಡಿ
ಅಂತರಾತ್ಮದಲೆ ಅನುಭವ ಬೆರೆದಾಡಿ
ಸಂತತ ಸದಮಲ ಸುಖಸೂರ್‍ಯಾಡಿ ೨

ವಿಹಿತಕೆ ವಿಹಿತಾಗುವ ಸುಪಥ
ದ್ವೈತಾದ್ವೈತಕಿದೆ ರಹಿತ
ಮಹಾಮಹಿಮರ ಆನಂದಭರಿತ
ಮಹಿಪತಿ ಮನೋನ್ಮನದ ಸುವಸ್ತ ೩

## ೨೮೮

ಶ್ರಯಧೇನು ಬಂತು ಮನಿಗೆ
ದಯ ಕರುಣದಿಂದೊಲಿದು ಸರ್ವಾರ್ಥಗರೆವುತಲಿ ಧ್ರುವ

ತನ್ನಿಂದ ತಾನೊಲಿದು ಚೆನ್ನಾಗಿ ತೋರ್ವಿಳಿದು
ಭಿನ್ನವಿಲ್ಲದೆ ನೋಡಿ ಹಂಬಲಿಸುತ
ಉನ್ನತೋನ್ನತ ಮೋಹ ಮೊಳಿಯೊಳಮೃತ ತುಂಬಿ
ಪುಣ್ಯಧಾರಿಂದೊರಗಿ ಭೋರಿಡುತಗಲೆರವುತಲಿ ೧

ಸುರಸ ಸಾರಾಯದನುಭವ ಬೆರಸಲಾಗಿ ತಾಂ
ವರ ಮಹಾಕೃಪೆ ಘನದೊಳವಿನಿಂದ
ಧರೆಯೊಳಾನಂದ ಸುಖ ಸಾರಿಡುತ ಪೂರ್ಣ
ಇರ್‍ಹುಳಗಲೆನದೆ ಸರ್ವಪತಿ ಯಿಂದ್ಹರುಷಗರೆವಾ ೨

ಬೆಳಗಿ ತನ್ನರ ಬೆಳೆಸಲಾಗಿ ಸದ್ವಸ್ತು ತಾಂ
ತಿಳಿದು ಶ್ರಯಧೇನಾಗಿ ಬಂತು ಬಳಿಗೆ
ಕಳವಳಿಸಿ ಕರುಣ ಕಟಾಕ್ಷದಿಂದಲಿ ನೋಡಿ
ಎಳೆಗರುವ ಮಹಿಪತಿಗಮೃತನುಣಿಸಿಕೊಳಲಾಗಿ ೩

## ೨೮೯

ಸಜ್ಜನರ ಸಂಗ ಸ್ವಹಿತಕೆ ಸುಖಸನ್ಮತ
ಹೆಜ್ಜೆಜ್ಜಿಗೆ ದಾರಿಡುತದೆ ಅಮೃತ ಧ್ರುವ

ಗಂಗಿಯೊಳು ಮುಳಗಿ ತಾ ಮಿಂದರ್ಹೋಗದು ಪಾಪ
ಹಾಂಗೆಂದಿಗಲ್ಲ ಸಜ್ಜನರ ಪ್ರತಾಪ
ಕಂಗಳಲಿ ಕಂಡರ್ಹೋಗುವುದು ತಾಪಾಪ
ಸಂಗ ಸುಖದಲಿ ಸರ್ವಪುಣ್ಯ ಮೋಪ ೧

ಚಂದ್ರ ಶೀತಳದೊಳು ನಿಂದರ್ಹೋಗುದು ತಾಪ
ಎಂದೆಂದಿಗ್ಹಾಂಗಲ್ಲ ಸಜ್ಜನ ಸಮೀಪ
ಒಂದೆ ಮನದಲಿ ನೆನೆದರ್ಹಿಂಗಿ ಹೋಗುದು ತಾಪ
ವಂದಿಸೀದವಾ ಮೂರು ಲೋಕ ತಾಪಾ ೨

ಕಲ್ಪತರುವಿಗೆ ಕಲ್ಪಿಸಿದರ್ಹೋಗುದು ದೈನ್ಯ
ಒಲಮಿಂದ್ಹಾಗಲ್ಲ ಸದ್ಗುರು ಸುಪುಣ್ಯ
ಕಲ್ಪಿಸದೆ ಕುಡುವದಿದು ನೋಡಿ ಘನ ತಾರ್ಕಣ್ಯ
ಸಲಹುತೀಹ್ಯ ಮಹಿಪತಿಗಿದೆವೆ ಧನ್ಯ ೩

## ೨೯೦

ಸದ್ಭಾವಮಾಡಿ ಸ್ಥಿರ ಸದ್ಗುರು ತಾನಿದ್ದಲ್ಲಿ ದೂರ
ಸದ್ಬೋಧಕಿದೆ ಸಾರ ಸದ್ಗೈಸುವ ಮನೋಹರ ಧ್ರುವ

ಕಣ್ಣಿಂದ ಕಡಿಯಲಿಲ್ಲ ಚೆನ್ನಾಗೆಲೆವೆ ನೋಡಿ
ಉನ್ನಂಥ ಮಹಿಮ ಪೂರ್ಣ ತಾನೆತಾನಾಗಿಹ್ಯ ಕೂಡಿ
ಉನ್ಮನವಾಗಿ ಬ್ಯಾಗ ಘನಸುಖ ಬೆರೆದಾಡಿ
ಪುಣ್ಯಕ ಪಾರವಿಲ್ಲ ಖೂನದೋರುದಿದರಡಿ ೧

ಸದ್ಭಕ್ತಿಗಿದೇ ಕೀಲ ಸಾಧಿಸುವದೀ ವಿಚಾರ
ಸದ್ಗತಿಗಿದೆಮೂಲ ಸಾಧುಜನರ ಸಹಕಾರ
ಸಾಧಕರ ಸುಶೀಲ ಬುಧಜನರ ಮಂದಾರ
ಸದ್ಘನದ ಕಲ್ಲೋಳ ವಸ್ತುದೋರುವ ವಿವರ ೨

ಗುರುದಯದಿಂದ ನೋಡಿ ಇದೆರಿಟ್ಟುವಂತೀ ಖೂನ
ಕರುಣಾಳು ಸ್ವಾಮಿ ನಮ್ಮ ತಾನೆದೋರಿದ ಸಾಧನ
ತರಣೋಪಾಯಕ ಪೂರ್ಣ ತೋರುದಿದನು ಸಂಧಾನ
ತರಳಮಹಿಪತಿಗಿದೆ ಇಹ್ಯ ಪರಕ ನಿಧಾನ ೩

## ೨೯೧

ಸತ್ಸಂಗವು ಲೇಸು ಸ್ವಹಿತಕೆ ಧ್ರುವ

ನೆರಿಲವರನುದಿನ ಬಾಳುದು ಲೇಸು
ಸರಸ ಸುಮಾತನೆ ಕೇಳುದು ಲೇಸು ೧

ನೋಡಿದವರಾಚರಣೆಯ ಲೇಸು
ಮಾಡಿದವರನು ಸರಣಿಯ ಲೇಸು ೨

ಮಹಿಪತಿಗಿದೆ ಸುಖದೋರಿತು ಲೇಸು
ವಿಹಿತಕ ವಿಹಿತಾಯಿತು ಬಲುಲೇಸು ೩

## ೨೯೨

ಸತ್ಸಂಗ ಮಾಡೊ ಮನವೆ ಚಿತ್ಸುಖ ನೋಡಲಿಕೆ
ಅತಿಸೂಕ್ಷ್ಮಾನಂದ ಸುಪಥ
ಅತಿಶಯಾನಂದ ಸದ್ಗತಿ ಸುಮೋಕ್ಷದಾಯಕ
ಹಿತದೋರಿಕೊಡುವ ಸದ್ಗುರುನಾಥ ಧ್ರುವ

ತೊಡಕಿ ಮಿಡುಕಬ್ಯಾಡ ಹಡಕಿ ವಿಷಯದೊಳು ಗಡಕವಾಗಿ
ಕೆಡುಕ ಬುದ್ಧಿಯಿಂದ ಕೆಡುದೇನ ಬಡದ ಭವಣೆ ಬಟ್ಟು
ಮಡದಿ ಮಕ್ಕಳಿಗೆ ದುಡಿದು ತಂದು ಅಡಕಿದರೆ
ತಾವು ಕೊಡುವರೇನ
ಒಡಲ ಹೊರಿಯಲಿಕ್ಕೆ ಒಡದ ಮಡಕಿಯಂತೆ ದಣಿಯಲಿಲ್ಲೆ
ತುಡಿಕಿ ಹೋಗುತಿಹಾಯುಷ್ಯಕ್ಷೀಣ ಸಡತ
ಹಾಕಿ ವೈವಯಮನ
ದುಡುಕಿಯೊಳಗಾಗಬ್ಯಾಡ ಪಡಕೋ
ಬ್ಯಾಗೆ ಗುರುದಯಕರುಣ ೧

ಸಿಲ್ಕಿಮಾಯ ಮಲ್ಕಿನೊಳು ಅಳ್ಕಿ ಆಲಪರಿಯಬ್ಯಾಡ
ಬಲ್ಕಿ ಮಾಡಿಕೊಳ್ಳಿ ನೀ ಸುಜ್ಞಾನ ಕ್ಷುಲ್ಲಕ ಬುದ್ಧಿಗಾಗಿ
ಅಳ್ಕಿ ಕಲ್ಕಿ ಬ್ಯಾಡೊ ನೀನು ತಿಳ್ಕೊ
ನಿನ್ನ ತನುವಿನೊಳಗೆ ಖೂನ
ನುಲ್ಕಿ ಸುಟ್ಟ ಮಲ್ಕಿನಂತೆ ಜನಕಾಲಂಬ ತೋರಿ ನೀನು
ಜಲಕಮಲದಂತಿರನುದಿನ ನಿಲ್ಕಿ ನೆಲೆಗೊಂಬುದಿದು
ತಳಕು ತನ್ನೊಳಗದೆಯೆಂದು ನಾಲ್ಕುವೇದ ಸಾರುತಿದೆ ಪೂರ್ಣ ೨

ವ್ಯರ್ಥಗಳಿಯ ಬ್ಯಾಡೋ ಮರ್ತ್ಯದೊಳು ನೀ ಮಾನವ ಜನ್ಮ
ಗುರ್ತುಮಾಡಿಕೊಳ್ಳೊ ಗುರುಪಾದ
ನಿರ್ತದಿಂದ ಅರ್ತು ಕೂಡಿ
ಬೆರ್ತುಭಾವಭಕ್ತಿ ಇಂದ ಕರ್ತು ನಿಜಾನಂದ ಗುರುಬೋಧ
ಥರಥರದಿ ತೋರಿ ಪೂರ್ಣ ಸಾರ್ಥಕ ಮಾಡುವದಿದು
ತೀರ್ಥಪುಣ್ಯ ಸರ್ವಕ್ಷೇತ್ರವಾದ ಅರ್ಥಿಯಿಂದವಿಡಿದು ಗುರು
ಮೂರ್ತಿಪಾದ ಮಹಿಪತಿಯ ಹಿತಾರ್ಥ
ಪಡಿಯೊ ನಿನ್ನ ಸ್ವಹಿತದ ೩

## ೨೯೩

ಸತ್ಯಾದ ನಡಿ ಹಿಡಿರೋ ಮನಜರು
ಸತ್ಯದಾ ನಡಿಗಿನ್ನು ಮತ್ತೊಂದು ಭಯವಿಲ್ಲ ಧ್ರುವ

ಸತ್ಯದಾನಡಿಗಿನ್ನು ಸತ್ಯ ನುಡಿಯಲು ಬೇಕು
ಸತ್ಯಂ ಸತ್ಯ ಶರಣರೆಲ್ಲಾ ಎತ್ಯಾಡಿಸುವಂತೆ
ಕೈಯಾರಕೊಂಡಿನ್ನು ಬಾಯಾರಬಾಡಿರೊ
ಮೈಯೊಳಗಿಹ ಕಾವನೈಯನ ಮರಿಯಬ್ಯಾಡಿ ೧

ಹುಸಿಯಾಡಿ ನೀವಿನ್ನು ಘಾಸಿಗೆ ಬೀಳಲಿ ಬ್ಯಾಡಿ
ವ್ಯಸನಕಾಗಿ ಬಿದ್ದು ದೆಶೆಗೆಟ್ಟು ಹೋಗಬ್ಯಾಡಿ ೨

ಅಶೆಯಕೊಟ್ಟು ನಿರಾಶಯೆ ಮಾಡಲಿಬ್ಯಾಡಿ
ಮೋಸ ಮುರಕದಿದ ಘಾಸಿ ಮಾಡಲಬ್ಯಾಡಿ ೩

ಘಟ್ಟಿಸಿ ಒಬ್ಬರ ಹೊಟ್ಟೆಹೊರಿಯಬ್ಯಾಡಿ
ಸಿಟ್ಟಿಲಿ ನೆಂಟರು ತುಟ್ಟಿಸಿ ಬಿಡಬ್ಯಾಡಿ ೪

ಗುಟ್ಟಿನೊಳಿಹ ಮಾತು ತುಟ್ಟಿಗೆ ತರಬ್ಯಾಡಿ
ಹೊಟ್ಟೆಲೆ ಹಡೆದವರ ಕಟ್ಟಿಗೆ ತರಬ್ಯಾಡಿ ೫

ಲೆತ್ತಪಗಡಿ ಅಡಿ ಹೊತ್ತುಗಳಿಯಬ್ಯಾಡಿ
ತುತ್ತುಕುಡಿಯೊಳಿದ್ದಾ ಪತ್ತಬಡಲಿಬ್ಯಾಡಿ ೬

ಹರಿಹರ ಭಕ್ತಿಗೆ ಬ್ಯಾರೆ ನೋಡಲಿಬ್ಯಾಡಿ
ಗುರುಕೃಪೆ ಪಡೆದಿನ್ನು ಗುರುತಿಟ್ಟು ನೋಡಿರೋ ೭

ಅನ್ನಬೇಡಿದವ ಗಿಲ್ಲೆನ ಬ್ಯಾಡಿ
ಹೊನ್ನು ಹೆಣ್ಣಿನ ಮ್ಯಾಲೆ ಕಣ್ಣಿಟ್ಟು ಕೆಡಬ್ಯಾಡಿ ೮

ಅಂತರಾತ್ಮದ ಪರಮಾತ್ಮನ ತಿಳಕೊಳ್ಳಿ
ಸ್ವಾತ್ಮ ಸುಖದ ಸವಿ ಸೂರ್ಯಾಡಿಕೊಳಲಿಕ್ಕೆ ೯

ಸ್ವಹಿತ ಸುಖದ ಮಾತು ಸಾಧಿಸಿಕೊಳಲಿಕ್ಕೆ
ಮಹಿಪತಿ ಹೇಳಿದ ಮಾತು ಮನ್ನಿಸಿ ತಿಳಿಕೊಳ್ಳಿ ೧೦

## ೨೯೪

ಸನ್ಮಾರ್ಗಪಿಡಿದು ಸದ್ವಸ್ತಿಯೊಳು ಬೆರೆದಿಹ
ಸದ್ಬ್ರಹ್ಮರಿಗೆ ನಮಸ್ಕಾರ ೧

ಸದ್ಗುರು ಕೃಪೆಯಿಂದ ಸದ್ಗತಿಯ ಪಡೆದಿಹ
ಸದ್ಭಕ್ತರಿಗೆ ನಮಸ್ಕಾರ ೨

ಅಧ್ಯಾತ್ಮವಿದ್ಯ ಸಾದ್ಯ ಮಾಡಿಕೊಂಡಿಹ
ಬುದ್ಧಿವಂತರಿಗೆ ನಮಸ್ಕಾರ ೩

ಸಿದ್ಧಾಂತ ಅನುಭವದ ಸಾಧನವು ಬಲಿದಿಹ
ಶುದ್ಧ ಬುದ್ಧರಿಗೆ ನಮಸ್ಕಾರ ೪

ಇದೆ ನಿಜತಿಳಿದಿಹ ಸದ್ಬೋಧದಲ್ಲಿ
ಪೂರ್ಣ ಸದ್ಭಾವಿಗಳಿಗೆ ನಮಸ್ಕಾರ ೫

ಆದಿತತ್ವದ ನೆಲೆಯು ಭೇದಿಸಿ ಬೆರೆದಿಹ
ಬುದ್ಧಜನರಿಗೆ ನಮಸ್ಕಾರ ೬

ಕ್ರೋಧ ಕಳೆದು ಸದಾ ಶಾಂತಪದಹೊಂದಿದ
ಸಾಧುರಿಗೆ ನಮಸ್ಕಾರ ೭

ಭಿನ್ನ ಭೇದವನಳಿದು ತನ್ನ ತಾ ತಿಳಿದ
ಸುಜ್ಞಾನಿಗಳಿಗೆ ನಮಸ್ಕಾರ ೮

ಮೇಲ್ಗಿರಿಯೊಳಗಿಪ್ಪ ಮೂಲಮೂರ್ತಿಯ ತಿಳಿವ
ನೆಲೆವಂತರಿಗೆ ನಮಸ್ಕಾರ ೯

ಮಾಯಮೋಹವನಳಿದು ಸೋಹ್ಯ ಸೊನ್ನೆಯ ತಿಳಿದ
ಮಹಾಮಹಿಮರಿಗೆ ನಮಸ್ಕಾರ ೧೦

ಆರುಮೂರನೆ ಗೆದ್ದು ಏರಿ ತ್ರಿಪುರ ದಾಟಿ
ಮೀರಿಹರಿಗೆ ನಮಸ್ಕಾರ ೧೧

ಮನಕರಗಿ ಘನ ಬೆರೆದು ತಾನೆ ತಾನಾಗಿಹ
ಮೋನ ಮುಗ್ಧರಿಗೆ ನಮಸ್ಕಾರ ೧೨

ತತ್ವಮಸಿ ಅರ್ಥದಿತ್ಯರ್ಥವನು ತಿಳಿದಿಹ
ಮುಕ್ತಜನರಿಗೆ ನಮಸ್ಕಾರ ೧೩

ತಾನರಿತು ಸುಖಿಯಾಗಿ ಇನ್ನೊಬ್ಬರಿಗೆ
ಕಣ್ದೆರೆಸುತಿಹರಿಗೆ ನಮಸ್ಕಾರ ೧೪

ತರಳ ಮಹಿಪತಿ ಹೊರೆವ ಅರುಹು ಕುರುಹವನಿತ್ತ
ಗುರುಹಿರಿಯರಿಗೆ ನಮಸ್ಕಾರ ೧೫

## ೨೯೫

ಸರ್ವರೆಗೆಲ್ಲ್ಯದ ಸ್ವಸುಖ ಧ್ರುವ

ಭ್ರಮದೋರುವದೆಲ್ಲ ಅರಿದವಗಾದ
ಸಮದೃಷ್ಟಿಯ ನೆಲೆಗೊಂಡವಗಾದ ೧

ವಿತ್ತ ವಿಷಯದಾಶಳಿದವಗಾದ
ಚಿತ್ತ ಸ್ವಚ್ಛವು ಸ್ಥಿರಗೊಂಡವಗಾದ ೨

ಸ್ವಹಿತ ಸಾಧನವು ಸಾಧಿಸಿದವಗಾದ
ಮಹಿಪತಿ ಗುರುದಯಪಡೆದವಗಾದ ೩

## ೨೯೬

ಸ್ವಹಿತ ಸುಪಥ ಸಾಧನ ಪಡೆದು ಸ್ವಸುಖಗೂಡಿರೊ
ವಿಹಿತ ಮರೆದು ವಿಭ್ರಮಾಚರಿಸಬ್ಯಾಡಿರೋ ಧ್ರುವ

ತಾನು ದಾರಿಗೆ ತನಗೆ ದಾರು ತಿಳಿದು ನೋಡಿರೊ
ಜ್ಞಾನ ಹೀನರಾಗಿ ಗರ್ವ ಹಿಡಿಯಬ್ಯಾಡಿರೊ
ಸ್ವಾನುಭವಾಮೃತವನ್ನುಂಡು ಸವಿ ಸೂರ‍್ಯಾಡಿರೊ
ನಾನು ನೀನು ಎಂಬ ಬಿನಗುಭ್ರಮ ಈಡ್ಯಾಡಿರೊ ೧

ಮನದ ಕೊನಿಯಲಿದ್ದ ಘನದಾಶ್ರಯವು ಮಾಡಿರೊ
ತನುವು ಲಂಪಟ್ಹಿಡಿದು ತನ್ನ ಮರಿಯಬ್ಯಾಡಿರೊ
ಜನುಮ ಸಫಲವಾಗುವ ಸುಜಾಗ್ರತಿಯ ಪಡೆಯಿರೊ
ನೆನವು ನೆಲೆಯಗೊಂಡು ನಿಜದಾಶ್ರಯದಲಿ ನಡೆಯಿರೊ ೨

ಮರ್ತ್ಯ ಮೈಯ ವ್ಯರ್ಥ ದಿನವಗಳಿಯಬ್ಯಾಡಿರೊ
ನಿರ್ತದಿಂದ ಅರ್ತ ಭಾವದರ್ಥಿ ನೋಡಿರೊ
ಕರ್ತು ಭಾನುಕೋಟಿತೇಜನ ಗುರ್ತು ಮಾಡಿರೊ
ಅರ್ತು ಮಹಿಪತಿ ಸ್ವಾಮಿಪಾದ ಬೆರ್ತುಕೂಡಿರೊ ೩

## ೨೯೭

ಸಾಧನ ಬ್ಯಾರ್‍ಯದೆ ಸ್ವಹಿತ ಸಾಧನ ಬ್ಯಾರ್‍ಯದೆ ಧ್ರುವ

ವಿದ್ಯಾ ವ್ಯುತ್ಪತ್ತಿ ಬೀರಿದರೇನು
ರಿದ್ಧಿಸಿದ್ಧಿಯುದೋರಿದರೇನು ೧

ಜಪತಪ ಮೌನಾಶ್ರಯಿಸಿದರೇನು
ಉಪವಾಸದಿ ಗೊಪೆ ಸೇರಿದರೇನು ೨

ದೇಶದ್ವೀಪಾಂತರ ತಿರುಗಿದರೇನು
ವೇಷ ವೈರಾಗ್ಯವ ತೋರಿದರೇನು ೩

ಭಾನುಕೋಟಿತೇಜ ಒಲಿಯದೆ ತಾನು
ಅನೇಕ ಸಾಧನಲ್ಯಾಗುವದೇನು ೪

ದೀನ ಮಹಿಪತಿಸ್ವಾಮಿಯಾಶ್ರಯಧೇನು
ಮನವರ್ತದೆ ಕೈಯಗೊಡುವ ತಾನು ೫

## ೨೯೮

ಸಾಧನಿದೇ ಸುಗಮಾ ಇದೇ ಸುಗಮಾ
ಸತ್ಸಂಗದಿಹುದು ನೇಮ ಧ್ರುವ

ಸಾಧು ಸಮಾಗಮ ಸಮಾಗಮ
ಭೇದಿಸುವದು ಭವಭ್ರಮ ೧

ತರಣೋಪಾಯಿದು ಒಂದೆ ಇದು ಒಂದೆ
ನಿರ್ಣೈಸದೆ ಮೊದಲಿಂದೆ ೨

ಸಾಧನಿದೆ ಸ್ವಹಿತ ಇದೆ ಸ್ವಹಿತ
ಸುಧಿಗಡದಿಹ ನವನೀತ ೩

ಸರಿ ಈ ಸಾಧನಕಿಲ್ಲ ಸಾಧನಕಿಲ್ಲ
ಗುರು ಶರಣಾಗತ ಬಲ್ಲ ೪

ಸಾಧನದಿ ಸುವಸ್ತ ಸುವಸ್ತ
ಸಾಧಿಸಿತು ಮಹಿಪತಿಗೆ ಸಾಭ್ಯಸ್ತ ೫

## ೨೯೯

ಸಾಧಿಸದೆ ಹೊಳೆಯ
ಹೃದಯದೊಳಿಹ್ಯ ಗೆಳಿಯ ಧ್ರುವ

ಸಾಧಿಸಬೇಕೊಂದು ಪಾಲ
ಭೇದಿಸಿ ನೋಡುವದ್ಹತ್ತುಪಾಲ
ಎದುರಿಡುವಂತೆ ಗೋಪಾಲ
ಬುಧಜನ ಪ್ರತಿಪಾಲ ೧

ಸಾಧನವೆಂಬುದೆ ಸುಪಥ
ಬೋಧವೆ ಸದ್ಗುರುಮಾರ್ಗ ಸ್ವಹಿತ
ಸದಮಲಾನಂದಭರಿತ
ಇದೇ ಶಾಶ್ವತ ೨

ಸಾಧಿಸಿ ಸದ್ಗುರು ಕೃಪೆಯಿಂದ
ಭೇದಿಸು ಮಹಿಪತಿ ನಿನಗಿಂದು ಚೆಂದ
ಹೃದಯದೊಳ್ಹಾನ ಮುಕುಂದ
ಬದಿಯಲಿ ಗೋವಿಂದ ೩

## ೩೦೦

ಸಾಧುರ ಮಹಿಮೆಯು ಸಾಧಿಸದೆ ತಿಳಿಯದು
ಭೇದಿಸದಲ್ಲದೆ ಹೊಳೆಯದಿದು ಧ್ರುವ

ತೆಂಗಿನ ಫಲದಂತವರ ಸಂಗದಸುಖ
ಹಿಂಗದಂತನುದಿನ ಅನುಭವಿಸುವದಲ್ಲದೆ ೧

ಬಂಡೆಯೊಳಿದ್ದದ ತಾ ಒಡೆದು ಪ್ರಾಶಿಸಿದಂತೆ
ಕಡಲೊಳಗಿದ್ದ ರತ್ನ ಮುಳುಗಿ ತೆಗೆದಂತೆ ೨

ಅಂತರಾತ್ಮದ ಸುಖ ಮಹಾತ್ಮರಗಲ್ಲದೆ
ಮೂಢಾತ್ಮರಿಗಿದು ಎಲ್ಲಿಹುದು ೩

ಸಾಧು ಸಂತರ ನಿಜದಾಸ ಮಹಿಪತಿಗಿನ್ನು
ಸಾಧು ಸಂಗತಿ ಜೀವನ್ಮುಕ್ತಿಯು ೪

## ೩೦೧

ಸಾಧು ಸಮಾಗಮ ಸಾಧನಕುತ್ತಮೋತ್ತಮ
ಸಾಧಿಸಿದವ ಸಕಲಕ ನಿಸ್ಸೀಮ ಧ್ರುವ

ಸಾಧು ಸುದರುಶನ ಸದಮಲಾನಂದ ಪೂರ್ಣ
ಸದಾ ಸದ್ಗೈಸುವ ಸುಖಸಾಧನ ೧

ಸಾಧು ಸಂಭಾಷಣ ಸುಧಾರಸ ಪ್ರಾಶನ
ಸದೋದಿತ ಸಹಿತ ಭೂಷಣ ೨

ಸಾಧು ಸುಸೇವೆಯಿಂದ ಸಾಧಿಸಿ ಬಹ ಗೋವಿಂದ
ಸದಾ ಸಕಾಲದಲಿ ಮಹಿಪತಿಗಾನಂದ ೩

## ೩೦೨

ಸಾಧು ಸಹವಾಸ ಸದಮಲಾನಂದ ಸಂತೋಷ ಧ್ರುವ

ಇದ್ದರಿರಬೇಕು ನೋಡಿ ಅಧ್ಯಕ್ಷರಾಶ್ರಯ ನಿಜಗೂಡಿ
ಸಿದ್ಧಿ ಬಾಹುದು ಎದುರಿಡಿ ಇದ್ದದ್ದೆ ಕೈಗೂಡಿ ೧

ಬಿಡಬಾರದು ಎಂದಿಗೆ ನೋಡಿ ಒಡಲು ಹೊಕ್ಕರವನೆ ಕೂಡಿ
ಪಡೆದು ಸ್ವಸುಖ ಸೂರ್‍ಯಾಡಿ ದೃಢಭಾವನೆ ಮಾಡಿ ೨

ಸಾಧಿಸಿ ಮಹಿಪತಿ ನಿಜ ಭೇದಿಸಿ ನೋಡನುಭವದ ಬೀಜ
ಆದಿ ಅನಾದಿ ಸಹಜಬೋಧದ ನಿಜಗುಜ ೩

## ೩೦೩

ಸಾಧು ಸ್ವರೂಪ ಸಾದು ಸ್ವರೂಪ
ಸಾಧಿಸಿದವ ಕುಲದೀಪ ಧ್ರುವ

ಸ್ವರೂಪ ನಿಜಗೌಪ್ಯ ಸರ್ವರಿಗಿದು ಅಪ್ರಾಪ್ಯ ೧

ನಡಿನುಡಿ ಬಲು ಗೂಢ ಪಡೆದವ ತಾ ಘನ ಪ್ರೌಢ ೨

ದುರ್ಲಭ ದರುಶನ ಸುಲಭಲ್ಯಾಗದು ಖೂನ ೩

ಸ್ವಹಿತ ಸಾಧು ದಯ ಮಹಿಪತಿಗಾಯಿತು ಉದಯ ೪

## ೩೦೪

ಸಾಯಾಸದಿಂದ ಸಾಧಿಸಬೇಕು ಸತ್ಸಂಗ
ಮಾಯಿಕಬುದ್ಧಿ ಬಿಟ್ಟು ನೋಡಿ ಅಂತರಂಗ ಧ್ರುವ

ಆಯಿತವಾಗಿ ತೋರುತಾನೆ ಶ್ರೀರಂಗ
ಸಾಯದಲ್ಯಾಗುತದೆ ನೋಡಿ ಭವಭಂಗ ೧

ಹಿಡಿದರೆ ಹಿಡಿಯಬೇಕೊಂದೆ ಸಾಧು ಸಹವಾಸ
ಪಡೆದರೆ ಪಡೆಯಬೇಕೊಂದೆ ತಾ ನಿಜಧ್ಯಾಸ
ನಡಿನುಡಿ ಒಂದೆ ಆಗುವುದೆ ಅಪ್ರಯಾಸ
ತಡಿಯದೆ ಮಾಡಬೇಕೊಂದೆ ನಿಜಾಭ್ಯಾಸ ೨

ಅನೇಕ ಪುಣ್ಯ ಒದಗಿತು ಸತ್ಸಂಗದಾಗ
ದಿನಕರಕೋಟಿ ಹೊಳೆವುದು ಮನದೊಳಗೆ ಬ್ಯಾಗ
ತನುಮನವಿಟ್ಟು ಕೇಳಿ ಗುರುಪಾದಕೀಗ
ಘನಸುಖದಾಯಕ ಮಹಿಪತಿಯ ಸದ್ಗುರುವಿಗೆ ೩

## ೩೦೫

ಸಾವಧಾನವೆಂದು ಶ್ರುತಿಸಾರುತಿದೆಕೋ
ಭಾವದಿಂದಲಿ ಮನವೆ ನೀ ಎಚ್ಚತ್ತುಕೋ ಧ್ರುವ

ಭವದ ನಿದ್ರಿಗಳೆದು ಸಾವದಾನವಾಗೋ
ನಿವಾಂತ ಕೂಡಲಿಕ್ಕದ ಬಲು ಬೆಳಗೋ
ವಿವೇಕವೆಂಬ ಸ್ಮರಣೆ ಇದೆ ನಿನಗೋ
ಭವಹರ ಗುರುವಿಗೆ ಶರಣಯುಗೋ ೧

ಮುಚ್ಚಿದ ಮಾಯದ ಮುಸಕ್ತಾರಿಸುವದೆ ಜ್ಞಾನ
ಎಚ್ಚತ್ತಮ್ಯಾಲಿದೆ ಖೂನ ಸುವಸ್ತು ಧ್ಯಾನ
ಅಚ್ಯುತಾನಂತನ ಕಾಂಬುದನುಸಂಧಾನ
ಅಚಲವೆಲ್ಲಕ್ಕಿದೆ ಸುಪಥಸಾಧನ ೨

ಬೆಳಗಿನ ಬೆಳಗಿದೆ ಬಲು ನಿಶ್ಚಲ
ಒಳಗೆ ಹೊರಗೆ ತೋರುವ ಆನಂದ ಕಲ್ಲೋಳ
ಹೊಳೆವ ಮಹಿಪತಿಸ್ವಾಮಿ ಪ್ರಭೆಯು ಬಹಳ
ಬೆಳಗಾಯಿತು ಗುರುದಯ ಪ್ರಬಳ ೩

## ೩೦೬

ಸಾವಧಾನವೆಂದು ಶ್ರುತಿಸಾರುತಿದೆಕೊ ಸಾವಧಾನ
ಸಾವಧಾನಾಗಿ ಸಾಧಿಸಿ ಶ್ರೀಹರಿ ಸ್ವರೂಪಜ್ಞಾನ ಧ್ರುವ

ಕಾಯದ ಕಳವಳ ಕಂಗೆಡಿಸದೆ ಮುನ್ನೆ ಸಾವಧಾನ
ಮಾಯಮೋಹದ ಭ್ರಮೆದೋರದ ಮುನ್ನೆ ಸಾವಧಾನ ೧

ಕಾಮಕ್ರೋಧ ತನ್ನ ನೇಮಗೆಡಿಸಿದ್ಹಾಂಗ ಸಾವಧಾನ
ತಾಮಸದೊಳು ಕೂಡಿ ತರ್ಕಸ್ಯಾಡದ್ಹಾಂಗ ಸಾವಧಾನ ೨

ಆಸನ ವ್ಯಸನ ಕೂಡಿ ಹಸನ ಕೆಡದ್ಹಾಂಗ ಸಾವಧಾನ
ವಿಷಯ ವಿಭ್ರಮದೊಳು ವಶವಗುಡದ್ಹಾಂಗ ಸಾವಧಾನ ೩

ನಿದ್ರಿವೆಂಬುದು ತನ್ನ ಬುದ್ಧಿಗೆಡಿಸದ್ಹಾಂಗ ಸಾವಧಾನ
ಸದ್ಯ ತಾನಾರೆಂದು ಶುದ್ಧಿ ತಿಳುವ್ಹಾಂಗ ಸಾವಧಾನ ೪

ಸ್ವಹಿತ ಸದ್ಗುರು ಪಾದ ರಕ್ಷಿಸುವದರಲಿ ಸಾವಧಾನ
ವಿಹಿತಿದೆ ಮಹಿಪತಿ ಶ್ರಮಪಡುವ ನಿತ್ಯ ಸಾವಧಾನ ೫

## ೩೦೭

ಸುಗ್ಗಿ ಮಾಡುವ ಬನ್ನಿ ಸುಜ್ಞಾನದ ಧ್ರುವ

ಬೆಳೆದ ಘನಸುಖ ಬೇಕಾದ್ಹಾಂಗೆ
ತಿಳಿದವರುಂಡುಟ್ಟು ದೇಗುವ್ಹಾಂಗೆ ೧

ಬಯಸುವ ಬಯಕಿಗೆ ಉಂಟಾಗ್ಯದೆ
ಶ್ರೇಯಸುಖ ರಾಶಿರಾಶಿಯು ಒಟ್ಟೈದೆ ೨

ಸಾರುತ ಶ್ರುತಿ ಸವಿಷೊಗಳುತಲ್ಯದೆ
ಬೀರುತ ಜನಮಯ ಸಾರಿ ಚೆಲ್ಯದೆ ೪

ದೀನ ಮಹಿಪತಿಗಾನಂದವ್ಯಾಗದೆ
ಮನದಿರಗಿ ಉನ್ಮನವಾಗ್ಯನೆ ೫

## ೩೦೮

ಸುಮ್ಮನಹುದು ನೋಡಿ ಸ್ವಾತ್ಮ ಸುಖದನುಭವ
ಹಮ್ಮಳಿದು ತನ್ನೊಳು ತಾ ತಿಳಿಯದನಕ ಧ್ರುವ

ಏನು ಕೇಳಿದರೇನು ಏನು ಹೇಳಿದರೇನು
ಖೂನದೋರದು ತಾನು ಸ್ವಾನುಭವದ
ನಾನೆಂಬುದೆನಲಿಕ್ಕೆ ಏನು ಮಾಡಿದರೇನು
ಜ್ಞಾನ ಗಮ್ಯವಸ್ತು ತಾನೊಲಿಯದನಕ ೧

ಕನಸು ಮನಸಿನ ಕಲಿಯು ಕಲಿತು ಕೆಟ್ಟಿರಲಿಕ್ಕೆ
ಅನುಮಾನಗಳಿಯದಪಭ್ರಂಶಗಳಿಗೆ
ಅನುದಿನದಲಾಶ್ರಯಿಸಿ ಘನಗುರು ಶ್ರೀಪಾದವನು
ನೆನೆನೆನೆದು ಸುಖವು ನೆಲೆಗೊಳ್ಳದನಕ ೨

ಮಹಾ ಮಹಿಮೆಯುಳ್ಳ ಗುರುದಯ ಪಡಕೊಂಡು
ಮನೋಜಯಸುದಲ್ಲದೆ ಘನಮಯ ಹೊಳೆಯದು
ಮಹಿಪತಿಯ ಸ್ವಾಮಿ ಸದ್ಗುರು ಭಾನುಕೋಟಿ ತೇಜ
ಬಾಹ್ಯಾಂತ್ರ ಪರಿಪೂರ್ಣ ತಾನಾಗದನಕ ೩

## ೩೦೯

ಸುಮ್ಮನಹುದೆ ಬ್ರಹ್ಮಾನಂದದ ಸುಖವು ಧ್ರುವ

ಮನವಿರಲು ಮಡದಿಯ ಮ್ಯಾಲೆ
ಘನಗುಡುವದೆ ನೆನದಾಗಲಿ
ಖೂನದೋರುದು ಆವಾಗಲಿ ಜನರಂಜನಿ ಶೀಲೆ ೧

ತನುವುತನ್ನಲ್ಲಿರಕ್ಕೆ ಪೂರ್ಣ ಘನಗುರುವಿಗೆ ತಾ ಅರ್ಪಿಸಿತೇನ
ಜನಮಾಡುವುದು ಈ ಸಾಧನ ಅನುಮಾನದ ಖೂನ ೨

ಧನವಿಟ್ಟಿ ಹತಾನೆ ಗೌಪ್ಯದಲಿ ಅನುದಿನ ಹೊರಳ ಗುರು
ಪಾದದಲಿ ನೀನೆ ಗತಿ ಎಂದೆನುತಲಿ ನೆನೆವನು ಬಾಯಲಿ ೩

ಗುರುಗುಣಕೆ ಮೂರ್ಛಾದ್ಹೊಚ್ಚಿರಲಿ ತೋರಬಲ್ಲುದೆ ಸುಜ್ಞಾ
ನದ ಕೀಲಿ ಬರಿಯ ಮಾತಿನ ಭಕ್ತಿಲಿ ಅರವಾಗುವದೆ ನೆಲಿ ೪

ಠಕ್ಕ ತನಕೆ ಸಿಲ್ಕುದೆ ಸದ್ವಸ್ತು ಲೆಕ್ಕವಿಲ್ಲದೆ ಅಮೋಲಿಕ
ಮಾತಿಲ್ಯಾಕೋ ಮಹಿಪತಿ ಭಾವವಿತ್ತು ಅಕ್ಕಿಸಿದೋ ಬೆರ್ತು ೫

## ೩೧೦

ಸುಮ್ಮನಿರಬ್ಯಾಡಿ ನಿಮ್ಮೊಳು ನೀಟ ನೋಡಿಒಮ್ಮನವ ಮಾಡಿ
ಪರಬ್ರಹ್ಮನೊಲು ಕೂಡಿ ಧ್ರುವ

ಹೊತ್ತುಗಳಿಯಲು ಬ್ಯಾಡಿ ಹೃತ್ಕಮಲದೊಳು ನೋಡಿ
ಅತ್ತಿತ್ತಲಾಗದೆ ಚಿತ್ತಸ್ವಸ್ಥ ಮಾಡಿ
ಹತ್ತಿಲಿಹ ವಸ್ತುವನು ಪ್ರತ್ಯಕ್ಷ ಮಾಡಿ
ನಿತ್ಯ ನಿಜಾನಂದ ಸುಪಥವು ಗೂಡಿ ೧

ಮುತ್ತಿನಂಥ ಜನ್ಮ ವ್ಯರ್ಥಗಳಿಯಲಿ ಬ್ಯಾಡಿ
ನಿತ್ಯ ಸಾರ್ಥಕದ ಸಾಧನವ ಮಾಡಿ
ಸತ್ಯ ಶಾಶ್ವತದಾವದೆಂದು ಖೂನದಲಿ ಅಡಿ
ಕೃತ್ಯಾ ಕೃತ್ಯಾಗುವ ಸ್ವಸುಖ ಬೆರೆದಾಡಿ ೨

ದೀನ ಮಹಿಪತಿ ಸ್ವಾಮಿ ತಾನೊಲಿದು ಬಾವ್ಹಾಂಗ
ಜ್ಞಾನಾಭ್ಯಾಸವ ಮಾಡಿಕೊಳ್ಳಿ ಬ್ಯಾಗ
ಭಾನುಕೋಟಿ ತೇಜ ದೀನದಯಾಳು ತಾಂ
ನೆನೆವರಿಗನುಕೂಲವಾಗುತಿಹ್ಯ ಈಗ ೩

## ೩೧೧

ಸುಮ್ಮನಿರಬೇಕು ಸುಜ್ಞಾನಿ ಜಗದೊಳಗೆ
ಹಂಸೋಹಂ ಭಾವದ ಉಸಿರೊಡಿಯದ್ಹಾಂಗೆ ಧ್ರುವ

ಎಲ್ಲದೋರ್ವದು ಮರೆದು ಎಲ್ಲರೊಳಗೆಹದರಿದು
ಎಲ್ಲರೊಳಗೆಲ್ಲ ತಾನಾಗಬೇಕು
ಎಲ್ಲರೊಳು ತಾನಾಗಿ ಎಲ್ಲ ತನ್ನೊಳಗಾಗಿ
ಬೆಲ್ಲ ಸವಿದ ಮೂಕನಂತಾಗಬೇಕು ೧

ಬಲ್ಲವತವನು ನೀಡಿ ಬಲ್ಲನೆತಾನಾಗಿ
ಬಲ್ಲರಿಯೆನೆಂಬುದನು ಈಡ್ಯಾಡಬೇಕು
ಬಲ್ಲರಿಯದೊಳಗಿದ್ದನೆಲ್ಲ ತಿಳಿಕೊಳ್ಳಬೇಕು
ಸೊಲ್ಲಿಲ್ಹೇಳುವ ಸೊಬಗ ಬೀರದಿರಬೇಕು ೨

ಸೋಹ್ಯ ಸೂತ್ರವ ತಿಳಿದು ಬಾಹ್ಯ ರಂಜನಿ ಮರೆದು
ದೇಹ ವಿದೇಹದಲ್ಲಿ ಬಾಳಬೇಕು
ಮಹಿಗೆ ಮಹಿಪತಿಯಾಗಿ ಸ್ವಹಿತ ಸದ್ಗುರುನಾದ
ಶ್ರೀಹರಿ ಗುರುತನುಂಡು ಸುಖದಲಿ ಸುಖಿಸಬೇಕು ೩

## ೩೧೨

ಸುಮ್ಮನೆ ದೊರಕೊಂಬುದೆ
ಬ್ರಹ್ಮಾನಂದದ ಮೂರ್ತಿಯ ನೇಮಿಸಿ ನೋಡದೆ ಧ್ರುವ।

ಕಣ್ಣುಗಳಾಡಗುಡದೆ ಕಣ್ಣಿನೊಳಗಿಟ್ಟುಕೊಂಡು
ಕಣ್ಣುಕಂಡುಡುಗಾಣದೆ ಘನ ಗುರುಮೂರ್ತಿಯ ೧

ಮನಗಲ್ವನೆಗ್ಗರಿಯಗೊಡದೆ ಮನಸಿನೊಳಿಟ್ಟುಕೊಂಡು
ಮನಗುಂಡು ನೆಲಿಯುಗೊಳ್ಳದೆ ಘನಗುರು ಶ್ರೀಪಾದ ೨

ಸದ್ಗುರುದಯ ಪಡಕೊಂಡು ಸಾಧಿಸಿದಲ್ಲದೆ ಈ ಖೂನ
ಹೃದಯದಲಿ ನೆಲಿಯುಗೊಂಬನೆ ಮಹಿಪತಿಗುರುಸ್ವಾಮಿ ೩

## ೩೧೩

ಸುಮ್ಮನೆ ಸುರಿವದೆ ಬ್ರಹ್ಮಾನಂದದ ಸುಖ
ಒಮ್ಮನಾಗದೆ ಒಲಿಯದು ನಮ್ಮಯ್ಯನ ಕೃಪೆ ಧ್ರುವ

ಉನ್ಮನವಾಗದೆ ಸನ್ಮತದೋರದು
ಚಿನ್ಮಯಾನಂದ ಮಹಿಮೆ ಕಣ್ದೆರೆಯದು ೧

ಕಣ್ಣು ಕಂಡು ಕಾಣದೆ ಧನ್ಯವಾಗದು ಪ್ರಾಣ
ಚೆನ್ನಾಗಿ ಮಾಡಿ ಸಾಧನ ಕಣ್ಣಾರೆ ಕಂಡು ೨

ಲೇಸಾಗಿ ಭಾಸುತದೆ ಭಾಸ್ಕರಗುರು ಕೃಪೆ
ದಾಸಮಹಿಪತಿ ಮನದೊಳು ವಾಸವಾಗಿದು ೩

## ೩೧೪

ಹರಿಹರಿ ಎನ್ನಿ ಹರಿವದು ಪಾಪ ಧರೆಯೊಳು ಧರೆಯೊಳು
ಕರಮುಗಿದು ಗುರುವಿಗೆ ಕೇಳುವುದು ಬಲುಮೇಲು ಧ್ರುವ

ಮೂಢಗೆ ಉಪಾಯ ಹೇಳಿದರೆ ತಿಳುವದೆ ತಿಳುವದೆ
ಖೋಡಿಗೆ ಸುಲಕ್ಷಣದ ಮಾತು ಹೊಳೆವದೆ ೧

ಮೋಡಿನ ಮುಸುಕಿನಲಿ ಸೂರ್ಯನ
ಬಿಸಲು ಬೀಳುದೆ ಬೀಳುದೆ
ಗೂಢ ಗುರುವಿನ ಮಾತಿದು ನಾಡಿಗೆ ತಿಳುವದೆ ೨

ವಿಷ ಕಚ್ಚಿದ ಮನಕೆ ಸುಘನ ಭಾಸುದೆ ಭಾಸುದೆ
ತುಸು ಝರಿ ಇಲ್ಲದೆ ಬಾವಿಲಿ ನೀರು ಸೂಸುದೆ ಸೂಸುದೆ ೩

ಹಸಗೆಟ್ಟಹ್ಯ ಕುಕ್ಕಡಿನೂಲ್ಹಾಸಿಗೆ ಬಾಹುದೆ ಬಾಹುದೆ
ಕಸಕಡ್ಡಿಲ್ಲದ ಮುಗಿಲೆಂದಿಗೆ ತಾ ಮಾಸುದೆ ೪

ಮೀಸಲ ಮನ ಒಂದಾದರೆ ಸಾಕು ತಿಳಿಕೊಳ್ಳಿ ತಿಳಿಕೊಳ್ಳಿ
ಭಾಸ್ಕರ ಗುರುರಾಯನ ಶ್ರೀಪಾದಕೆ ಬಲಗೊಳ್ಳಿ ಬಲಗೊಳ್ಳಿ ೫

ಲೇಸಿನ ನಿಜಸುಖ ನೆರೆಗೊಳ್ಳು ಮಹಿಪತಿ ನಿನ್ನಲ್ಲಿ ನಿನ್ನಲ್ಲಿ
ಹೇಸಿ ಮುಖದೋರದೆ ಹೋಗುವುದು ಭವದ ತಳ್ಳಿ ೬

## ೩೧೫

ಹಸ್ತ ಪ್ರಕ್ಷಾಲ್ಯೆಂಬುದು ಇದೆ ನೋಡಿ
ನಿತ್ಯಾನಿತ್ಯ ವಿಚಾರಮಾಡಿ ಧ್ರುವ

ವಿವೇಕವೆಂಬುದೆ ಉದಕ ಪವಿತ್ರಮಾಡಿತು ಮೂರು ಲೋಕ
ಭವದೆಂಜಲ ಹೋಯಿತು ನಿಸ್ತುಕ ಪಾವನಗೈಸಿತು ಸ್ವಸುಖ ೧

ಕೈಬಾಯಿ ತೊಳಿಯಿತು ನಿರ್ಮಳ ಭಯ
ಹೋಯಿತು ಭ್ರಾಂತಿ ವಿಕಳ
ದಯೆ ಮಾಡಿದು ಗುರು ನಿಶ್ಚಲ
ಶ್ರಯದೋರಿತು ಸಾಯೋಜ್ಯ ಢಾಳ ೨

ಎಂಜಲ ಹೋಯಿತು ಭವ ಭಯಪೂರ್ಣ
ಅಂಜಿಕ್ಯಾರಿಸಿತು ಗುರುಜ್ಞಾನ
ಪ್ರಾಂಜಲಾಯಿತು ಪರಮ ಸಾಧನ ನಿಜ
ಮಹಿಪತಿಗಿದೆ ಭೂಷಣ ೩

## ೩೧೬

ಹಿಂಗದಿದು ಭವ ಲಿಂಗದೇಹ ಭಂಗಾಗದೆ ಧ್ರುವ

ಮಾಯಮೂಲಳಿಯದೆ ಮನಮೈತೊಳಿಯದೆ
ದೇಹಭಾವಳಿದು ಸಂದೇಹಗಳಿಯದೆ ೧

ಆಶೆಯನು ಕಳಿಯದೆ ವಾಸನೆಯ ತೊಳಿಯದೆ
ಸೂಸುತಿಹ್ಯ ವ್ಯಸನ ವ್ಯಾಸಂಗವಳಿಯದೆ ೨

ಗರ್ವಗುಣವಳಿಯದೆ ನಿರ್ವಿಗುಣ ಹೊಳಿಯದೆ
ಮಹಿಪತಿಯ ಸರ್ವಮಯವಸ್ತು ತಿಳಿಯದೆ ೩

## ೩೧೭

ಸಂಗ ವಿಡಿ ವಿಡಿ ಸಾಧು ಸಂಗ ವಿಡಿ ವಿಡಿ ।
ಸಂಗ ವಿಡಿಯಂಗದೊಳಗ ।
ಮಂಗಳುತ್ಸಾಹ ದೋರುವರಾ ಪ

ಹರಿಪದ ಪರಾಗ ನುಂಡು ।
ಹರುಷವೇರಿ ಭವಶರಧಿಗೆ ।

ಹರಿಯ ಭಕುತಿ ಸೇತುಗಟ್ಟಿ ।
ತೋರಿಸಿ ಜನರ ತಾರಿಸುವರ ೧

ವೇದ ಶಾಸ್ತ್ರಸಾರವಾದ ।
ಬೋಧ ಸುಧೆಯ ವೆರದು ಮರದು ।
ಹಾದಿದೋರಿ ಮನಕ ಗತಿಯ ।
ಸಾಧನವನು ಬೀರುವರ ೨

ಹ್ಯಾವ ಹೆಮ್ಮೆ ಬಿಡಿಸಿ ಸಮ್ಮತಿ ।
ಭಾವದಿಂದ ಮಹಿಪತಿ ಸ್ವಾಮಿಯಾ ।
ಸಾವಧಾನದಿಂದಲಿ ಜಗತೀ ।
ವಲಯದೊಳರಹಿಸುವರು ೩

## ೩೧೮

ಸಂತರೆನಬಹುದುದಯ್ಯ ಇಂತಿವರಿಗೆ
ಅಂತರಂಗಲಿ ಹರಿಯ ಏಕಾಂತ ಭಕ್ತರಿಗೆ ಧ್ರುವ

ಸುಖಕ ಮೈಯವ ಮರಿಯಾ ದು:ಖಗಳಿದಿರಿಡೆ ನೋಯಾ
ಚಕಿತನಾಗನು ಕುಮತಿ ವಿಕಳ ನುಡಿಗೆ ಪ್ರಕಟಸ್ತೋತ್ರಕ ಹಿಗ್ಗ
ಸಕಲರೊಳು ಹರಿಯ ವ್ಯಾಪಾರವರಿದು
ನಿರಹಂಕೃತಿಯನ್ನುಳ್ಳರಿಗೆ ೧

ವೇಷಡಂಭವಿರಲು ಕ್ಲೇಶ ಕರ್ಮಗಳಿರಲು
ಈ ಶಿರಿಯ ಸುಖದ ಮನದಾಶೆವಿರಲು
ವಾಸುದೇವನ ಪದ ಧ್ಯಾಸದನುಭವ ದಿಟ
ವೇಶ ಹರಿ ಸಂಸಾರ ಲೇಶದೋರ್ವರಿಗೆ ೨

ಪರಮ ಭಾಗವತೆನಿಸಿ ಪರರ ಮನಗಳಿಗ್ಹೋಗಿ
ಪಿರಿದು ವಿದ್ಯವ ತೋರಿ ಪೊರಿಯ ನೋಡಲಾ

ಪರಧನಕ ಕರ ವಿಕರ ಪರಸತಿಯರಿಗೆ ಕೂರವು
ಪರನಿಂದೆಗೆ ಮೂಕ ಪರವಶಾದರಿಗೆ ೩

ಹರಿಯ ನಾಮವ ನೆನಿದು ಹರಿದು ಕೀರ್ತನೆಯಲ್ಲಿ
ಹರುಷಗುಡಿಗಟ್ಟಿ ತನುಮರದು ನಿಂದು
ಬರುದೆ ಪ್ರೇಮಾಂಜಲಿಗೆ ಭರಿತ ಲೋಚನನಾಗಿ
ತರಿಸಿ ತಾರಿಸುವಂದ್ಯನ ಕರುಣವಂತರಿಗೆ ೪

ಇಂತು ದುರ್ಗಮವಿರಲು ಸಂತರಾವು ನೀವೆಂದು
ಸಿರಿತರವ ಹೋಗಿ ಜನ ಸಿಂತರಿಸುವಾ
ಭ್ರಾಂತವೇಷಕ್ಕೆ ಸಿರಿಕಾಂತ ಮೆಚ್ಚನಲ್ಲಾ
ಶಾಂತಗುಣ ಮಹಿಪತಿ ಸ್ವಂತಗೆಂದಾ ೫

## ಸಂಕೀರ್ಣ

## ೩೧೯

ಇದೇ ವೀಳ್ಯ ಅಡಕ್ಯೆಂಬುದು ನೋಡಿ
ಹದನಿಸಿ ನಾಲ್ಕುಗುಣ ಚೂರ್ಣಮಾಡಿ ಧ್ರುವ

ಅಡಕೆಂಬದನುಮಾನಪೂಟ
ಒಡೆದ ಹೋಳು ಮಾಡಿ ಚೊಕಷ್ಟ
ಮಡಿಚಿಮ್ಮನೆಂಬುದು ವೀಳ್ಯ ನೀಟ
ತೊಡೆದು ಅಹಂ ಸುಣ್ಣ ಖಾರಟಾ ೧

ಗುರುವರ್ಮ ಕಾಚೆಂಬುದು ಪೂರ್ಣ
ಸುರಮುನಿ ಜನರ ನಿಧಾನ
ತೋರುತಿಹ್ಯದೊಂದೆ ನಿಜ ಖೂನ
ಕರಗಿಹೋಯಿತು ಮೂರೊಂದು ವರ್ಣ ೨

ವೀಳ್ಯ ಮಾಡಲು ಮರ್ದನ
ಕಳದ್ಹೋಯಿತು ಅದರವಗುಣ
ಕಳೆ ಹೆಚ್ಚಿತು ರಂಗ ಸಗುಣ
ಥಳಿಥಳಿಸುವ ಜ್ಞಾನ ಸುಬಣ್ಣ ೩

ನುಂಗಿ ತಾಂಬೂಲ ರಸ ಹಲವಂಗ
ಹಿಂಗಿ ಹೋಯಿತು ಭವಭಯಭಂಗ
ಕಂಗಳದ್ಯರಿಯತು ಅಂತರಂಗ
ರಂಗದೋರಿತ್ಯನ್ನೊಳು ಸತ್ಸಂಗ ೪

ವೀಳ್ಯ ಅಡಕಿ ಮಹಿಪತಿಗೆ ನೋಡಿ
ತಿಳದವರಿದೆ ನಿಜಪೂರ್ಣ ಮಾಡಿ
ಕಳೆದು ಕಲ್ಪನಿ ಕೊನೆ ಆಗ್ಯೇಡ್ಯಾಡಿ
ಇಳಿಯೊಳಗಿದೆ ಸವಿ ಸುಖಗೂಡಿ ೫

## ३.೨೦

ಕಾಡುತಲಿಹ್ಯದು ಬೆಡಗಿನ ಕೋಡಗ
ಬಡವರಿಗಳವಲ್ಲ ಪೊಡವಿಯಲಿ ಧ್ರುವ

ಮಾಯದ ಮುಖವದು ಮೋಹದ ನಾಸಿಕ
ಮಾಯಮಕರ ಕಿವಿಕಣ್ಣುಗಳು
ಹ್ಯಾವ ಹೆಮ್ಮೆಯ ಹುಬ್ಬು ಕಪಿಕಣ್ಣಯೆವೆಗಳು
ಬಾಯಿ ನಾಲಿಗೆ ಹಲ್ಲು ಬಯಕಿಗಳು ೧

ಗರ್ವಗುಣ ಸಿರ ಗಾತ್ರ ಸರ್ವಾಂಗವು ದುರುಳ
ದುರ್ಬುದ್ಧಿಯ ಬೆರಳುಗಳು
ಎರಡು ತುಟಿಗಳೆಂಬ ನಿಂದೆ ದೂಷಣಗಳು
ಕೊರಳು ಕುತ್ತಿಗೆ ದುಷ್ಕರ್ಮಗಳು ೨

ಹಣಿಯು ದಾಡಿಯು ಗಲ್ಲ ಪ್ರಪಂಚ ಶೋಭಿತ
ಕಣ್ಣಭಾವಗಳಿವು ಚಂಚಲವು
ಬಣ್ಣಬಣ್ಣದಿ ಕುಣಿದಾಡುವ ಕಪಿ
ಗುಣ ಏನೆಂದ್ಹೇಳಲಿ ಕಪಿ ವಿವರಣನ ೩

ಉದರಬೆನ್ನುಗಳಿವು ಸ್ವಾರ್ಥಬುದ್ಧಿಗಳು
ಮದಮತ್ಸರಗಳೆಂಬ ಕೈಗಳು
ಪಾದ ಕಾಲುಗಳಿವು ಕಾಮಕ್ರೋಧಗಳು
ಮೇದಿನಿಯೊಳು ಕುಣಿದಾಡುವದು ೪

ಆಶಿಯೇ ಪಂಜವು ವಾಸನೆ ಬಾಲವು
ಮೋಸಮೂಕರ ಗುಣಕೇಶಗಳು
ಏಸು ಮಂದಿಯ ಕಪಿ ಘಾಸಿಯ ಮಾಡಿತು
ಮೋಸಗೈಸಿತು ಭವಪಾಶದಲಿ ೫

ಅಶನ ವ್ಯವಸನ ತೃಷಿ ಕಪಿಗಿದು
ಭೂಷಣ ಮೀಸಲಾಗಿಡಿಸಿತು ಸುವಾಸದ
ಹಸಗೆಡಿಸುದು ಯತಿ ಮುನಿಗಳ ತಪಸವು
ಮುಸುಕಿತು ಮೋಸವು ಕಪಿಯಿಂದಲಿ ೬

ಕಂಡದ್ದು ಬೇಡುತಾ ಅಂಡಲಿಯುತಿಹುದು
ಮಂಡಲದೊಳು ತಾ ಕಾಡುತಲಿ
ಪಿಂಡ ಬ್ರಹ್ಮಾಂಡದಿ ಲಂಭಿಸುತಿಹದು
ಹಿಡದು ಬಿಡದು ಮುಷ್ಟಿಬಿರುದುಗಳು ೭

ಪಂಡತನದಿ ಬಲು ಪುಂಡನಾಗಿಹದು
ಹಂಡೀಗತನದಲಿ ಬಾಳುವದು
ಭಂಡಿನಾ ಅಟಿಗೆ ಗಂಡಾಗಿಹುದು
ಕಂಡಕಡಿಗೆ ಹರಿದಾಡುತಲಿ ೮

ಮೂಢಮಹಿಪತಿಯ ಕಾಡುವ ಕಪಿಗಿನ್ನು
ಜಡಸೀದ ಗುರುಜ್ಞಾನ ಸಂಕೋಲಿಯು
ಕಾಡುವ ಕಪಿಕೈಯ ಬಿಡಿಸಿದ ಗುರು ಎನ್ನ
ಕಡೆಯ ಮಾಡಿದ ಬ್ರಾಹ್ಮಣ ಜನ್ಮಲಿ ೯

## ೩೨೧

ಕೌತುಕವು ನೋಡಿ ಮಹಾ ಗುರುನಾಮಮಹಿಮೆಯು
ಬಯಲು ವಿದ್ಯವು ಕೇಳಿ ಭಾವಿಕರೆಲ್ಲ ಧ್ರುವ

ಶೂನ್ಯ ಮಂಡಲದಿ ನಿಶ್ಶೂನ್ಯ ಬೀಜದ ವೃಕ್ಷ
ಮಾನ್ಯಮೋನದಲಿ ಬೆಳೆಯುತಿಹ ವೃಕ್ಷ ನೋಡಿ ೧

ಬಯಲು ಭಾವದ ಪುಷ್ಪ ನಿರ್ಬೈಲ ಸಾಫಲವು
ಸುವಾಸನೆಯ ಗೊಂಚಲವು ಜಡಿವೃತ

ದಿವ್ಯಾಮೃತ ಫಲವು ಸವಿಯು ಸೇವಿಸುವದಕೆ
ಹೊಯಲುವಾದರು ಮಹಾಮಹಿಮರಿದು ನೋಡಿ ೨

ತಾಯಿ ಇಲ್ಲಧ ಶಿಶುವು ಕಾಯವಿಲ್ಲದೆ ಬಂದು
ಕೈಯವಿಲ್ಲದೆ ಕೊಂಡು ಸೇವಿಸುವದು
ಬಾಯಿ ಇಲ್ಲದ ನುಂಗವದು ಕಂಡು ಮಹಿಪತಿಯು
ಕೈಯ ಮುಗಿದನು ಗುರುವಿಗೆ ತ್ರಾಹಿಯೆಂದು ೩

## ೩೨೨

ಕಂಡೆ ನಾನೊಂದು ಕೌತುಕವ ಧ್ರುವ

ಆಯಿ ಅಜ್ಜನ ನುಂಗಿದ ಕಂಡೆ
ನಾಯಿ ಲಜ್ಜೆಯ ಹಿಡಿದುದ ಕಂಡೆ
ಕಾಯಿ ಹೆಜ್ಜೆಯನಿಕ್ಕುತ ಜಗದೊಳು ರಾಜ್ಯ
ಪ್ರದಕ್ಷಣೆ ಮಾಡುದು ಕಂಡೆ ೧

ಇರುವೆ ವಿಷ್ಣುನ ನುಂಗಿದ ಕಂಡೆ
ನರಿಯು ರಾಜ್ಯನಾಳುದ ಕಂಡೆ
ಅರಿಯು ಮರಿಯ ನುಂಗಿದ ಕಂಡೆ
ಕುರಿಯಿಂದ ಪರಲೋಕಯೆಯ್ದಿದು ಕಂಡೆ ೨

ಇಲಿಯು ಯುಕ್ತಿಯದೋರುದು ಕಂಡೆ
ಹುಲಿಯು ಭಕ್ತಿಯು ಮಾಡುದು ಕಂಡೆ
ಇಳೆಯೊಳು ಮಹಿಪತಿ ಕಳೆವರದೊಳಿನ್ನು
ಮುಕ್ತಿ ಸಾಧನದೊಂದು ಬೆಡಗವು ಕಂಡೆ ೩

## ೩೨೩

ಕಂಡೆ ನಾನೊಂದು ಕೌತುಕವ ಧ್ರುವ

ಭೂಮಿಯ ವೇದನೋದುದ ಕಂಡೆ ರಾಗಭೇದ ಮಾಡುದಕಂಡೆ
ಸ್ತೋತ್ರ ಮಂತ್ರಸ್ತುತಿಗಳು ಮೊದಲಾದ ಗೀತ ಪ್ರಭಂಧವು
ಪಾಡುದು ನಾಕಂಡೆ ೧

ಆಕಾಶ ಮಾತುಕೇಳುದು ಕಂಡೆ ಪುರಾಣ ದೃಷ್ಟಿಸುವದು ಕಂಡೆ
ಶಬ್ದ ಭೇದಗ್ರಹಿಸುದು ಕಂಡೆ ಪುಣ್ಯ ಶ್ರವಣವು ಕೇಳುದುಕಂಡೆ ೨

ನೀರೆ ಆಕಾರ ಮಾಡದುಕಂಡ್ಯ ನಾಕ್ಲಜ್ಯ
ಖಣಿಯವಾದುದು ಕಂಡೆ
ಎಂಬತ್ತನಾಲ್ಕು ಲಕ್ಷಯೋನಿಗಳ
ನಿರ್ಮಿತವಾಗಿಹ ರೂಪವ ಕಂಡೆ ೩

ಅಗ್ನಿ ದೃಷ್ಟಿಸುವದು ಕಂಡೆ ಸೃಷ್ಟಿನೆಲ್ಲ ನೋಡುವದು ಕಂಡೆ
ತೀರ್ಥಯಾತ್ರೆಯ ಕ್ಷೇತ್ರವ ಮಹಿಮೆಯ
ದೈವದ್ಯಾವರ ನೋಡುದು ಕಂಡೆ ೪

ಗಾಳಿ ಘ್ರಾಣಿಸುವದು ಕಂಡೆ ಪರಿಪರಿವಾಸನೆ ಕೊಂಬುದುಕಂಡೆ
ಅಜಪಾಗತಿಗಳ ಪಾಣ ಪ್ರಣಮ್ಯದ
ಬೀಜಾಕ್ಷರವು ನುಡಿವದು ಕಂಡೆ ೫

ಬೆರಗಾಗಿ ಮನಗುರು ಕೌತುಕವನಕಂಡು
ಎರಗಿತು ಪುಣ್ಯಶ್ರೀ ಚರಣದಲಿ
ಕರಗಿತು ಗರ್ವಾಹಂಕಾರದ ಬೀಜವು ತ್ರಾಹಿ
ತ್ರಾಹಿಯೆಂದು ಪೊಡವಿಯಲಿ ೬

ಬೆಡಗವ ಕಂಡಿನ್ನು ಮಹಿಪತಿ ತನ್ನೊಳು
ಬೆರಗಾದನು ಗುರುಕರುಣದಲಿ
ವರಗುರುಭಾಸ್ಕರ ಮೂರ್ತಿಯ ಕೃಪೆಯಲಿ
ಬೆಡಗವ ಕಂಡಿನ್ನು ಬೆರದಾದೆನಯ್ಯ ೭

## ೩೨೪

ಕಂಡೆನು ಕೌತುಕವ ಏನೆಂದ್ಹೇಳಲಿ ಸೋಜಿಗವ ಧ್ರುವ

ಅಜ ನುಂಗಿತು ಗಜನ ವಾಜಿ ನುಂಗಿತು ಈ ಮೂಜಗವ
ರಾಜ್ಯನುಂಗಿತು ಪ್ರಜರ ಸಂಜೀವ ನುಂಗಿತು ಸಂಜೀವ ೧

ಇಲಿಯು ನುಂಗಿತು ಮೊಲವ ಹಲ್ಲಿ ನುಂಗಿತು ಹಲವು ಕುಲವ
ಜಲ ನುಂಗಿತು ಜಲವ ಹುಲಿ ನುಂಗಿತು ಈ ಮಾರ್ಜಲವ ೨

ಅರಿಯು ನುಂಗಿತು ಮರವ ನೊರಜು ನುಂಗಿತು ಗಿರಿ ಪರ್ವತವ
ಇರಹು ನುಂಗಿತು ಸರ್ವ ಬೆರಗಾಯಿತು ಮಹಿಪತಿ ಜೀವ ೩

## ೩೨೫

ಕಂಡೆನು ನಾನೊಂದು ಕೌತುಕ ಕಲಿಯುಗದೊಳಗೊಂದು ಧ್ರುವ

ಮೈಯೊಳಗಿಹುದು ಕೈಯೊಳಗೆಂದಿಗೆ ಸಿಲುಕದು
ಮಾಯಕದೂರಿದು ದೇಹವಿದೇಹಿಗೆ ಸಾರೆ ಇಂದು ೧

ವೇದಕ ನಿಲುಕದು ಸಾಧಕರಿಗೆ ತಾ ಸಿಲ್ಕುವದು
ಭೇದಿಸಿದರೆ ಹೊಳೆವುದು ಸಾಧು ಜನರಿಗೆ ತಿಳಿವುದು ೨

ಭಾವಕ ಸುಲಭದೇವಾದಿಗಳಿಗೆ ದುರ್ಲಭ
ಜೀವರ ನೆಲೆನಿಭ ಮಹಿಪತಿ ಪ್ರಾಣದೊಲ್ಲಭ ೩

## ೩೨೬

ದೃಷ್ಟ ಅದೃಷ್ಟದ ಬಲವು ನೊಡಿ ವಿಸ್ತಾರ ಸೃಷ್ಟಿಯಲಿ
ಮುಟ್ಟಿ ಮುದ್ರಿಸಿದ ವಾಕ್ಯಂಗಳು ಕೇಳಿ ಆತ್ಮನಿಷ್ಠ ಜನರು ೧

ದೃಷ್ಟಿ ಪುರುಷನ ಸೈನ್ಯಗಳು ಕೇಳಿ ಚಿತ್ತದಲಿ ಮಾನವರು
ಅಜ್ಞಾನವೆಂಬಾಶ ಗತಿಯು ಮಾಯಾಮೋಹಕವೆಂಬ ಸುತರು ೨

ವೀರರು ಕಾಮಕ್ರೋಧಗಳು ಮದ ಮತ್ಸರರು ಬಂಟ ಜನರು
ಪ್ರಪಂಚ ಸೈನ್ಯಾಧಿಪತಿ ಸುಖ ದು:ಖದಳ ಭಾರಗಳು ೩

ಚಂಚಲವಂಚಲಶ್ವಗಳು ಅಹಂ ಮಮತಾ ಗಜಗಳು
ಅವಸ್ಥೆಗಳು ಕಾಲಾಳುಗಳು ಮನ್ನೆವಾರರು ಕರಣಗಳು ೪

ಶೂರತನದ ಪರಾಕ್ರಮರು
ಮೆರೆಯುತಿಹರು ಪಂಚೇಂದ್ರಿಯಗಳು
ಸೂಸುತಲಿಹ ಬೇಹಿನವರು ಮೊದಲಾದ ದಶವಾಯುಗಳು ೫

ಸುತ್ತಲಿಹ ಪರಿವಾರಗಳು ಸಪ್ತವ್ಯಸನ ಭೂಷಣಂಗಳು
ಪಂಚಾಗ್ನಿಗಳು ಪಂಜಿನವರು ಅಷ್ಟಮದವು ಕಾವಲಿಗಳು ೬

ಮೂರು ಪರಿಯ ತ್ರಿಗುಣಗಳು ಸೈನ್ಯದ ಪಾರುಪತ್ಯದವರು
ಜಾಗ್ರಸ್ವಪ್ನ ಸುಷುಪ್ತಿಗಳು ಛತ್ರ ಚಾಮರ ಭೂಷಣಗಳು ೭

ಸಪ್ತಧಾತುದ ಸುಖಾಸನವು ಪಂಚಾತ್ಮಗಳು ನಿಶ್ಯಾನಿಗಳು
ತಾಮಸವೆಂಬ ಭೇರಿಗಳು ಅಹಂಕಾರವು ಕಹಳೆಗಳು ೮

ಅವಿದ್ಯ ಮೊದಲಾದ್ಯುದಮಿದಾರ ರಚಿಸಿದ ಸಾಲಂಗಡಿಯ
ಪರಿ ಪರಿ ಚಂದ ಚಂದದಲಿ ಇಳಿದಿಹ ಸೈನ್ಯ ಭಾರಗಳು ೯

ಜನನ ಮರಣದ ಮಂಟಪವು ಕಟ್ಟಿಹರು ವಿಸ್ತಾರದಲಿ
ಚಿಂತಿ ಮುಪ್ಪಳಿಯು ಭ್ರಾಂತಿಗಳಲಿ ಸ್ಥಿತಿ ಸ್ಥಳಲಿಹ ದ್ವಾರಗಳು ೧೦

ಆಶಾಪ್ಯಾಟಿಯ ಬಲಾಶ್ರಯದಲಿಳದಿಹ
ದುರ್ಮೋಹ ಬಲದಲಿ
ತನುವೆಂಬ ದುರ್ಗಬಲದಲಿ ಕದನ ಮಾಡುವರನುದಿನದಲಿ ೧೧

ಇನ್ನು ಅದೃಷ್ಟದ ಬಲವು ಕೇಳಿ ಚೆನ್ನಾಗಿ ಮನದಲಿ
ಸಮ್ಯಜ್ಞಾನೆಂಬಾಶಗತಿಯ ಜ್ಞಾನ ವೈರಾಗ್ಯಸುತರು ೧೨

ಶಮೆದಮೆವೆಂಬ ವೀರರುಗಳು ಭಾವಭಕ್ತಿಯ ಬಂಟ ಜನರು
ನಿಜ ಬೋಧ ಸೈನ್ಯಾಧಿಪತಿಯ ದೃಢ ನಿಶ್ಚಯ ದಳ ಭಾರಗಳು ೧೩

ನಿರ್ಮಳ ನಿಶ್ಚಳಶ್ವಗಳು ವಿವೇಕವೆಂಬ ಗಜಗಳು
ವಿಚಾರವೆ ಕಾಲಾಳುಗಳು ಹಟದಿಟ ಮಗುಟ ವರ್ಧನರು ೧೪

ಶೂರತನದ ಪ್ರರಾಕ್ರಮರು ಸ್ಮರಣೆ ಚಿಂತನೆ ಧ್ಯಾನಗಳು
ಸೂಸುತಲಿಹ ಬೇಹಿನವರು ಯೋಚನೆ ಅವಲೋಕನೆಗಳು ೧೫

ಸುತ್ತಲಿಹ ಪರಿವಾರಗಳು ರತಿಪ್ರೇಮ ಸದ್ಭಾವನೆಗಳು
ಲಯ ಲಕ್ಷ್ಯಗಳು ಪಂಜಿನವರು ಮೌನ್ಯ ಮೋನವೆ ಕಾವಲಿಗಳು ೧೬

ನಾದ ಬಿಂದು ಕಳೆಯಗಳು ಸೈನ್ಯದ ಪಾರುಪತ್ಯವರು
ಅನಿಮಿಷ ಛತ್ರ ಚಾಮರವು ಏಕಾಕಾರವೆ ನಿಶ್ಯಾನಿಗಳು ೧೭

ಅನುಭವ ಸುಖಾಸನಗಳು ತೂರ್ಯಾವಸ್ಥೆಯ ಭೂಷಣಗಳು
ಆನಂದಮಯವೆ ಭೇರಿಗಳು ನಿಶ್ಚಿಂತವೆ ಕಹಳೆಗಳು ೧೮

ಸುಜ್ಞಾನದ ಮೊದಲಾದ ಅಂಗಡಿಯು ಇಳಿದಿಹ ಸಾಲವರಿಯಲಿ
ಚಂದ ಚಂದ ಶೃಂಗಾರದಲಿ ಇಳಿದಿಹ ಸೈನ್ಯ ಭಾರಗಳು ೧೯

ಸದ್ಗತಿ ಮುಕ್ತಿ ಮಂಟಪವು ಹೊಳೆಯುತಿಹದು ಸೈನ್ಯದೊಳಲಿ
ಯೋಗ ಭೋಗದ ಮಹಾ ದ್ವಾರಗಳು
ಶೋಭಿಸುವದು ಶೃಂಗಾರದಲಿ ೨೦

ನಿರಾಶವೆಂಬ ಪ್ಯಾಟಿಯಲಿ ಇಳಿದಿಹದು ಸಂತೋಷದಲಿ
ದೃಷ್ಟಿ ಪುರುಷನ ಅಟ್ಟಲೆಯ ಕೇಳಿ ನಡೆಯಿತು ಮಾರ್ಬಲವು ೨೧

ಧಿಮಿ ಧಿಮಿಗುಡುತ ನಾದ ಮಾಡಿದರಾನಂದಲ
ಗ್ಧೀಳೆನಿಸುತ್ತ ಕಹಳೆಗಳು ಭೋರ್ಗರೆಯುತಲಿ ನಡೆದರು ೨೨

ಮನೋಯೋಗವೆಂಬ ಮಾರ್ಗದಲಿ
ನಡೆವರು ಅತಿಶಯ ಶೀಘ್ರದಲಿ
ಬಾಣ ಬಾಣಗಳು ಮಾಡುತಲಿ ದಣಿದಣಿಸುತಲಿ ನಡೆದರು ೨೩

ತುಂಬಿದ ಸೈನ್ಯ ಭಾರಗಳು ಉಬ್ಬು ಕೊಬ್ಬಿ ನಡೆದವು
ನಗುತ ಗೆಲವಿಂದಶ್ವಗಳು ಏರಿ ಹಾರಿಸುತ ನಡೆದರು ೨೪

ಹಟ ದಿಟ ಮಗುಟ ವರ್ಧನರು ನಡೆದರು ಅತಿ ಹರುಷದಲಿ
ಕಾಲಾಳುಗಳು ಮುಂದೆ ಮಾಡಿ ನಡೆಯಿತು ದಳ ಭಾರಗಳು ೨೫

ಶೂರತನದ ಪರಾಕ್ರಮರು ಮುಂದಾಗಿ ಬ್ಯಾಗೆ ನಡೆದರು
ಅಬ್ಬರಿಸುತಲಿ ಮಾರ್ಬಲವು ನಡೆಯಿತವರ ಸೈನ್ಯ ಮ್ಯಾಲೆ ೨೬

ವಿವೇಕವೆಂಬ ಗಜಗಳು ವಾಲ್ಯಾಡುತಲಿ ನಡೆದರು
ರಗಡಿಸುತ ಡೋಲಿಸುತಲಿ ನಡೆದರು ಪರಚಕ್ರ ಮ್ಯಾಲೆ ೨೭

ನಡೆವ ಮಾರ್ಬಲದ ಧೂಳಿಗಳು ಮುಸುಕಿತು ಸುವಾಸನೆಗಳು
ಗರ್ಜಿಸುವ ಧ್ವನಿಗೇಳಿ ಹೆದರಿತು ಶತ್ರು ಮಾರ್ಬಲವು ೨೮

ಕಂಡು ದೃಷ್ಟರ ಸೈನ್ಯದವರು ಸಿದ್ಧವಾದರು ಸಮಸ್ತದಲಿ
ತಮ್ಮ ತಮ್ಮೊಳು ಹಾಕ್ಯಾಡುತಲಿ ನಡೆದುಬಂದರು ಸನ್ಮುಖಕೆ ೨೯

---

ಚಿಂತಿಸುತಲಿ ಪರಾಕ್ರಮರು ಬಂದರು ವೀರ ಕಾಳಗಕೆ
ಕಾಳಿ ಭೇರಿಗಳು ಬಾರಿಸುತ ಬಂದರು ಮಹಾಜನರು ೩೦

ಕೂಗಿ ಚೀರುತ ಒದರುತಲಿ ಬಂದು ನಿಂದರು ಪರಾಕ್ರಮರು
ಅಹಂ ಮಮತಾ ಗಜಗಳು ನಡೆದು ಬಂದವು ಎದುರಾಗ ೩೧

ಕಾಲಾಳು ಸಹ ಕೂಡಿಕೊಂಡು ರಚಿಸಿ ಬಂದರಶ್ವಗಳು
ಧೂಳಿ ಹಾರುತ ದುರ್ವಾಸನೆಯು ಬಂದು
ಕೂಡಿತು ಉಭಯ ದಳವು ೩೨

ಸುವಾಸನೆ ಧೂಳಿಯೊಳಗೆ ಅಡಗಿತು ದುರ್ವಾಸನೆಯು
ಅಹಂ ಮಮತಾ ಗಜಗಳು ಕಂಡು ಓಡಿದವು ಹಿಂದಾಗಿ ೩೩

ಬೆನ್ನಟ್ಟಿ ವಿವೇಕ ಗಜವು ಹೊಡೆದು ಕೆಡವಿದವು ಧರೆಗೆ
ಅವಸ್ಥೆಗಳು ಕಾಲಾಳುಗಳು ಜಗಳ ಮಾಡಿದವು ನಿಮಿಷವು ೩೪

ವಿಚಾರ ಕಾಲಾಳು ಮುಂದೆ ಓಡಿದರು ದೆಸೆದೆಸೆಗೆ
ಚಂಚಳವೆಂಚಳಶ್ವಗಳು ಏರಿ ಬಂದರು ರಾವುತರು ೩೫

ಯುದ್ಧಮಾಡಿದರರಗಳಿಗೆಯು ಶುದ್ಧಿ ಇಲ್ಲದೆ ಓಡಿದರು
ನಿರ್ಮಳ ನಿಶ್ಚಳಶ್ವಗಳು ಏರಿ ಬೆನ್ನಟ್ಟಿ ನಡೆದರು ೩೬

ಚಂಚಳ ವೆಂಚಳಶ್ವಗಳ್ಹರಿಗಡೆದರು ಕಾಲು ಬಲ
ರಾಹುತರ ಸಹವಾಗಿ ಕಡೆದೊಟ್ಟಿದರು ಶಿರಸವನು ೩೭

ವೀರರು ಕಾಮಕ್ರೋಧಗಳು ಬಂದರು ಅತಿಶಯಉಗ್ರದಲಿ
ಶಮೆ ದಮೆ ವೀರಗಳೊಡನೆ ಕಾದಿ ಮಡಿದರು ಆ ಕ್ಷಣದಲಿ ೩೮

ಮದ ಮತ್ಸರರು ಬಂಟ ಜನರು ಬಂದರು ಸಿಟ್ಟು ಕೋಪದಲಿ
ಭಾವ ಭಕ್ತಿಯ ಬಂಟರೊಡನೆ ಕಾದಿ ಕಾಲಾಳು ಮಡಿದರು ೩೯

ಪ್ರಪಂಚ ಸೈನ್ಯಾಧಿಪತಿಯ ಕೈಸೆರೆಯಲಿ ಹಿಡಿದರು
ನಿಜ ಬೋಧ ಸೈನ್ಯಾಧಿಪತಿಯು ನಾದಘೋಷವು ಮಾಡಿಸಿದನು ೪೦

ಉಲ್ಲಾಸವೆಂಬ ಸರವರಿಯು ಹಚ್ಚಿಸಿದರು ಸೈನ್ಯದೊಳಲ್ಲಿ
ದಯ ಕರುಣ ಭಾಂಡಾರಗಳು ಒಡೆದು ಧರ್ಮ ಮಾಡಿದರು ೪೧

ಪಂಚೇಂದ್ರಿಯಗಳ ಪರಾಕ್ರಮರ ಹಿಡಿದು ಕಟ್ಟಿದರು ಪಾಶದಲಿ
ಸ್ಮರಣೆ ಚಿಂತನೆ ಪರಾಕ್ರಮರು ಉಬ್ಬಿದರು ಹರುಷದಲಿ ೪೨

ದಶವಾಯುಗಳ ಬೇಹಿನವರ ಹಿಡಿದು ಬಂಧನವ ಮಾಡಿದರು
ಅವಲೋಕನೆ ಬೇಹಿನವರ ಸದ್ಬ್ರಹ್ಮದಲಿ ಸುಖಿಸಿದರು ೪೩

ಸಪ್ತವ್ಯಸನ ಪರಿವಾರಗಳು ರತಿಪ್ರೇಮರೊಡನೆ ಕೂಡಿದರು
ಪಂಚಾಗ್ನಿಗಳು ಪಂಜಿನವರು ಪಂಚ ಪಾಲದಿ ಅಡಗಿದರು ೪೪

ಲಯ ಲಕ್ಷಗಳು ಪಂಜಿನವರು ಸಂಜೀವದಂತೆ ಹೊಳೆವರು
ಅಷ್ಟಮದವು ಕಾವಲಿಗಳು ಅಡಗಿದವು ಸ್ಥಳ ಸ್ಥಳಲಿ ೪೫

ಮೌನ್ಯ ಮೋನವೆ ಕಾವಲೆಗಳು ತಾವೆ ತಾವಾಗಿ ದೋರಿದರು
ತ್ರಿಗುಣರ ಪಾರುಪತ್ಯದವರು ಒಂದು ಸ್ಥಳದಲಿರಿಸಿದರು ೪೬

ನಾದ ಬಿಂದು ಕಳೆಯಗಳು ಮುಟ್ಟಿ ಪಾರುಪತ್ಯ ಮಾಡುವರು
ಶತ್ರುರಾಘನ ಭೂಷಣಗಳು ಸೆಳೆದುಕೊಂಡರು ಗಳಿಗೆಯೊಳು ೪೭

ಅವಿದ್ಯ ಮೊದಲಾದಾಗದರಿಂದ ಚೋಳಿಯು ಮಾಡಿದರು
ಜನನ ಮರಣದ ಮಂಪಟವು ಸುಟ್ಟು ಸಂಹಾರ ಮಾಡಿದರು ೪೮

ಚಿಂತೆ ಭ್ರಾಂತಿಯ ದ್ವಾರಗಳು ಕಿತ್ತಿ ಬೀಸಾಟಿದರು
ಆಶಾಪ್ಯಾಟಿಗೆ ಧಾಳಿನಿಕ್ಕಿ ಲೂಟಿಸಿದರು ನಿಮಿಷದಲಿ ೪೯

ತನು ದುರ್ಗ ವಶಮಾಡಿಕೊಂಡು ಇಳಿಯಿತು ಸೈನ್ಯ ಸುಖದಲಿ
ಸದ್ಗತಿ ಮುಕ್ತಿ ಮಂಟಪವು ಕೊಟ್ಟರು ಅಚಲದಲಿ ೫೦

ಯೋಗ ಭೋಗದ ದ್ವಾರದಿಂದ ನಡೆದರು ಮಹಾ ಭಕ್ತಜನರು
ಮನ್ನೆವಾರರು ಕರಣಗಳು ಅಭಯವ ಕೊಂಡು ನಡೆದರು ೫೧

ಅಜ್ಞಾನವೆಂಬಾಶಾಗತಿಯು ಮುಕ್ತವಾದಳು ಸುಜ್ಞಾನದಲಿ
ಮಾಯ ಮೋಹವೆಂಬ ಸುತರು
ಮಾಯವಾದರು ವೈರಾಗ್ಯದಲಿ ೫೨

ದೃಷ್ಟ ಪುರುಷನ ತಂದಿನ್ನು ಇಟ್ಟುಕೊಂಡರು ತಮ್ಮೊಳಲಿ
ತನು ದುರ್ಗ ವಶಮಾಡಿಕೊಂಡು ಮುಂದೆನಡೆದರಾನಂದದಲಿ ೫೩

ಅಧಾರ ಪುರ ಬೆನ್ನಮಾಡಿ ನಡೆದರು ಬ್ರಹ್ಮಾಂಡಪುರಕೆ
ವಿಘ್ನಹರನ ಬಲಗೊಂಡು ಮ್ಯಾಲೆ ಮಣಿಪುರಕೆ ನಡೆದರು ೫೪

ಅನಾಹತಪುರ ದಾಟಿ ಮುಂದೆ ನಡೆದರು ವಿಶುದ್ಧ ಪುರಕೆ
ಸ್ಥಳ ಸ್ಥಳ ಹರುಷ ನೋಡುತಲಿ ನಡೆದರಗ್ನಿ ಚಕ್ರಪುರಕೆ ೫೫

ಮ್ಯಾಲಿಹ ಬ್ರಹ್ಮಾಂಡ ಪುರವು ಹೊಳೆಯುತಿಹದು ಪರಿಪರಿಲಿ
ಸಹಸ್ರದಳ ಕಮಲಗಲು ಥಳಥಳಿಸುವದದರೊಳು ೫೬

ಘನ ಬೆಳಗಿನ ಪ್ರಭೆಯುಗಳು ಹೊಳಯುತಿಹುದು ಕಿರಣಗಳು
ಹರಿ ಬ್ರಹ್ಮಾದಿಗಳು ವಂದಿಸುವ ಸ್ಥಳ ನೋಡಿ ಗುರು ಕರುಣದಲಿ ೫೭

ಪಿಂಡ ಬ್ರಹ್ಮಾಂಡೈಕ್ಯಪುರದಿ ಒಳಗಿಹ ಹಂಸಾತ್ಮಗತಿಯು
ಸಹಸ್ರ ರವಿಕೋಟಿ ತೇಜ ಭಾಸುವಾ ವಸ್ತುಗತಿಯು ೫೮

ಭಾಸ್ಕರ ಗುರು ಶ್ರೀಪತಿಯು ವಿಶ್ವ ವ್ಯಾಪಕನೆಂಬ ಸ್ಥಿತಿಯು
ಸಾರಿ ದೂರುತಲಿದೆ ಶ್ರುತಿಯು ಘನ
ಮಹಿಮಾನಂದ ಸ್ಫೂರ್ತಿಯು ೫೯

ದೃಷ್ಟಾದೃಷ್ಟಗತಿಯು ದೋರಿದ ಗುರು ಸದೃಷ್ಟದಲಿ
ಗುರು ಕರುಣದ ಕಟಾಕ್ಷದಲಿ ಬೆರೆಯಿತು ಮನ ಹರುಷದಲಿ ೬೦

ಕಂಡು ಮಹಿಪತಿಯ ಜೀವನವು ಧನ್ಯವಾಯಿತು ದೃಷ್ಟದಲಿ
ಪರಮಾನಂದ ಸುಪಥದಲಿ ಜೀವನ ಮುಕ್ತ್ಯದರಲ್ಲಿ ೬೧

## ೩೨೭

ನೋಡಿರೋ ನಿಜ ನೋಡಿರೋ
ನೋಡಲು ಗುರುಸೇವೆ ಮಾಡಿರೋ ಧ್ರುವ

ನೋಡದರೊಳಗೊಂದಡಗ್ಯಾದೆ
ಅಡಗಿದಕೊಂದು ಮನೆ ಮಾಡ್ಯಾದೆ
ಮಾಡಿದರೊಳಗೊಂದು ಮೂಡ್ಯಾದೆ
ಮೂಡಿದಕೊಂದು ಗೂಢವಾಗ್ಯಾದೆ ೧

ಆಡುವೆರಡು ಮಧ್ಯಾನಾಡ್ಯಾದೆ
ನಾಡಿ ಮಧ್ಯೊಂದು ಕೂಡಿಹದ್ಯಾದೆ
ಕೂಡಿದ ಹಾದಿಗೊಂದು ಮಾಡ್ಯಾದೆ
ಮಾಡಿದಕೊಂದು ಕೈ ಗೂಡ್ಯಾದೆ ೨

ಮುಂದ ನೋಡಲು ಹಿಂದವಾಗ್ಯಾದೆ
ಹಿಂದನೋಡಲು ಮುಂದವಾಗ್ಯಾದೆ
ಹಿಂದ ಮುಂದ ತಾನೆ ತುಂಬ್ಯಾದೆ
ಕಂದ ಮಹಿಪತಿಗಾನಂದಾಗ್ಯಾದೆ ೩

## ೩೨೮

ನೋಡಿರೋ ನಿಜನೋಡಿರೊ
ಬಿಡದೆ ಸದ್ಗುರುಪಾದ ಕೂಡಿರೋ ಧ್ರುವ

ಇಡಿದು ತುಂಬೆದ ವಸ್ತು ಅಡಿಮೇಲು ತಿಳಿಯದೆ ೧

ಗೂಢವಾಗಿದೆ ನೋಡಿ ಗೂಡಿನೊಳಗೆನಿಮ್ಮ ೨

ಎಡಬಲ ನೋಡದೆ ಪಿಡಿದು ಸದ್ಗುರು ಪಾದ ೩

ಇಡಾ ಪಿಂಗಳ ಮಧ್ಯನಾಡಿ ಪಿಡಿದು ನೀವು ೪

ಬೇಡಿದ ಪದವೀವ ಮಹಿಪತಿ ಒಡೆಯನ ೫

## ೩೨೯

ನೋಡುವ ಬನ್ನಿರೋ ನೋಡುವ ನೋಟ
ನೋಡುದರೊಳಗಡಗೆದ ಘನ ನೀಟ ಧ್ರುವ

ಅರವ್ಹಿನ ಮುಂದದ ಮರವ್ಹಿನ ಹಿಂದದ
ಕುರುಹು ತಿಳಿದರತಾ ಇರಹು ಅಗ್ಯದೆ ೧

ಎರಡಕ ಬ್ಯಾರ್‍ಯದ ಮೂರಕ ಮಿರ್‍ಯದ
ಗುರುಕೃಪೆ ಅದರೆ ಸಾರೆ ತಾನ್ಯದ ೨

ಬಾಹ್ಯಕ ದೂರ ಗುಹ್ಯಕ ಗೂಢದ
ಮಹಿಪತಿ ಮನದೊಳು ಘನವಾಗ್ಯದ ೩

## ೩೩೦

ಘುಗಡಿ ಹಾಕಿ ಹೀಂಗ ಸುಗಮದಿಂದ ಬ್ಯಾಗ
ತ್ರಿಗುಣ ತಿಗಡತನ ಬಿಟ್ಟು ಮಿಗಿಲಮಿರುವ್ಹಾಂಗ ಧ್ರುವ

ಬಿಗಿದ ಗಚ್ಚಿಕಟ್ಟಿ ಜಗದೊಳ್ಹಾಕಿ ಘುಗಡಿ
ಬಗೆದು ಸಾಧುಸಂಗದೊಳಾಡಿದಾಕಿ ಸುಗಡಿ
ಇಗಡತನ ಬಿಟ್ಟು ನೀಗಿ ನಿಜಗೂಡಿ
ದುಗುಡ ಭಾವೆಲ್ಲ ಬಿಟ್ಟು ಘುಗಡಿ ಘೂಯೆಂದಾಡಿ ೧

ದೇಹ ಭಾವಮರೆದು ಘುಗಡಿ ಹಾಕಿ ಬ್ಯಾಗೆ
ಗುಹ್ಯಗೂಢವಿದೆ ನೋಡಿ ರಾಜಯೋಗ
ಸೋಹ್ಯದೋರಿಗೊಡುವ ಸದ್ಗುರು ನಿನ್ನೊಳೀಗ
ಬಾಹ್ಯಾಂತ್ರದೊಳು ಭಾಸುತಿಹ್ಯ ಬ್ರಹ್ಮಭೋಗ ೨

ಘುಗಡಿ ಇದೇ ನೋಡಿ ಯೋಗಸಾಧನ ಮಾಡಿ
ಹುಗುವರಿಯನೇ ಹೋಕು ಜಗದ್ಗುರುವಿನ ಕೂಡಿ
ಜಗದೀಶನ ಮಹಿಮೆ ಬಗೆಬಗೆಯ ಕೊಂಡಾಡಿ
ಸುಗಮಸಾಧನವೆಂದು ಮಹಿಪತಿ ಬೆರೆದ ಕೂಡಿ ೩

## ೩೩೧

ಬೆಡಗು ಅಗಮ್ಯವಿದು ಶ್ರೀ ಗುರುವಿನ ಬೆಡಗು ಅಗಮ್ಯವಿದು ಧ್ರುವ

ಶೂನ್ಯಾಕಾರದ ಬಾಲೆ ಗಗನವ ಹಡೆದಳು
ಏನೆಂದ್ಹೇಳಲಿ ಸೋಜಿಗೆ ಘನಲೀಲೆಯು ೧

ವ್ಯೋಮಸುಂದರಿ ಜನಿಸಿದಳು ಮಾರುತನ
ಭೀಮ ಪರಾಕ್ರಮನ ನೇಮದಿಂದಲಿ ೨

ನಿಜ ವಾಯುಕುಮಾರಿ ಜನಿಸಿದಳು ತಾನೊಂದು
ತೇಜಃಪುಂಜದ ರೂಪವ ಮೂಜಗದೊಳು ೩

ಥಳಥಳಿಸುವ ತೇಜದ ಖನಿಯು ಹಡೆದಳು
ಜಲಮಯದ ರೂಪವ ನಲಿದಾಡುವ ೪

ನಿರಾಕಾರದ ಕೂಸು ಭೂಮಿ ಹಡೆದುದ ಕಂಡು
ಬೆರಗಾದ ಮೂಢ ಮಹಿಪತಿಯ ಗುರುಜ್ಞಾನದ ೫

ಬೆಡಗು ತೋರಿದ ಗುರು ಒಡಿಯ ಸರ್ವೋತ್ತಮನು
ಪೊಡವಿಯೊಳೊಂದು ಸೋಜಿಗ ಗೂಢವಾಗಿಹ ೬

ಕೌತುಕವನು ಕಂಡು ಕೈ ಮುಗಿದು ಮಹಿಪತಿ
ತ್ರಾಹಿ ತ್ರಾಹಿ ತ್ರಾಹಿಯೆಂದ ಮನದೊಳಿನ್ನು ೭

## ೩೩೨

ಸಿದ್ಧಾಂತವಿದು ನೋಡಿ ಸದ್ಗುರುವಿನ ಕೃಪೆಯು
ಬುದ್ಧಿವಂತರು ಬಲ್ಲರಾಧ್ಯಾತ್ಮ ಸುಖವು ಧ್ರುವ

ಕಾಲಿಲ್ಲದಾಕಳವು ಬಾಲಮುಖದಲಿ ಬಂದು
ಕಾಳರೂಪದ ಹುಲಿಯನೆ ನುಂಗಿತು
ಮೇಲವರಿಯಲಿ ಬಂದು ಜಲದೊಳಗಿನ ಕಪ್ಪೆ
ಮೂಲ ಸರ್ಪದ ಹೆಡೆಯ ನುಂಗಿದದು ನೋಡಿ ೧

ಬಾಲ ಇಲ್ಲದ ಇಲಿಯು ಜಾಲಹಾಕುತ ಬಂದು
ಸ್ಥೂಲ ಬೆಕ್ಕಿನ ತಲೆಯನೆ ಮುರಿಯಿತು
ನಾಲಿಗಿಲ್ಲದ ಮೊಲವು ನಿಲುಕಿ ಜಪವ ಹಾಕಿ
ಭಲೆ ಶ್ವಾನನ ಗಂಟಲ್ಹಿಡದಿಹುದು ನೋಡಿ ೨

ದಿವ್ಯ ಯೋಗದ ಮಾತು ಕಿವಿ ಇಲ್ಲದವಕೇಳಿ
ಕಣ್ಣಿಲ್ಲದವ ಕಂಡು ಬೆರಗಾದನು
ಕೌತುಕವು ಕಂಡು ಮಹಿಪತಿಯು ತನ್ನೊಳು
ತಾನು ತ್ರಾಹಿ ತ್ರಾಹಿಯಿಂದ ಮನದೊಳು ೩

## ೩೩೩

ಸುವ್ವಿ ಶ್ರೀ ಗುರುನಾಥ ಸುವ್ವಿ ಸದೋದಿತ
ಸುವ್ವಿ ಸಾಯೋಜ್ಯದೊಡೆಯನೆ
ಸಾಯೋಜ್ಯದೊಡಿಯ ಸದ್ಗುರು ನಮ್ಮಯ್ಯ
ಸುವ್ವೆಂದು ಪಾಡಿ ಸಜ್ಜನರೆಲ್ಲ ಧ್ರುವ

ಮನವ ಕಣಕವ ಮಾಡಿ ಗಣಪತಿಯ ಬಲಗೊಂಡು
ಅನುಮಾನೆಂಬೆಳ್ಳ ಚಿಗಳಿಯ
ಅನುಮಾನೆಳ್ಳ ಚಿಗಳಿ ನೆನವು ನೆನಗಡಲಿಯ
ಗಣನಾಥಗಿಟ್ಟು ಬಲಗೊಂಡು ೧

ಮನವೆಂಬ ಕಣಕವ ಘನವಾಗಿ ಕುಟ್ಟುತ
ಜ್ಞಾನ ವೈರಾಗ್ಯದೊಡಗೂಡಿ
ಒಡಗೂಡಿ ಕುಟ್ಟುತ ಪ್ರಾಣದ ಸಖಿಯರು
ಅನಂದ ಘನವ ಬಲಗೊಂಡು ೨

ನಿರ್ಗುಣಾನಂದನು ಸುಗುಣವ ತಾಳಿದ
ಅಗಣಿತಗುಣ ಪರಿಪೂರ್ಣ
ಪರಿಪೂರ್ಣವಾಗಿಹ ಅಗಮ್ಯನುಪಮ
ನಿಗಮ ಗೋಚರನ ಬಲಗೊಳ್ಳಿ ೩

ಉತ್ಪತ್ತಿ ಸ್ಥಿತಿ ಲಯ ವಿಸ್ತಾರದೋರಲು
ಮತ್ತೆ ತ್ರಿಗುಣವ ತಾಳಿದ
ತಾಳಿದ ಸತ್ವ ರಜ ತಮವು ತ್ರಿಮೂರ್ತ್ಯದ
ನಿತ್ಯ ನಿರ್ಗುಣನ ಬಲಗೊಳ್ಳಿ ೪

ಭಕ್ತರ ಹೊರಿಯಲು ಪೃಥ್ವಿಯೊಳಗಿನ್ನು
ಹತ್ತವತಾರ ಧರಿಸಿದ
ಭರಿಸಿ ಪೃಥ್ವಿಯೊಳು ಮುಕ್ತಿ ಸಾಧನವಿತ್ತು
ಪತಿತಪಾವನನ ಬಲಗೊಳ್ಳಿ ೫

ಅನಾಥಜನರ ದೈನ್ಯ ಹರಿಸಲಾಗಿ
ಆನಂದದಿಂದ ಪುಟ್ಟಿಹ್ಯ
ಪುಟ್ಟಿಹ್ಯಾನಂದದಿ ಘನ ಗುರುಮೂರ್ತಿಯ
ಜ್ಞಾನದಲೊಮ್ಮೆ ಬಲಗೊಳ್ಳಿ ೬

ವಸುಧಿಯೊಳು ದೃಢ ಅಸಿಯ ಕಲ್ಲನೆ ಮಾಡಿ
ಕುಸುವ ನಿಶ್ಚಯ ಒನಕಿಯ
ಕುಸುವ ನಿಶ್ಚಯದ ಒನಕಿ ಹಸ್ತದಿ ಪಿಡಿದು
ಹಸನಾಗಿ ಕಣಕ ಕುಟ್ಟುತ ೭

ಹಸನದಿಂದ ಕುಟ್ಟಿ ನಾದಿ ಉರಳಿ ಮಾಡಿ
ಮದನ ಮೋಹನಗ ಮದುವೀಗ
ಮದುವಿಯ ಮನೆಯಲ್ಲಿ ಮುದದಿ ಮೂವತ್ತಾರು
ಮೊದಲಾದ ಗುರಿಯ ಮುತ್ತೈದೇರು ೮

ಚದುರತನದಲಿ ಒದಗಿ ಮುತ್ತೈದೇರು
ಯದುಕುಲೋತ್ತಮನ ನೆನವುತ
ನೆನವುತ ಹದನದಿಂದಲಿ ಮನವಿಡುತ
ಆದಿ ತ್ರಿಮೂರ್ತಿ ಬಲಗೊಂಡು ೯

ಅಸಿಯ ಕಲ್ಲಿ ಒನಕೆ ಉಸಲಾರಗೊಡದೆ
ಹಸನಾಗಿ ಕಣಕ ಕುಟ್ಟುತ
ಕುಟ್ಟುತ ಮನವೆಂಬ ಕಣಕ ಹಸನವು ಮಾಡಿ
ವಿಶ್ವ ವ್ಯಾಪಕನ ಮದುವಿಗೆ ೧೦

ಕುಟ್ಟಿದ ಕಣಕವು ಘಟ್ಟಿಸಿಹ ಮಾಡಿ
ಒಟ್ಟಿ ಉನ್ಮನೆಯ ಮುದ್ರಿಯಲಿ
ಮುದ್ರಿಲೆ ಒಟ್ಟಲು ದಿಟ್ಟ ಮುತ್ತೈದೇರು
ಕೊಟ್ಟ ಸದ್ಗುರು ಹರುಷವ ೧೧

ಜ್ಞಾನ ವೈರಾಗ್ಯವೆಂಬ ಅನಾದಿ ಶಕ್ತ್ಯರು
ಕಣಕವ ಕುಟ್ಟಿ ದಣಿದರು
ಮನವೆಂಬ ಕಣಕದ ಉರಳೆ ಉನ್ಮನಿಲಿಟ್ಟು
ಮೌನ್ಯ ಮೋನದಲಿ ಮುಸುಕಿರೆ ೧೨

ಹಸನಾದ ಕಣಕಲಿ ಹೊಸಪರಿ ಭಕ್ಷ್ಯವು
ಹೆಸರಿಟ್ಟು ಏಸು ಪರಿಯಿಂದ
ಪರಿಯಿಂದ ಮಾಡುತ ಬೀಸೋರಿಗಿಗಳು
ವಾಸುದೇವನ ಮದುವಿಗೆ ೧೩

ಅಡಿಗಿಯ ಮಾಡಿದ ಸಡಗರ ಪೇಳಲಿ
ಪೊಡವಿಯೊಳಿನ್ನು ಅಳವಲ್ಲ
ಅಳವಲ್ಲದಡಗಿಯ ಕೂಡಿ ಮುತ್ತೈದೇರು
ಎಡಿಯು ಮಾಡಿದರು ತಡೆಯದೆ ೧೪

ತಂದೆ ನಮ್ಮೊಪ್ಪನ ಬಂದ ನಿಬ್ಬಣವು
ಒಂದೆ ಸಾಲದಲಿ ಕುಳಿತರು
ಕುಳಿತು ಸಾಧು ಜನರ ಮುಂದೆ ಎಡಿ ಮಾಡಿ
ಒಂದೊಂದು ಪರಿಯ ಬಡಿಸುತ ೧೫

ಹಪ್ಪಳ ಸೊಂಡಿಗಿ ಉಪ್ಪು ಮೆಣಸುಗಳು
ಒಪ್ಪದಿಂದ ಬಡಿಸುತ
ಬಡಿಸುತ ತಪ್ಪದೆ ಉಪ್ಪಿನೆಸರಗಳು
ಶ್ರೀಪತಿ ಪ್ರಸ್ತದೆಡಿಯಲಿ ೧೬

ಪ್ರಸ್ತದ ಎಡಿಯಲಿ ಪತ್ರ ಶಾಖೆಗಳು
ಮತ್ತೆ ಅನೇಕ ಪರಿಯಾದ
ಪರಿಯಾದ ಶಾಖವು ಸುತ್ತ ಪಂಕ್ತಿಯಲಿ
ಆತ್ಮದಿಂದ ಬಡಿಸುತ ೧೭

ಪರಮಾನ್ನಗಳ ತಂದು ಹಿರಿಯ ಮುತ್ತೈದೇರು
ಸರಿಯಾಗಿ ಎಡಿಯ ಬಡಿಸುತ್ತ
ಬಡಿಸುತ ಅನ್ನ ಪರಮಾನ್ನ ಅನುಭವದ
ಅನಂದದಿಂದ ಬಡಿಸಿದೆ ೧೮

ಮನೋ ಅನುಮಿಷದ ಎಣ್ಣೋರಿಗಿಗಳು
ಎಣಕಿಲ್ಲದಿಹ ಭಕ್ಷ್ಯವು
ಭಕ್ಷ್ಯದ ಜಿನಸ ಅನೇಕ ಪರಿಯಲಿ
ಘನದೊಲುವಿಂದ ಬಡಿಸುತ ೧೯

ಸಖರಿ ತುಪ್ಪವು ಭಕ್ತಿಭಾವದಲಾದ
ಅಕ್ಕತಂಗೆರು ಬಡಿಸುತ
ಬಡಿಸುತ ನಡೆದರು ಅಖರದಿಂದಲಿ
ಏಕಶಾಂತನ ಮದುವಿಗೆ ೨೦

ಮೊಸರು ಮಜ್ಜಿಗಿಯು ಸುವಾಸದಿಂದಾದ
ಲೇಸಾಗಿ ದಣಿಯಬಡಿಸಿರೆ
ಬಡಿಸಿದ ಷಡುರಸಾನ್ನವನುಂಡಿನ್ನು
ಕಡುಬೇಗ ಪ್ರೇಮ ಉಕ್ಕಿತು ೨೧

ಉಂಡುವೀಳೆಯುವ ಕೊಂಡು ಸಾಧುಸಭೆ
ಮಂಡಲದೊಳು ಪೊಗಳಿತು
ಪೊಗಳಿತಾ ಮಂಡಲದೊಳು ಪ್ರಚಂಡನ
ಮದುವಿ ಅಖಂಡ ಹರುಷದಿ ೨೨

ಗಂಧ ಕಸ್ತುರಿಯ ತಂದೆ ಗುರುಕೃಪೆಯ
ಚಂದವಾಗಿಟ್ಟು ಮೆರೆದರು
ಮೆರೆದು ಮೇದಿನಿಯೊಳು ಗುರುದಯ ಕರುಣಾದಿ
ಪರಮ ಸುಪಥವ ಪಡೆದರು ೨೩

ಮದುವಿ ಮುತ್ತೈದೇರು ಮುಕ್ತಿಸಾಧನ ಕಂಡು
ಸದಮಲ ಸುಖವ ಗೈದರು
ಸುಖಸೂರೆಕೊಂಡಿನ್ನು ಶ್ರೀಮಂತಕರದೊಳು
ಬೆರೆದು ಹರುಷವ ಪಡೆದರು ೨೪

ಸರಿ ಇಲ್ಲದ ಪ್ರಸ್ತ ಧರೆಯೊಳಗಾಯಿತು
ಪರಮಾನಂದದ ಹರುಷಲಿ
ಹರುಷವ ಕಂಡಿನ್ನು ಕರುಮುಗಿದು ಮಹಿಪತಿ
ಹೃತ್ಕಮಲದಲ್ಲಿ ಸ್ತುತಿಸಿದ ೨೫

ಶ್ರೀಪತಿ ಮದುವಿಯ ಸ್ತುತಿ ಪಾಡಿದವರಿಗೆ
ಪಾತಕವಿಲ್ಲ ಭಯವಿಲ್ಲ
ಭಯವಿಲ್ಲ ಕ್ಷಿತಿಯೊಳು ಗುರುಭಕ್ತಜನರಿಗೆ
ಸಂತತ ಸುಖವ ಪಡೆವರು ೨೬

## ೩೩೪

ಸೃಷ್ಟಿಯೊಳಗೆಲ್ಲ ದುಷ್ಟರ ಪ್ರಭೆಯಾಗಿ
ನಿಷ್ಠರುದೋರದಂತಾದರು ಮಾ ಧ್ರುವ

ಭ್ರಷ್ಟರು ಬೂಟಿಕಿ ಶಿಷ್ಟರೆ ಕೈಕೊಂಡು
ನಿಷ್ಠರಿಗಾಟ್ಲಿ ತಂದರು ಮಾ
ತುಟ್ಟಿಲೆ ಮಿಸುಕದೆ ಗುಟ್ಟಿಲಿದ್ದವರ
ಬಟ್ಟೆಗ್ಯಳದಿನ್ನು ತಾಹರು ಮಾ
ಹೊಟ್ಟೆಯೊಳು ಹೊಕ್ಕು ಕಟ್ಟಲೆ ಕುಳಿತಿನ್ನು

ನೆಟ್ಟ ನೇರಿಷ್ಟ ನೇಮಿಸುರು ಮಾ
ಇಟ್ಟ ತೊಟ್ಟವರನು ಕೆಟ್ಟದೃಷ್ಟಿಲೆ ನೋಡಿ
ದಿಟ್ಟತನದಿ ಪ್ರಾಣಕೊಂಬರು ಮಾ ೧

ಕೊಟ್ಟು ಹಣಹೊನ್ನು ಇಟ್ಟದ್ದು ಬೇಡಲು
ಕುಟ್ಟಿ ಅವನಬಾಯಿ ಹಾರರು ಮಾ
ತುಟ್ಟಿಲೆ ವಂದಾಡಿ ಹೊಟ್ಟಲೆ ವಂದಿಟ್ಟು
ನೆಟ್ಟನೆ ಘಾಸಿಮಾಡರು ಮಾ
ಗಂಟುಳ್ಳವರ ಕಂಡು ಕಟ್ಟಿದಂಡಗಳನ್ನು
ನಷ್ಟತನದಿ ಹೊಟ್ಟೆ ಹೊರುವರು ಮಾ
ಬಟ್ಟಿಲೆ ತೋರಲು ಬಿಟ್ಟಿಯ ಹಿಡಿದಿನ್ನು
ಹೆಟ್ಟಿ ಅವನ ಮುಂದೆ ನಡೆಸುರು ಮಾ ೨

ಶುದ್ದಿಯು ಇಲ್ಲದೆ ರಾಜ್ಯಾಧಿಪತಿಗಳು
ಇದ್ದು ಇಲ್ಲದಂತಾದರು ಮಾ
ಮಂದಮತಿಗಳು ಅಂದಣವೇರಿನ್ನು
ಬುದ್ಧಿವಂತರೀಗ್ಹೀನತಂದರು ಮಾ
ಮುದ್ರಾಧಾರಿಗಳೆಲ್ಲ ಕ್ಷುದ್ರದೃಷ್ಟಿಯು ಮಾಡಿ
ಕ್ಷುದ್ರತನದಿ ಕೆಡುತಿಹರು ಮಾ
ಸಿದ್ಧಸಾಧಕರೆಲ್ಲ ಗುದ್ದನೇ ಹೊಕ್ಕರು
ಇದ್ದರೆ ಬುದ್ಧಿಹೀನರು ಮಾ ೩

ಉಳಿಯಮುಟ್ಟಿದ ದೈವ ಉಳಿಯದೇ ಹೋದವು
ಉಳಿಗಾಲ ವಿಲ್ಲದಂತಾಯಿತು ಮಾ
ತಿಳಿವಳಿಕುಳ್ಳವರೆಲ್ಲ ತಲೆಮುಸಕ್ಹಾಕಿನ್ನು
ಕಳ್ಳರೆ ಸಾಜರು ಆದರು ಮಾ
ಒಳ್ಳೆಯವರ ನುಡಿ ಎಳ್ಳಷ್ಟು ಮಾಡುತ

ಸುಳ್ಳರು ನಿಜನುಡಿವೆಂಬುರು ಮಾ
ಉಳ್ಳವರು ಖಳಬುದ್ಧಿ ಕೈಕೊಂಡು
ಇಳೆಯೊಳು ಧರ್ಮವ ಜರೆದರು ಮಾ ೪

ಸಾಧುಸಜ್ಜನರೆಲ್ಲ ಭೇದವ ಅಡಗಿಸಿ
ಮೇಧಿನಿಯಲು ಗುಪ್ತರಾದರು ಮಾ
ಇದ್ದರ ಘನಸುಖ ಸಿದ್ಧರ ನೆರೆಯಲಿ
ಬುದ್ಧಿಹೀನರು ತಾವು ಅರಿಯರು ಮಾ
ಸದ್ಗುರು ಕೃಪೆಯಿಂದ ಸದ್ಬ್ರಹ್ಮದ ನೆಲೆಯ
ಸತ್ ಶಿಷ್ಯಮಹಿಪತಿ ತಿಳಿದನು ಮಾ
ಎಂದಿಗೆ ಬೇಡಿನ್ನು ದುರ್ಜನರ ಸಂಗವು
ತ್ರಾಹಿ ತ್ರಾಹಿ ತ್ರಾಹಿ ಎಂದನು ಮಾ ೫

## ೩೩೫

ತವರು ಮನೆಯು ನನ್ನ ಸುವಿದ್ಯಪುರಲ್ಯದೆ
ಸಾವಿರಕೊಬ್ಬಗೆ ದೋರುತದೆ ಧ್ರುವ

ಸಾವಿರಕೊಬ್ಬನೆ ತಾ ಸುದೇವನೆ ಬಲ್ಲ
ಭಾವಿಸದಲ್ಲದೆ ತಿಳಿಯುವದಲ್ಲ
ಅವಿದ್ಯಪುರ ದಾಟ, ಮಂದಾಕ್ಕಾಗಲು ಎಲ್ಲ
ಆವಾಗ ತಿಳಿವುದು ಹೇಳಿದ ಸೊಲ್ಲ ೧

ಸಾವಿರ ತೆನೆಯಲೊಪ್ಪುತದೆ ಒಳಕೋಟ
ಠವಿಠವಿಸುತದೆ ನೋಡಿ ಮನಮುಟ್ಟಿ
ಅವ್ವ ಅಪ್ಪನೇ ನಮ್ಮ ಇಹಸ್ಥಾನವು ಘಟ್ಟಿ
ದೇವಾಧಿ ದೇವನೊಬ್ಬನೆ ಜಗಜಟ್ಟಿ ೨

ಬಲು ಅಭೇದ್ಯಸ್ಥಳ ತಿಳಿಯದಿನ್ನೊಬ್ಬರಿಗೆ
ನೆಲೆವಂತರಿಗೆ ತಾನು ತಿಳಿವದು ಬ್ಯಾಗೆ
ಉಲವುತದ ತುಂಬಿ ಥಳಗುಟ್ಟಿ ಹೊಳವ್ಹಾಂಗೆ
ಬಲಗೊಂಡು ಕೇಳಿ ಶ್ರೀಸದ್ಗುರುವಿಗೆ ೩

ಅಣ್ಣನೆಂಬಾತ್ಹಾನೆ ಅನಂದದಲ್ಹಾನೆ
ನೆನೆಪಿಗೊಮ್ಮೆ ಬಂದು ಸುಳವುತ್ಹಾನೆ
ಕಣ್ಣೆಲಿ ಕಟ್ಯಾನೆ ತಮ್ಮನೆಂಬತ್ಹಾನೆ
ಕ್ಷಣಕೊಮ್ಮೆ ಹೊಳೆವುವಾನೆ ೪

ಅಕ್ಕನೆಂಬಾಕಿ ತಾ ಸಖರಿ ಅಗ್ಹಾಳೆ
ಅಖರದಲೆವ್ವ ಈ ಮಾತು ಕೇಳೆ
ಪ್ರಖ್ಯಾತದಲಿ ಪ್ರೀತಿಮಾಡುವ ತಂಗ್ಯ್ಹಾಳೆ
ಸುಖ ಸುರುತ್ಹಾಳೆ ಇರುಳು ಹಗಲು ೫

ಅತ್ತಿಗೆ ನಾದುನಿ ಭಾವ ಮೈದುನರೆಲ್ಲ
ಅಂತ್ಯಕವಾಗ್ಯಾರೆ ಮನಿಯೊಳಗೆಲ್ಲ
ಸುತ್ತೇಳುವ ಬಳಗ ಉತ್ತುಮರೆನಗೆಲ್ಲ
ಹಿತದೋರುತಾರವ್ವ ಸರ್ವಾಪ್ತರೆಲ್ಲ ೬

ಸರ್ವಾಪ್ತವೆಂಬುದು ಸರ್ವೇಶನೆ ತಾನು
ಸರ್ವದಾ ಎನ್ನೊಳು ತಾ ಕಾಮಧೇನು
ಪರ್ವಕಾಲದ ಬಹಳ ಏನೆಂದ್ದೇಳಲಿ ನಾನು
ಸರ್ವಾರ್ಥ ಕೊಡುತ್ಹಾನೆ ಸರ್ವಾತ್ಮ ತಾನು ೭

ಅವ್ವ ನಮ್ಮಪ್ಪಗೆ ಸರಿ ಇಲ್ಲ ಜಗದೊಳು
ಆವ ಕಾಲಕೆ ತಾ ಇವರ ಮೇಲು
ಇವರೆಂಬುದು ಒಂದೆ ಮಾತಿನ ಸ್ವಕೀಲು
ಸವಿಸುಖಬಲ್ಲರು ಅನುಭವಿಗಳು ೮

ತೌರಮನೆಂಬುದು ಪ್ರತ್ಯೇಕಾ ತಾನಿಲ್ಲ
ಭಾವಾರ್ಥದ ಮಾತು ಕೇಳಿರೆಲ್ಲ
ಅವಗುಣನೆ ಬಿಟ್ಟು ಕೇಳಿ ಸವಿಯ ಸೊಲ್ಲ
ಪೂರ್ವಿಕರಿಗಿದೆ ಸಾರವೆಲ್ಲ ೯

ಸುದ್ದಿ ಹೇಳಿ ಕಳುಹಲಿಕ್ಕೆ ಈ ಸಾಧನ
ಇದುವೆ ಅಯಿತು ತವರ ಮನಿ
ಬುದ್ಧಿವಂತನೆಬಲ್ಲ ಲಕ್ಷಕೊಬ್ಬ ಜ್ಞಾನಿ
ಸಿದ್ಧಿದರಿಡುವದು ಸದ್ಗುರು ಪ್ರಾರ್ಥನಿ ೧೦

ಬಳಗದೊಳು ಕೂಡಿ ಒಳಿಥಾಗ್ಯಾಯಿತು ಎನಗೆ
ಒಳ ಹೊರಗೆ ಸುಖ ಎದುರಿಟ್ಟತೀಗ
ಕುಲಕೋಟಿ ಬಳಗ ಸದ್ಗುರು ಪಾದವ್ಯನಗೆ
ಸಲಹುತಾನೆ ಸ್ವಾಮಿ ಮಹಿಪತಿಗೆ ೧೧

## ೩೩೬

ತಾನಾ ತಂದನಾನಾ ತಾನಾ ತಂದನಾನಾ
ತಾನಾ ತಂದನಾನಾ ತಾನಾ ತಂದನಾನಾ ಧ್ರುವ

ತಾನೆ ತಾನಾದ ಖೂನ ತಾನೆ ದೋರುದು ಘನ
ತಾನೆ ತಾನಾಗಿ ತಾನೆಂಬುದು ಲೇಸು ನಾನಾ ೧

ತಾನಾಗದೆ ಜ್ಞಾನ ನಾನಾ ಎಂಬುದೆ ಹೀನ
ಶ್ವಾನ ಸೂಕರ ನಾನಾ ಜನುಮ ತಾಳ್ದೆಖೂನ ೨

ತಾನೆ ತಾನಾದ ಪೂರ್ಣ ಭಾನುಕೋಟಿಸುಘನ
ಖೂನ ಮಹಿಪತಿಗಿದೆ ತಾನೆ ತಾನಾದ ತಾನಾ ೩

## ೩೩೭

ತಾನಾ ತಂದನಾನಾ ತಾನಾ ತಂದನಾನಾ
ತಾನಾ ತಂದನಾನಾ ತಾನಾ ತಂದನಾನಾ ಧ್ರುವ

ತಾನಾ ತಂದನಾನಾ ತಾನೆಂಬುವದರ ಖೂನ
ಏನೆಂದರಿಯ ಹೀನ ಮನುಜ ಪಾಮರ ಪೂರ್ಣ ೧

ತಾನೆಂಬುದೆ ತಾ ದೈವ ನಾನೆಂಬುದೆ ತಾ ಜೀವ
ಜ್ಞಾನದಿಂದ ತಿಳಿವ ಅನುಭವ ಆಶ್ರೈಸುವ ೨

ತಾನೆ ತಂದರ ನಾನಾ ತನ್ನಿಂದವೇ ಜೀವನ
ನಾನೆಂಬುದವಗುಣ ಜನ್ಮಕಿದೆ ಸಾಧನ ೩

ತಾನೆ ತಂದರ ತಾರಕ ನಾನೆಂದರೆ ನರಕ
ಜ್ಞಾನ ಗುರುಮುಖ ಖೂನ ತಿಳಿವುದು ಸುಖ ೪

ತಾನೆಂದವ ತಾ ಬ್ರಹ್ಮ ನಾನೆಂದರ ಅಹಮ್ಮ
ಅನುಭವದಿಂದ ವರ್ಮ ಖೂನಾದರ ಸಂಭ್ರಮ ೫

ತಾನೆಂದರೆಸ ಅರ್ಕ ನಾನೆಂದರೆ ತಾ ತರ್ಕ
ಹೀನಗುಣ ಸಂಪರ್ಕ ಏನೆಂದರಿಯ ಮೂರ್ಖ ೬

ತಾನೆಂದರೆ ತಾಂ ಮಾನ್ಯ ನಾನೆಂದರಮಾನ್ಯ
ಖೂನಮಾಡಿ ತಾರ್ಕಣ್ಯ ಅನುಭವಿಸಲು ಧನ್ಯ ೭

ತಾನೆಂದರೆ ತಾ ಬಂದೆ ನಾನೆಂದು ಬಲು ನೊಂದೆ
ಅನೇಕ ಜನ್ಮದಿಂದ ದಣಿದು ನಾ ಸಾಕೆಂದೆ ೮

ತಾನೆಂಬುದು ಸುಜ್ಞಾನ ನಾನೆಂಬುದು ಅಜ್ಞಾನ
ತಾನೆಂದರೆ ಅಣುರೇಣು ನಾನೆಂದರನುಮಾನ ೯

ತಾನೆಂಬುದ ತೋರಿಸಿ ನಾನೆಂಬುದ ಮರಸಿ
ತಾನೆತಾನಾದ ಋಷಿ ಆನಂದೋಬ್ರಹ್ಮ ಸೂಸಿ ೧೦

ತಾನೆ ತಾನಾಗಿ ಒಂದೆ ಖೂನ ದೋರಿದ ತಂದೆ
ಭಾನುಕೋಟಿ ತೇಜೊಂದೆ ಪೂರ್ಣ ಮಹಿಪತಿಗೊಂದೆ ೧೧

## ೩೩೮

ತಾನಾ ತಂದನಾನಾ ತಾನಾ ತಂದನಾನಾ
ತಾನಾ ತಂದನಾನಾ ತಾನಾ ತಂದನಾನಾ ಧ್ರುವ

ಬಲ್ಲೆ ಬಲ್ಲೆನೆಂಬರು ಬಲ್ಲರಿಯದಿಹದನು
ಬಲ್ಲರೆ ನೀವಿನ್ನು ಹೇಳುವುದು ತಾನಾ ೧

ಕಣ್ಣು ಕಾಂಬುವದೇನು ಕಣ್ಣಿನೊಳಿಹುದೇನು
ಕಣ್ಣು ಕಾಂಬುವ ಗತಿ ತಿಳಿಯುವುದು ತಾನಾ ೨

ಕಿವಿಯ ಕಿವಿಯೆಂಬುದೇನು ಕಿವಿಯ ಕೇಳುವುದೇನು
ಕಿವಿಯ ಕೇಳುವ ಗತಿ ತಿಳಿಯುವದು ತಾನಾ ೩

ಮೂಗು ಮೂಗೆಂಬುದೇನು ಮೂಗಿನೊಳಾಡುವದೇನು
ಆಡುವ ಗತಿಗಳ ತಿಳಿಯುವದು ತಾನಾ ೪

ಬಾಯಿ ಬಾಯೆಂಬುದೇನು ಬಾಯಿಯೊಳ ನುಡಿವದೇನು
ಬಾಯಿ ನುಡಿವ ಗತಿ ತಿಳಿಯುವದು ತಾನಾ ೫

ದೇಹ ದೇಹೆಂಬುದೇನು ದೇಹದೊಳಿಹುದೇನು
ದೇಹದೊಳಿಹ ವಸ್ತು ತಿಳಿಯುವದು ತಾನಾ ೬

ಪ್ರಾಣವೆಂಬುದೇನು ಕರಣವೆಂಬುದೇನು
ತತ್ವವೆಂಬುದೇನು ತಿಳಿಯುವದು ತಾನಾ ೭

ಜೀವ ಅಂಬುದೇನು ಜೀವಭಾಗಗಳೇನು
ಜೀವ ಶಿವದ ಗತಿ ತಿಳಿಯುವದು ತಾನಾ ೮

ಆರುವ್ವೆಂಬುದೇನು ಮರವ್ವುವೆಂಬುದೇನು
ಇದರೊಳು ಖೂನ ಕುರುಹು ತಿಳಿಯುವುದು ತಾನಾ ೯

ಕನಸುವೆಂಬುದೇನು ಕನಸು ಕಾಂಬುವದೇನು
ಕನಸು ಹೇಳುವದೇನು ತಿಳಿಯುವುದು ತಾನಾ ೧೦

ಹಗಲು ಎದ್ದಿಹದೇನು ಇರಳು ಮಲಗುವದೇನು
ಇದರ ಹಗರಣವನು ತಿಳಿಯುವದು ತಾನಾ ೧೧

ಹುಟ್ಟಿ ಬಾಳುವದೇನು ಸತ್ತು ಹೋಗುವದೇನು
ಸತ್ತು ಹುಟ್ಟುವದೇನು ತಿಳಿಯುವದು ತಾನಾ ೧೨

ಹೆಣ್ಣು ಗಂಡೆಂಬುವದೇನು ಹೆಣ್ಣು ಗಂಡು ಕೂಡುವದೇನು
ಕೂಡುವದೇನೆಂದು ತಿಳಿಯುವದು ತಾನಾ ೧೩

ಅನುಭವ ಗತಿಗಳ ತಿಳಿಯಲು ಆತ್ಮದೊಳು
ತಿಳಿಯಲು ಜನ್ಮವು ಅಳಿಯುವದು ತಾನಾ ೧೪

ಆತ್ಮ ಅನುಭವವು ತಿಳಿಯುವದು ಗುರುಕೃಪೆಯು
ತಿಳಿಯಲು ಜೀವನ್ಮುಕ್ತಿಯು ತಾನಾ ೧೫

ಮಹಿಪತೆಂಬ್ಹೆಸರನು ಕರೆದರೊ ಎಂಬುವದೇನು
ಓ ಎಂಬುವದೆನಗಿನ್ನು ತಿಳಿಯಿತು ತಾನಾ ೧೬

ಇಂತು ಪರಿಯಾಯವು ತಿಳುಹಿದ ಗುರುರಾಯ
ಎನ್ನೊಳು ಭಾಸ್ಕರ ಗುರು ತಾನೆ ತಾನಾ ೧೭

## ३३೯

ಶೋಭನವೆನ್ನಿರೋ ಶೋಭನ ಬನ್ನಿರೆ
ಶೋಭನ ಬನ್ನಿ ಸವ್ಯದಿಂದ ಧ್ರುವ

ಶೋಭಾನವೆಂಬೋದು ಸೋಹಂಭಾವಗುಣ
ಅಹಂಭಾವಿಗಳು ಅರಿಯವು
ಅಹಂಭಾವಿಗಳು ಅರಿಯುವು ಅನಂಗನ
ಅಹಂಭ್ರಮೆಯು ವಿಪರೀತ ೧

ಶೋಭನವೆನ್ನಿರೇ ಸಿದ್ಧಾಂತನುಭವಿಗಳು
ಕಾಮಿ ಕಾಮಣ್ಣನ ಮದುವಿಗೆ
ಕಾಮಿ ಕಾಮಣ್ಣನ ಮದುವೀಗ ಸಕಲರು
ಪ್ರಾಣಿ ಮಾತ್ರಗಳೆಲ್ಲ ಬರಬೇಕು ೨

ಶೋಭನವೆನ್ನಿರೇ ಮದೂಣಿಗಾನಂಗಗೆ
ಕಾಮಿತದಳಗಿತ್ತಿ ಅರಸಗ
ಕಾಮಿತದಳಗಿತ್ತಿ ಅರಸ ಮೋಹನ್ನಗೆ
ನೆರೆಯಿತು ಲೋಕ ಧರೆಯೊಳು ३

ಶೋಭನವೆನ್ನಿರೇ ಕಾಮಿ ಕಾಮಣ್ಣಗೆ
ಕಾಯದೊಳೀಪ್ಸ ಕರುಣೆಗೆ
ಕಾಯದೊಳಿದ್ದು ಮೆರೆವ ಅನಂಗನು
ಚರ್ಮದಬೊಂಬಿ ಗುರುತಾಗಿ ೪

ಶೋಭನವೆನ್ನಿರೇ ಸಜ್ಜನ ಸಾವಿತ್ರೇರು
ಆನಿ ಮೊದಲೆ ಇರುಹು ಕಡಿಗೆಲ್ಲ
ಆನಿಮೊದಲೆ ಇರುಹು ಕಡಿಗೆಲ್ಲ ಮಹಿಪತಿ
ಶೋಭಾನಯೆಂದ ಸಬೂದಿಂದ ೫

## ಕೊರವಂಜಿ ಪದ

### ೩೪೦

ಬಾರೆ ಸತ್ಯಭಾಮೆ ತೋರೆ ನಿಮ್ಮ ಸುಹಸ್ತದ ಠೇವೆ ಧ್ರುವ

ಸರ್ಕನೆ ಬಾರವ್ವಾ ಅರಿಕ್ಯುಳ್ಳ ಗರತಿ
ಮುರುಖಿಸಬ್ಯಾಡೆನ್ನ ಕರವ ಕೊರವತಿ
ತಾರ್ಕಣ್ಯಾ ಬರುತಾದ ಪರಮ ಸುವಾರ್ತಿ
ತರ್ಕರಹಿತ ವಸ್ತು ಕರಕೊ ಸುಮೂರ್ತಿ ೧

ಓಯವ್ವ ಅವ್ವ ಬಾರೆ ನಮ್ಮವ್ವ
ದೈವುಳ್ಳ ಗರತಿ ನೀನವ್ವ
ದೈವ ಬರುದೆ ನಿನ್ನೊಳಗವ್ವ
ಕೈದೋರೆ ಕೈದೋರೆ ಕೈದೋರೆ ನಿಮ್ಮ ೨

ಕೈದೋರೆ ಕೈದೋರೆ ಕೈದೋರೆ ನಿಮ್ಮ
ಕೈಯ ಲಕ್ಷಣ ನೋಡಿ ಹೇಳುವೆನಮ್ಮ
ಅಯ್ಯ ಬರುತಾನೆ ಆಶೇಲಿ ನಿಮ್ಮ
ಕೈಗೊಟ್ಟು ಕೇಳೆ ನಿಜ ಗುಹ್ಯವರ್ಮ ೩

ಸುಳ್ಳು ಮಾತನಾಡಿ ಒಡಲ ಹೊರಳವಲ್ಲ
ಬಲ್ಲಷ್ಟು ಬೊಗಳುವೆ ವಿಷಯ ದಾಸ್ಯವಳಲ್ಲ
ಉಳ್ಳಷ್ಟು ಹೇಳುವೆ ಕೇಳೆ ಶಿವ ಸೊಲ್ಲ
ಹೇಳುವ ಮಾತಿದು ಘನ ಗುರು ತಾ ಬಲ್ಲ ೪

ಕೊರವಂಜಿ ಮಾತಿದು ಕಿವಿಗೊಟ್ಟು ಕೇಳಮ್ಮ
ಬರುತಾನ ಉದರಲಿ ಹುಟ್ಟಿ ಸಗುಣ ನಿಮ್ಮ
ತಾರಿಸುವ ಸ್ವಾಮಿ ಪತಿತ ಪಾವನ ನಿಮ್ಮ
ಹರಷದೋರುವ ನಿತ್ಯಾನಂದೋ ಬ್ರಹ್ಮ ೫

ಎಂದ ಮಾತನೆ ಕೇಳಿ ಬಂದಳು ಭಾವೆಮ್ಮ
ಚೆಂದ ಉಳ್ಳ ಸುರಸ ವಾಕ್ಯ ಕೇಳಿದಳೊಮ್ಮೆ
ಬಂದು ಹರುಷದಿ ಪೂರ್ಣ ಸಂದಿಸಿಟ್ಟಳು ಪ್ರೇಮ
ಒಂದೆ ನಿಜಸುಮಾತ್ಹೇಳ್ಯೆಂದಳು ನೇಮ ೬

ಎಲ್ಲಿಂದ ಬಂದೆವ್ವ ಸೊಲ್ಲ ಬೀರುತ ಶಿವ
ಬಲ್ಲ ಮಹಿಮಳೆಂದು ನಾನರಿಯೆನವ್ವ
ಇಲ್ಲೆವೆ ಕಂಡೆ ನಾ ಸೊಲ್ಲಿನ ಮಹಿಮರು
ಎಲ್ಲ ನೆಲೆನಿಭೇಳೌವ್ವ ೭

ಸರಿಯ ಬಂದರ ನಿನ್ನ ಮರಿಯೆನವ್ವ ಎಂದು
ಖರೆ ಉಳ್ಳ ಮಾತನೆ ಹೇಳೆ ನಿಜ ಒಂದು
ಹಿರಿಯರಗೀ ಮಾತು ಸರಿಯ ಬಾವ್ಹಾಂಗಿಂದು
ಬೀರವ್ವ ನಿಜಸಾರವಿಂದು ೮

ಲಕ್ಷ ಎಂಬತ್ತುನಾಲ್ಕು ಗ್ರಾಮವ ನೋಡಿ
ಲಕ್ಷಿಸುತ ಬಂದ ಲಕ್ಷಣ ನಿಜಗೂಡಿ
ಲಕ್ಷುಮಿ ಕರದೋರುತದ ನಿಮ್ಮೊಳೊಡಮೂಡಿ
ಅಕ್ಷಯಾನಂದ ಬರುತಾನೆ ಇದರಿಡಿ ೯

ಹರುಷದ ನುಡಿಗೇಳಿ ತ್ವರಿತ ಬಂದಳು ಬಾಲಿ
ಕರ ಕೊಟ್ಟಳು ಸುಶೀಲೆ ವರ ಕೃಪೆಯಲಿ
ಕೊರವಂಜಿ ಮಾತಲಿ ಅರಿತಳು ತಾ ತನ್ನಲಿ
ಪರಮಾನಂದ ಲೀಲೆ ಬೆರದಳು ಕೇಳಿ ೧೦

ನುಡಿಯುವ್ವ ಸಲಲಿತವಾದ ನಿಜವಾಕ್ಯ
ಬಡುವಂತೆ ಹರುಷವು ನೋಡಿ ತ್ರಯಲೋಕ್ಯ
ಬಡಸವ್ವ ನನಗಿಂದು ಇದೆ ನಿಜ ಮುಖ್ಯ
ಕುಡಲಿಕ್ಕೆ ನಿನಗಿದು ಶಕ್ಯ ೧೧

ಮನದಂತೆಯಾದರ ನೆನದೇನವ್ವ ನಿಮ್ಮ
ಅನುಕೂಲಾಗುವ ಪುಣ್ಯ ಪೂರ್ವಾರ್ಜಿತ ನಮ್ಮ
ಸಾನುಕೂಲಾಗುವಂತೆ ಬೇಡಿಕೊಳ್ಳಮ್ಮ
ನೆನಿ ಎಕನಾತಿ ಎಲ್ಲಮ್ಮ ೧೨

ಒಡಮೂಡಿ ಬಂದರ ಉಡಿಯ ತುಂಬೇನವ್ವ
ಜಡಿತಾಭರಣದುಡಿಗಟ್ಟೆ ನಿನಗವ್ವ
ಹಿಡಿಯದೆ ಅನುಮಾನ ನುಡಿ ನಿಜ ಸಾರವ್ವ
ಕುಡಲಿಕ್ಕೆ ನಿಧಾನದವ್ವ ೧೩

ಕೈಯ ಲಕ್ಷಣದಲಿ ಶ್ರೇಯ ತೋರುತಲ್ಯದ
ದಯ ಉಳ್ಳ ಮಹಿಮದ ಸೋಹ್ಯ ಬೀರುತಲ್ಯದ
ಭಯವಿಲ್ಲದ ಭಾಗ್ಯ ಅಚಲ ತಾನಾಗ್ಯದ
ಜಯಜಯಕಾರ ಭಾಸುತದ ೧೪

ಪುಣ್ಯ ಪ್ರಭೆಯ ಚೆನ್ನಾಗಿ ಭಾಸುತಲ್ಯದೆ
ಕಣ್ಣಿಗೆ ಸುಚಿನ್ಹ ಹೊಳವುತದೆ
ಚಿನ್ನುಮಯದ ಸುಪುತ್ಥಳಿ ಬರುತದೆ
ಬಣ್ಣ ಬಣ್ಣದ ಸುಖ ಬೀರುತದೆ ೧೫

ಅಂಗದೊಳಗ ನಿಮ್ಮ ರಂಗ ಬರುತಾನಮ್ಮ
ಕಂಗಳಿಗಿದರಿಡುತದೆ ಹರುಷವು ನಿಮ್ಮ
ಹಿಂಗಿಸುವ ಭವ ಬಂಧದ ದುಷ್ಕರ್ಮ
ಮಂಗಳಕರಾನಂದೊ ಬ್ರಹ್ಮ ೧೬

ನಿನ್ನ ಭಾಗ್ಯಕ ಸರಿ ಇಲ್ಲೆ ಸಂಜೀವನಿ
ಚೆನ್ನಾಗಿ ಕೇಳೆ ನೀ ಭಾವೆಗುಣಮಣಿ
ಧನ್ಯವಾಯಿತು ನಿನ್ನಂದೆವೆ ಯತಿಮುನಿ
ನಿನ್ನೊಳಗುಂಟು ದೇವಶಿಖಾಮಣಿ ೧೭

ಭಾವೆ ನಿನ್ನಿಂದ ಪಾವನ್ನವಾಯಿತು ಜಗ
ದೇವಾಧಿದೇವ ಮೂಡುವ ನಿನ್ನೊಳಗೀಗ
ಕಾವಕರುಣ ಪ್ರತ್ಯಕ್ಷವಾಗುವ ಯೋಗ
ಸುವಿದ್ಯ ಭಾಸುವ ದಿವ್ಯಭೋಗ ೧೮

ಉಂಡ ಊಟ ಕಂಡ ಕನಸು ಪಿಂಡಲಕ್ಷಣ್ಹೇಳುವೆ
ಮಂಡಲೊಳಗ ಮಂಡಿಸಿಹ್ಯ ಮಹಿಮೆ ನೀನಗ್ಹೇಳುವೆ
ಹಿಂಡದೈವದೊಡಿಯ ನಿನ್ನೊಡಲೊಳಗ ತಾಳುವೆ
ಪಂಡಿತರಿಗೆ ಪ್ರಿಯವಾದಾಗ್ಯ ಖಂಡನೀನೆ ಬಾಳುವೆ ೧೯

ನೀನೆ ಜಗಕ ತಾರಿಸುವ ದೈವದೋರಿಕುಡುವೆ
ನೀನೆ ಭಕ್ತಜನರ ಜನ್ಮಸಾರ್ಥಕವು ಮಾಡುವೆ
ಜ್ಞಾನಗಮ್ಯವಾದ ವಸ್ತುಹಿಡದು ನೀನೆ ಕುಡುವೆ
ನೀನೆ ಸಾಧುಜನರ ಹೃದಯಾದೊಳು ನಿತ್ಯ ಆಡುವೆ ೨೦

ಅಮ್ಮ ನಿಮ್ಮೊಳು ಘಮ್ಮನ್ನೊಳುವ ತಮ್ಮ ಬರುತಾನ
ಯಮ್ಮ ಕೇಳೆ ತಮ್ಮನೆಲೆವಮ್ಮದೋರದೆ
ಸುಮ್ಮಾನಿಹ್ವಾ ಸಮೀಪಲೆ
ಧಿಮ್ಮ ಹಿಡಿದ ಹಮ್ಮಿನೊಳು ಘುಮ್ಮವಾದರು ಬ್ರಹ್ಮಾದಿಗಳೆ
ನಮ್ಮ ನಿಮ್ಮದೆಂಬು ಭ್ರಮೆ ಸುಮ್ಮನ್ಯಾಕಿದೊ ಅಮ್ಮಕೇಳೆ ೨೧

ಬಯಕಿ ಲಕ್ಷಣ ನಿನ್ನ ಹೇಳ್ವೆನವ್ವಾ ತಾಯಿ
ಮಾಯಿಕ ಗುಣ ಸುಟ್ಟು ತಿಂದೇನೆಂಬುದು ಬಾಯಿ
ಕೈಕಚ್ಚಿಲೆ ಶುದ್ಧಿಲ್ಲಾದವರ ತಾಳದು ಸೋವಿ
ಐರಾವತ ಬರುತಾನ ನಿನ್ನೊಳು ಪನ್ನಂಗಶಾಯಿ ೨೨

ಬಾಹ್ಯನಿಷ್ಠರ ಕಂಡು ಬದಿಗೆ ಬರಗುಡಿ ನೀನು
ಅಹಂಭಾವಕ ಹೇಸಿ ವಾಕರಿಸುವೆ ನೀನು
ಸೋಹ್ಯ ಸೊನ್ನಿಯ ಮಾತು ಗುಹ್ಯ ಹೇಳುವೆ ನಾನು
ಸಾಹ್ಯ ಮಾಡುವ ಶ್ರೀಗುರು ತಾನು ೨೩

ಕಾಮಕ್ರೋಧ ಕರದು ತಿಂದೇನೆಂಬುದು ಬಯಕಿ
ನೇಮದಿಂದಲಿ ಮದ ಮತ್ಸರನೆ ನೂಕಿ
ಪ್ರೇಮವಿಲ್ಲದವರ ಎಂದಿಗಾದರ ಸೋಕಿ
ವರ್ಮಿಕರಿಗೆ ನೀ ಕೈಯಗುಡುವಾಕಿ ೨೪

ಆಸಿ ಎಂಬುದು ಅಟ್ಟುಅರದೇನೆಂಬುದು ಬ್ಯಾಗ
ಹುಸಿನುಡಿವೆಂಬದು ಹುರವಾದೀಗ
ಹಸನಾದ ಬಯಕೀದು ಋಷಿ ಮುನಿಗಳ ಯೋಗ
ಲೇಸು ಲೇಸು ನಿನ್ನ ಅಂತರಂಗ ೨೫

ಧನ್ಯವಾದ ರಾಜಯೋಗವ ಬಯಸುದು
ಉನ್ಮನವಾಗಿ ಊರ್ಜಿತವಾದೇನೆಂಬುದು
ಸ್ವಾನುಭವದ ಸುಖ ಸೂರ್‍ಯಾಡೇನೆಂಬುದು
ಭಿನ್ನ ಭೇದಕ ಕಣ್ಣ ತ್ಯರಿಯದಿದು ೨೬

ವಾಸುದೇವನ ಭಕ್ತಿ ಆಶ್ರೈಸೇನೆಂಬುದು
ಶ್ವಾಸೋಚ್ವಾಸಕ ಒಮ್ಮೆ ಬಯಸುವುದು
ವಿಷಯ ಪ್ರಪಂಚಕ ಹೇಸಿ ತಾ ಜರೆವುದು
ಕುಸುಮನಾಭನ ಸೇವೆ ಇಚ್ಛಿಸುವದು ೨೭

ಒಮ್ಮೆ ಸರಸ್ವತಿ ಕೂಡ ಸರಸಾಡೇನೆಂಬುದು
ಒಮ್ಮೆ ಲಕ್ಷುಮಿ ಕೂಡ ಲೋಲಾಡೇನೆಂಬುದು
ಒಮ್ಮೆ ಪಾರ್ವತಿ ಕೂಡ ಪವಡೀಸೆನೆಂಬುದು
ಒಮ್ಮೆ ಏನುನೊಲ್ಲೈನೆಂಬುದು ೨೮

ಹೇಳೇನೆಂದರೆ ನಿನ್ನ ಬಯಕಿಯ ಉಲ್ಲಾಸ
ತಿಳಿಯದಿನ್ನೊಬ್ಬರಿಗ ಗರ್ಭದ ಸುವಾಸ
ಉಲವುತದೆ ನಿನ್ನೊಳು ಸುಪ್ರಕಾಶ
ಥಳಥಳಗುಡುತಿಹ್ಯ ಬಾಲವೇಷ ೨೯

ಧನ್ಯ ಧನ್ಯ ನಿನ್ನ ಗರ್ಭಹೊಳುವ ಹೊಂಬಣ್ಣವು
ಧನ್ಯ ಧನ್ಯ ಒಡಲು ನಿನ್ನ ಪುಣ್ಯ ಪಾವನ್ನವು
ಧನ್ಯ ಧನ್ಯ ನಿನ್ನ ದರುಷಣದ ಜೀವನವು
ಧನ್ಯ ಧನ್ಯ ನಿನ್ನ ಕಂಡ ಜನರ ಜೀವಪ್ರಾಣವು ೩೦

ಭಾವೆ ನಿನ್ನಿಂದ ಖ್ಯಾತಿಪಡೆದ ಪ್ರಹ್ಲಾದನು
ದೇವ ದೇವ ಬಂದು ಸ್ತಂಭದೊಳು ಮೂಡಿದನು
ಆವಾವ ಠಾವಿನೊಳು ಬಂದು ರಕ್ಷಿಸಿದನು
ಜೀವ ಜೀವ ತಾನೆ ಅಗಿ ಪ್ರಾಣನುಳಹಿದನು ೩೧

ನಿನ್ನ ಬಲಗೊಂಡು ದ್ರೌಪದಿಯ ಖ್ಯಾತಿಪಡೆದಳು
ಪುಣ್ಯ ಉಳ್ಳ ಮಹಿಮನಂಘ್ರಿ ಕಣ್ಣಾರ ಕಂಡಳು
ಚೆನ್ನಾಗಿ ಬಂದು ಸ್ವಾಮಿ ಲಜ್ಜೆಗಾಯ್ದು ಸಭೆಯೊಳು
ಬಣ್ಣ ಬಣ್ಣ ವಸ್ತ್ರ ಪೂರಿಸಿದಾನೇಕಗಳು ೩೨

ಸ್ತುತಿಯು ಮಾಡಲು ನಿನ್ನ ಯತಿಮುನಿಗಳವಲ್ಲ
ಗತಿಯ ಪಡೆದರು ಸಕಲ ಮುನಿಜನರೆಲ್ಲ
ಅತಿ ಹರುಷವು ಕೂಡಿದರು ಜಗದೊಳಗ್ಯಲ್ಲ
ಹಿತದೋರುತಿದೆ ವಸ್ತು ಮಯವೆಲ್ಲ ೩೩

ಹೊಳೆವ ಸುಳಿವ ಚೆಲುವ ನಿನ್ನೊಳಗ ನಲುವನೆ
ಕಳವಿಲೊಯಿದ ವೇದನುಳುಹಿದವನು ಬೆಳೆವನೆ
ಇಳೆಯ ಪೊತ್ತು ಭಾರ ತಾಳಿದವನು ಉಲುವನೆ
ನೆಲವ ಗೆದ್ದ ಬಲಿಯು ನಿನ್ನೊಳಗೆ ಒಲುವನೆ ೩೪

ಸೀಳಿ ದೈತ್ಯನ ಕೊಂದ ಶೂರ ಘಮಗುಡತಾನೆ
ಅಳದು ಭೂಮಿಯ ಕೊಂಡು ಬೆಳದವ ಬರುತಾನೆ
ತಿಳಿದು ಪಿತರ ಸೂಡುಕೊಂಡವ ಬರುತಾನೆ
ಬಲುಪರಾಕ್ರಮದವ ತೋಳುತಾನೆ ೩೫

ದೇವತಿಗಳ ಶರಿ ಬಿಡಿಸಿದ ಸ್ವಾಮಿ
ತಾಂ ಸಂಚರಿಸ್ಯಾನ ನಿನ್ನೊಳಗ
ಹಾವಿನ ಫಣಿಯ ಮೆಟ್ಟಿದ ತ್ರಿವಿಕ್ರಮ ತಾನು
ಮೂಡಿ ಬರುತಾನೆ ಬ್ಯಾಗೆ
ಪವಿತ್ರವುಳ್ಳ ಸತಿಯರಾ ವ್ರತನಳದವ
ನಗುತ ಬರುತಾನೆ ಈಗ
ರಾವುತನಾಗುವ ದೇವನೊಲಿದು
ಕೈಯಗೊಟ್ಟು ಬರುತಾನೆ ನಿನಗೆ ೩೬

ಮುದ್ದು ಮೋಹನ್ನದ ಸೊಬಗ ಬರುತಾನ
ಸಾಧೀಸಿ ಕೇಳೆ ಕಿವಿಗೊಟ್ಟು
ಶುದ್ಧಾತ್ಮರನುಕೂಲವೇದಾಂತರ ಮೂಲ
ಒದುಗುವ ತಾಂ ಇದರಿಟ್ಟು
ಸಿದ್ಧರ ಸುಶೀಲ ಸಾಧು ಜನರ ಪಾಲ
ಉದಿಯವಾಗುವ ದಯವಿಟ್ಟು
ಸದ್ಭಾವ ಬೋಕ್ತ ಸಾಧಿಸಿ ಬರುತಾನವ್ವ
ಸದ್ಭಕ್ತರಿಗೆ ಕೈಯಗೊಟ್ಟು ೩೭

ಹುಟ್ಟುವ ಶಿಶುವಿನ ಘಟಣಿಯ ಬಹಳ
ಗುಟ್ಟೊಡಿಯಲು ತಾಂ ಮುಟ್ಟನು ತಾಳ
ಕಟ್ಟುವ ದೈತ್ಯರ ದಿಟ್ಟ ಮಾ ಸಾಳ
ದೃಷ್ಟಿಸಿ ನೋಡುವ ನಿಷ್ಠರ ಮೇಳ ೩೮

ಶಿಶುವಿನ ಲಕ್ಷಣ ಬಲು ಅಗಾಧ
ಪೊಸ ಪರಿ ಮಾಟವು ಋಷಿಗಳ ಬೋಧ
ಹಸು ನೀರಡಿಸರವುದು ಶ್ರೀಪಾದ
ಬಸುರಿನ ಬಯಕಿದು ಬಲುಸುಸ್ವಾದ ೩೯

ಘಮಗುಡುತದೆ ಅನಾಹತದ ಧ್ವನಿಯು
ಕ್ರಮ ತಿಳಿವದು ಸುಯೋಗದ ಮನಿಯು

ಧಿಮಿಗುಡುತದ ಆನಂದದ ಖಣಿಯು
ಭ್ರಮ ಬಿಡಿಸುವ ಘನ ಚಿಂತಾಮಣಿಯು ೪೦

ಹುಟ್ಟಿ ಬರುತಾನಿವ ಶಿಷ್ಟರ ಮನಿಲಿವ
ದುಷ್ಟ ಮರ್ದನ ದೇವ ನಿಷ್ಠರಿಗೆ ಕಾವ
ಎಷ್ಟೆಂದ್ಹೇಳಲವ್ವ ಸೃಷ್ಟಿಗಧಿಕನಿವ
ಮುಟ್ಟಿ ಮುದ್ರಿಸುವ ದಿಟ್ಟೆದೆ ಕೂಸವ್ವ ೪೧

ವರ್ಣಿಸಲಾಗದು ಶಿಶುವಿನ ವಿವರಣ
ದಣಿಯಿತು ಕೊಂಡಾಡಿ ವೇದಸುಪುರಾಣ
ಖೂನ ತಿಳಿಯದು ತಾನು ಶಾಸ್ತ್ರಕ ಸಂಪೂರ್ಣ
ದ್ಯಾನ ಮೋನಕ ದೂರಗಮ್ಯ ಸ್ಥಾನ ೪೨

ಗುಟ್ಟು ತಿಳಿಯದ ವಸ್ತು ಹುಟ್ಟಿಬಾಹುದು ಕೇಳಿ
ಉಂಟಾಗುವದು ನಿನ್ನೊಳು ನೆನದಾಗಳೆ
ಘಟ್ಯಾಗಿ ಅನುಭವಿಸುತ ನೀನೆ ಬಾಳೆ
ದೃಷ್ಟಿಯೊಳೀಗುಟ್ಟು ಆರೀಗ್ಹೇಳೆ ೪೩

ಬಸುರು ಬಯಕೆಂಬುದು ಹೆಸರಿಸಲಳವಲ್ಲ
ಹಸನಾಗಿ ಅನುಭವಿಸುವ ಪುರುಷನೆ ಬಲ್ಲ
ವಾಸುದೇವನ ಕಾಣದಿಹ್ಯದೆ ಕಣ್ಣಲ್ಲ
ಆಸಿ ಅಳಿದವರೆ ತಾಂ ತಿಳಿದರೆಲ್ಲ ೪೪

ಹುಟ್ಟುವ ಲಕ್ಷಣ ಕೇಳೆ ನೀ ಕಿವಿಗೊಟ್ಟು
ಮುಟ್ಟಿ ಮುದ್ರಿಸಿಹ್ಯ ಗುರು ಕಟಾಕ್ಷವ ಕೊಟ್ಟು
ಇಟ್ಟುಕೊ ಈ ಮಾತು ಆರಿಗ್ಹೇಳೆ ಬಿಟ್ಟು
ಗಂಟು ಕಟ್ಟಿದ ಮಾತು ಹೇಳೆಬಿಟ್ಟು ೪೫

ಆಲಕ್ಷವೆಂಬ ಸುನಕ್ಷತ್ರದಲಿ ಪುಟ್ಟಿ
ಸುಲಕ್ಷಣದಲಿ ಬರುತಾನೆ ಜಗಜಟ್ಟಿ

ಲಯಲಕ್ಷವೆಂಬ ಸುತೊಟ್ಟಲವನು ಕಟ್ಟಿ
ನೆಲಯುಗೊಂಡಾಡಿಸಿ ಮನಮುಟ್ಟಿ ೪೬

ಜನ್ಮನಾಮೆಂಬುದು ಕೂಸಿನ ನಿರ್ಗುಣ
ಸಮಸ್ತರಿಗೆ ನಡವ ನಾಮವೆ ಸಗುಣ
ಬ್ರಹ್ಮಾನಂದದಿ ಲೋಲ್ಯಾಡುವ ಪರಿಪೂರ್ಣ
ಕಮಲನಯನ ಸ್ವಾಮಿ ರಮಾರಮಣ ೪೭

ಕೂಸು ಎಂದರ ತಾನು ಕೂಸು ಎನಲಾಗದು
ವಾಸವಾಗ್ಯಾಡುದು ವಿಶ್ವಲಿದು
ಹೆಸರನೇಕಪರಿಯಲಿ ಕರಿಸಿಕೊಂಡು
ಲೇಸು ಲೇಸಾಗಿ ತಾ ಆಡುವುದು ೪೮

ಹಿಂದ ಅಡಿದ ಆಟ ಮಂದದೆ ಆಡುದು
ಎಂದಿಗ್ಯದರ ಗುಟ್ಟು ತಿಳಿಯಗುಡುದು
ಒಂದಿಸಿದವರ ತನ್ನೊಳು ಕೂಡಿಕೊಂಬುದು
ಒಂದೆ ವಸ್ತುವಾಗಿ ತೋರುವುದು ೪೯

ಹೇಳುವೆ ಕೇಳೆ ಶಿಶುವಿನ ಆಟ
ತಿಳಿಯಲು ಜಗದೊಳು ಬಲು ಅವ್ವಾಟ
ನೆಲಿ ತಿಳಿದವರಿಗೆ ತೋರುದದು ನೀಟ
ನಲಿನಲಿದಾಡುವ ಸಲಲಿತದಾಟ ೫೦

ಒಮ್ಮೆ ನೀರನೆ ಚಲಿಪಿಲಿ ಮಾಡುವ
ಒಮ್ಮೆ ಬಾಗಿ ಜಗನೆಗುವ
ಒಮ್ಮೆ ಹಲ್ಲಿಲೆ ಬೇರನೆ ಅಗಳುವ
ಒಮ್ಮೆ ಬರುತಲಿ ಗುರುಗುಡುವ ೫೧

ಒಮ್ಮೆ ಬಲು ಗಿಡ್ಡಾಗಿ ತೋರುವ
ಒಮ್ಮೆ ಪರಾಕ್ರಮ ಹಿಡುವ

ಒಮ್ಮೆ ವನದೊಳಗಾಡುತ ಹೋಗುವ
ಒಮ್ಮೆ ಕಡವ ಬೆಣ್ಣೆಯ ಮೆಲುವ ೫೨

ಒಮ್ಮೆ ಬತ್ತಲೆ ತ್ರಿಪುರದಲಿ ಸುಳಿವ
ಒಮ್ಮೆ ಏರುವ ತಾ ಹಯವ
ಒಮ್ಮೊಮ್ಮಾಗುವ ತಾನೆವೆ ಸಗುಣವ
ಒಮ್ಮೊಮ್ಮಾಗುವ ನಿರ್ಗುಣವ ೫೩

ಬಗೆಬಗೆ ಆಟವು ಜಗದೊಳುದೋರುವ
ಝುಗಿಝುಗಿಸುತ ತಾನೆ ಹೊಳುವ
ಅಗಣಿತ ಗುಣದಲಿ ನಲಿನಲಿದಾಡುವ
ಯೋಗಿಜನರ ಮನದೊಳಗಿರುವ ೫೪

ಮಲೆತವರಿಗೆ ತಾ ನೆಲೆನಿಭದೋರುವ
ಸುಲಲಿತವಾಗ್ಯನುದಿನವಿರುವ
ಕುಲಕೋಟಿಯ ಜನ್ಮನೆ ಉದ್ಧರಿಸುವ
ಹಲವು ಪರಿಯ ಫಲವ ಕುಡುವ ೫೫

ಹೇಳೇನೆಂದರೆ ಬಹಳ ತಿಳಿಯದಾಟದ ಮೂಲ
ಕೇಳವ್ವ ನಿನಗಿದು ಅನುಕೂಲ
ಹೊಳವುತಿಹ್ಯದು ಸದಮಲ ಸುಖ ಕಲ್ಲೋಳ
ತಿಳಿದವರಿಗಿದೆ ಬಲು ಸುಫಲ ೫೬

ನಿಜಬೋಧವೆ ತಾನು ಕೊರವಂಜ್ಯಾದಳು ಪೂರ್ಣ
ಬೀಜವಾಕ್ಯವು ಪೇಳಿದಳು ಖೂನ
ಸುಜನರು ಒಪ್ಪಿಟ್ಟು ಕೊಂಬರನುದಿನ
ಮೂಜಗಕಿದೆ ಉದಿಯಮಾನ ೫೭

ಕೇಳಿದವರಿಗೆ ಸುಫಲಪ್ರಾಪ್ತವಾಗುದು
ಇಳಿಯೊಳನಂತಪುಣ್ಯವಿದು

ಫಳಿಸಿ ತಾಂ ಕುಡುವದು ಇಹ್ಯಪರಸುಖವಿದು
ನೆಲೆನಿಭವಾಗಿ ತೋರುವುದು ೫೮

ಬೋಧಿಸಿದ ವಾಕ್ಯ ಉದಯವಾಯಿತೆಂದು
ಬದಿಗೆ ಬಂದಳು ಬಲುಬ್ಯಾಗ
ಖದಖದ ನಗುತ ಸದಮಲ ಸುಖದಿಂದ
ಇದರಿಟ್ಟೆಂದಳು ಭಾವೆಈಗ
ಸಾಧಿಸಿ ಬಂದ ಕೊರವಂಜಿ ಮಾತಿಲಿ
ಕರತಳಾಮಲಕವಾಯಿತ್ಯನಗ
ಉದಮುದವಾದ ಊರ್ಜಿತದುಡುಗಿಯ
ಕೊಂಡು ಒದಗಿಕೊಟ್ಟಳು ಬಲುಬ್ಯಾಗ ೫೯

ರನ್ನದುಡಿಗಿಕೊಂಡು ಚಿನ್ನಾಗ್ಯುಡಿ ತುಂಬಿ
ಧನ್ಯವಾದಾನೆಂದ ಬ್ಯಾಗ
ಮುನ್ನಿನ ಪುಣ್ಯ ಉದಯವಾಗಿ ಎನಗಿನ್ನು
ಕೈಯ್ಯಕೊಟ್ಟಿತು ಬಲುಬ್ಯಾಗ
ಧನ್ಯಧನ್ಯವಿದು ಕಣ್ಣಾರ ಕಾಂಬುವ ಸನ್ಮತವಾದ ಸಯೋಗ
ಇನ್ನೊಬ್ಬರಿಗಿದು ತಿಳಿಯಬಲ್ಲುದೆ ತಾನು
ಏನೆಂದ್ಹೇಳಲಿನ್ನು ಈಗ ೬೦

ನೆನದಂತವಾಯಿತು ಮನದ ಬಯಕಿ
ನೋಡಿ ಘನಕಘನವು ಕೂಡಿದ್ಹಾಗ
ಜನವನ್ಹರುಷ ತುಂಬಿ ಅಣುರೇಣದೊಳಗೆಲ್ಲ
ಅನುಕೂಲವಾಯಿತು ಈಗ
ದಣಿವು ಹಿಂಗಿತು ಎನ್ನ ಕೊರವಂಜ್ಯಾದಳು ಪೂರ್ಣ
ಖೂನದೋರಿತು ಮನದಾಗ
ಮನಮೆಚ್ಚಿ ನಡಿಬೇಕು ಘನಮೆಚ್ಚಿ ನುಡಿಬೇಕು
ಅನಕಾದೋರದು ಸುಖಬ್ಯಾಗ ೬೧

ಸುಖಕಸುಖಾಯಿತು ಲೆಕ್ಕವಿಲ್ಲದೆ ನೋಡಿ
ಬೋಧಕ್ಕೆ ಬೋಧದ ಹಾಂಗ
ಮೂಕ ಸಖರಿ ತಿಂದು ಹೇಳಬಾರಧಾಂಗ
ಗುಕ್ಕಬೇಕಾಯಿತು ಈಗ
ತಖಾಂಗ ಹೇಳೇನೆಂದರೆ ಸೂಕ್ಷ್ಮವು ನೋಡಿ
ಉಕ್ಕಿಬರುತಾದ ಬ್ಯಾಗ
ದಕ್ಕಿದ ಮ್ಯಾಲಿನ್ನು ಸಿಕ್ಕಿದ ಸುವಸ್ತು ಒಕ್ಕಲಾಯಿತ್ಯನ್ನೊಳಗ ೬೨

ತಾರ್ಕಣ್ಯ ಬಂದು ಊರ್ಜಿತ ಕೊಡಬಂದಳು
ಕೊರವಂಜಿಗೆ ಭಾವೆ ಸುಪ್ರಸನ್ನಾದಳು
ತರಳ ಮಹಿಪತಿ ಮನದೊಳು ನಿಜವಾದಳು
ಪರಮಸದ್ವಸ್ತು ತಾ ಹಡೆದಳು ೬೩

ತ್ರಾಹಿ ತ್ರಾಹಿ ತ್ರಾಹಿಯಂದಾತ್ಮದೊಳು
ತ್ರಾಹಿ ತ್ರಾಹಿ ಬಾಹ್ಯಾಂತ್ರದೊಳು
ತ್ರಾಹಿ ತ್ರಾಹಿಯಂದು ಕಂಡು ಕಣ್ಣಿನೊಳು
ತ್ರಾಹಿತ್ರಾಹಿಯಂದೆ ಮನದೊಳು ೬೪

## ೩೪೧

ಬಾಟ ಪಕಡೊ ಸೀದಾ । ನ ಘಡೆ ತೇಥೆ ಬಾಧಾ
ಇದುವೆ ಗುರು ನಿಜಬೋಧ । ಸ್ವಸುಖ ಸಮ್ಮತವಾದಾ ಧ್ರುವ

ಬಂದಗೀ ಕರ್ತಾ ಕರಕೇ ಝೂಟಾ ।
ತಿಳಿಯದು ನಿಜ ಘನದಾಟಾ
ಮರ್ಮನ ಕಳತಾ ಕರಣೀ ಖೋಟಾ
ಕೇಳಿ ಶ್ರೀ ಗುರುವಿಗೆ ನೀಟಾ ೧

ಜಾನಭೂಜಕರ ಚಲನಾ ಭಾಯಿ
ಲಕ್ಷ ಲಾವುನೀ ಗುರುಪಾಯೀ

ಇದು ಎಲ್ಲರಿಗೆ ದೋರುದೇನಯ್ಯ
ಹೇ ಸಮಝೊ ವಿರಲಾ ಕೋಯೀ ೨

ತಿಳಿದು ನೋಡಿ ಶ್ರೀ ಗುರುಕೃಪೆಯಿಂದಾ
ಹುವಾ ಖುದಾಕಾ ಬಂದಾ
ಮಹಿಪತಿಗಾಯಿತು ಬಲು ಆನಂದಾ
ಹರೀ ಮ್ಹಣಾ ಗೋವಿಂದಾ ೩

## ೩೪೨

ಸಮಜೊ ಭಾಯಿ ಸಕುನಾ ಚಾರೊ ಖುದಾಕಾ
ತೆಲಗು ಕನ್ನಡ ತುರಕಾರೆ ವಂದೇ ಸುಖ ಧ್ರುವ

ದೇಖೋ ಭಾಯಿ ದಿಸತಾ ತುಮನಾ
ನಜರೋಮೆ ನಜರೋಮೆ
ತನ್ನೊಳಗದೆ ಅತಿಸೂಕ್ಷ್ಮವಾಗಿ ತಿಳಕೋಮೆ ತಿಳಕೋಮೆ
ಸದ್ಗುರು ವಚನ ಶೋಧುನಿ ಪಾಹಾ ಸಪ್ರೇಮ ಸಪ್ರೇಮ
ಚುಡುವಯ್ಯ ಉನ್ನದಿ ಪೂರ್ಣ ಘನ ಮಹಿಮೆ ೧

ಘ್ಯಾರೆ ವಳಖೂನಿ ಸಾರಾಸಾರಾ ನಿವಡೂನಿ ನಿವಡೂನಿ
ನಜರ ಹುಜರ ದೇಖೋ ಯಾರಾ ಹೈಗನೀ ಹೈಗನಿ
ಜನ್ಮಕ ಬಂದು ಮಾಡುವದೆ ಸಾಧನೀ ಸಾಧನೀ
ಮಂಚಿ ಉನ್ನದಿ ನಕಳೆ ಸದ್ಗುರು ಪಾವುನಿ ೨

ಎಲ್ಲಾ ಒಂದೇ ಮಾತಿನ ಸೊಗಸು ಸಿವನಾಟಾ ಸಿವನಾಟಾ
ಆಪಸಮೆ ಆಪ ಲಢನಾ ಸಬ ಝೂಟಾ ಸಬ ಝೂಟಾ
ಚೆಪ್ಪೆವ್ವೆಯ್ಯ ಎಂದರ ಹೇಳುವ ಗುರು ನೀತಾ ಗುರುನೀತಾ
ಆನಂದ ಆಹೆ ತುಜ ಮಹಿಪತಿ ಸುಖ ಮೋತಾ ೩

## ३४३

ಸಿದ್ಧ ನೋಡಿರೋ ಸಾಕ್ಷಾತ್ಕಾರವ ಧ್ರುವ

ಸಾಧುಕಾ ದಸ್ತ ಪಂಜ ಲೇಣಾ
ಸಾಧುಕೆ ಸಂಗ ಕರನಾ ಸಾಧ್ಯವಾಗದು
ಸದ್ಗುರು ಕರುಣಾನಿ ಧರಿಯೊ ಜಾಣಾ ೧

ಬಾಹ್ಯಾಂತ್ರಿ ಜೋ ಪಾಹೆ ಗೋವಿಂದಾ
ಇಹಪರ ಅವಗಾನಂದಾ ದೇಹಭ್ರಾಂತಿಗೆ
ಸಿಲಕದೆಂದಾ ವಹೀ ಖುದಾಕಾ ಬಂದಾ ೨

ಪಾಕದಿಲ್ಲಾ ಸುಜೀರ ಕರಣಾ
ಯಕೀನ ಸಾಬೀತ ರಾಹಾಣಾ
ಟಾಕ ತ್ಯಾಭವ ಮೀ ತೂ ಪಣಾ ಐಕ್ಯವಿದು ಭೂಷಣಾ ३

ನಿಸದಿನ ಕರಿಮಕ ಹೊಯಾರಾ
ವಾಸುದೇವ ಸಾಹಕಾರಾ ವಿಶ್ವವ್ಯಾಪಕಾ
ಮ್ಹಣುನಿ ಸ್ಮರಾ ಲೇಸು ಅವನ ಸಂಸಾರಾ ४

ಮೂವಿಧ ಪರಿಯಲಿ ಹೇಳಿದ ಭಾಷಾ
ಮಹಾಗುರುವಿನ ಉಪದೇಶಾ ಮಹಿಪತಿಗಾಯಿತು
ಅತಿ ಸಂತೋಷಾ ಜೀವಕ ಭವ ಭಯ ನಾಶಾ ೫

ಆಯ = ರಹಸ್ಯ
ಆಯತ = ಅಣಿಗೊಳಿಸು
ಆಲ್ಪರಿ = ಅಂಗಲಾಚು, ಬೇಡಿಕೊಳ್ಳು
ಆಲೇಶ = ಸಂಶಯ
ಆವ್ಹಾಟ = ಆರ್ಭಟ

ಇ

ಇಗಡತನ = ವಿಗಡತನ
ಇಮ್ಮನ = ಎರಡುಮನಸ್ಸು, ದ್ವಂದ್ವ
ಇಲ್ಲೆವೇ = ಇಲ್ಲಿಯೇ
ಇಹ್ಯ = ಇರುವ
ಇಂಬು = ಆಶ್ರಯ

ಈ

ಈಡ್ಯಾಡಿ = ಚೆಲ್ಲಾಡಿ, ಬಿಸುಡಿ
ಈವ = ಕೊಡುವ
ಈವ್ಹಾ = ಇರುವ
ಈವ್ಹಾಂಗ = ಕೊಡುವಹಾಗೆ
ಈಸಿ = ಈಜಿ
ಈಹ = ಇರುವ

ಉ

ಉಗಮ = ಮೂಲ
ಉಚ್ಛಿಷ್ಠ = ತಿಂದು ಮಿಕ್ಕಿದ್ದು
ಉದ್ಯೋಪ = ಉದ್ಯಾಪನೆ, ಪವಿತ್ರಕಾರ್ಯದ ಮುಕ್ತಾಯ ಸಮಾರಂಭ
ಉನ್ಮನಿ = ಊರ್ಧ್ವಮನಸ್ಥಿತಿ, ಸಮಾಧಿ ಸ್ಥಿತಿ, ದೈವತ್ವದೊಂದಿಗೆ ಕೂಡಿದ ಮನಸ್ಥಿತಿ
ಉಡಿಗಿ = ಉಡುಗೆ, ಬಟ್ಟೆ
ಉಮ್ಮಸ = ಹುಮ್ಮಸ್ಸು
ಉಮ್ಮು = ಉಂಣು, ತಿನ್ನು
ಉರಳಿ = ಉಂಡೆ
ಉಲವು = ಉಲುಹು ಶಬ್ದಮಾಡು
ಉಳ್ಳ = ಹೊಂದಿದ,. ಉಳಿದ
ಉಂಗುಟ = ಉಂಗುಷ್ಠ, ಹೆಬ್ಬೆರಳು

ಎ

ಎತ್ಯಾಡಿಸು = ಎತ್ತಿ ಆಡಿಸು
ಎದುರಿಡು = ಎದುರಾಗು, ಸಮ್ಮುಖವಾಗು
ಎಡಿ = ನೈವೇದ್ಯ
ಎಡೆ = ಅವಕಾಶ
ಎಣಿಕೆ = ಲೆಕ್ಕಾಚಾರ
ಎರಕ = ಸುರಿ, ತುಂಬು
ಎರಗು = ನಮಸ್ಕರಿಸು
ಎರವಿನಮನೆ = ಬಾಡಿಗೆ ಮನೆ, ಶರೀರ
ಎವಿ = ರೆಪ್ಪೆ
ಎಸು = ಹೊಡೆ

ಏ

ಏಸು = ಎಷ್ಟು

ಒ

ಒಟ್ಟು = ರಾಶಿಮಾಡು, ಕೂಡಿಸು
ಒಪ್ಪಿಲಿ = ಒಪ್ಪಿಗೆಯಿಂದ
ಒಲ್ಲಭ = ವಲ್ಲಭ, ಒಡೆಯ
ಒಳ್ಯಾವರ = ಒಳ್ಳೇಯವರ

ಕ

ಕಕ್ಕುಲಾತಿ = ಕಳವಳ, ಕರುಣಿ, ಅಂತಃಕರಣ
ಕನಕಗರಿಸು = ಕನವರಿಸು
ಕಡಗಂಡು = ಅನುಭವಿಸಿ, ಗೊತ್ತು ಮಾಡಿಕೊಂಡು
ಕಡವು = ಮಥಿಸು ಕಡೆಯುವದು
ಕರಿಕೆ = ಗರಿಕೆ
ಕರಣೆ = ಕರಣಿ, ಗಡ್ಡೆ
ಕಲ್ಲೋಳ = ಕಲ್ಲೋಳ, ಮಹಾತರಂಗ
ಕಳಲು = ಮಜ್ಜಿಗೆ
ಕಳೆ = ಕಾಂತಿ
ಕಳೇವರ = ಶರೀರ
ಕಳೆಮಳೆಗಳು = ಕಾಂತಿವೃಷ್ಟಿ
ಕಂಟಕ = ಮುಳ್ಳು
ಕಂಜ = ಕಮಲ
ಕಾಕಬುದ್ಧಿ = ನೀಚಬುದ್ಧಿ
ಕಾಣಿಕೆ = ಕಾಣಿಕೆ, ನೋಟ
ಕಾಜು = ಗಾಜು
ಕಾಮ್ಯ = ಇಷ್ಟಾರ್ಥ
ಕಾವ = ಕಾಯುವ, ಕಾಪಾಡುವ
ಕಾವನಯ್ಯ = ಮನ್ಮಥನ ತಂದೆ, ಕೃಷ್ಣ
ಕಾಳವ್ಯಾಳ್ಯ = ಕೆಟ್ಟಕಾಲ ಕಾಲವೇಳೆ
ಕಾಳೋ = ಕತ್ತಲೆ
ಕ್ಯಾದಗಿ = ಕೇದಗೆ
ಕೀಲ = ರಹಸ್ಯ
ಕೀಲು = ಮರ್ಮ ಗುಟ್ಟು
ಕುಕ್ಕಡಿ = ಉಂಡೆ
ಕುಟಿಲ = ಕುಟಿಲ
ಕುಡಿ = ತುದಿ
ಕುರುವು = ಕುರುಹು, ಚಿಹ್ನ, ಗುರುತು
ಕುಸಿಕಿರಿದು = ಸಣ್ಣದಾಗಿಬಡೆದು
ಕುಸುಕು = ಮೆತ್ತಗೆ ಕುಕ್ಕು
ಕೂಪ = ಬಾವಿ
ಕೆರಿ = ಕೆರೆ, ಕೊಳ
ಕೈಗೂಡು = ಸಫಲವಾಗು
ಕೈವಲ್ಯ = ಮೋಕ್ಷ
ಕೊಯಿಲಿ = ಕುಯಿಲು, ಕುಯ್ಯಲು ಸಿದ್ಧವಾಗಿರುವ ಬೆಳೆ
ಕೋಟಲಿ = ತೊಂದರೆ ಕಷ್ಟ
ಕೋಳ = ಸಂಕೋಲೆ

**ಖ**

ಖಣಿ = ಗಣಿ
ಖರೆ = ನಿಜ
ಖುಲ್ಲ = ನೀಚ
ಖೂನ = ಗುರುತು
ಖೋಡಿ = ಕೆಟ್ಟವನು

**ಗ**

ಗಡಕ = ತೊಡಗಿ, ಸೇರಿ,
ಸರಕನೆ = ಕೂಡಲೆ ಗಕ್ಕನೆ
ಗ್ರಾಸ = ಆಹಾರ
ಗುಕ್ಕಿ = ಒಳಉಸುರಿನಲ್ಲಿ ಮಾತುನುಂಗಿ
ಗುರ್ತು = ಗುರುತು
ಗುದ್ದು = ಬಿಲ
ಗುಟ್ಟಿಲೆ = ಗುಟ್ಟಾಗಿ, ರಹಸ್ಯವಾಗಿ
ಗುಪಿತ = ಗುಪ್ತ
ಗುಂಭ = ರಹಸ್ಯ, ಗಹನ
ಗೊಂತು = ಗೊತ್ತು
ಗೋವಿಸು = ಅಕಳನ್ನು ಮೇಯಿಸು

**ಘ**

ಘಸಣಿ = ಚಿಂತೆ
ಘಳಿಗಿ = ತೀಡು, ಮಡಿಕೆ
ಘೀಳಿಸು = ಮೊರೆತ

**ಚ**

ಚಪ್ಪಗೊಡಲಿ = ಚೂಪಾದ ಕೊಡಲಿ
ಚಪ್ಪರಿದೆ = ಸವಿದೆ, ಚಪ್ಪರಿಸಿದೆ
ಚಪ್ಪರಿಸು = ಸವಿಮಾಡಿಕೊಳ್ಳು
ಚಲ್ಲೇದ = ಚೆಲ್ಲಿರುವುದು
ಚಾಲ್ವರಿ = ಅಂಗಲಾಚು
ಚಿದ್ಘನ = ಪರಮಾತ್ಮ, ಪರವಸ್ತು (ಚಿತ್+ಘನ)
ಚೇತಿಸಿ = ಚಿಂತಿಸಿ
ಚೋಳಿ = ಹೋಳಿ
ಚೌರ = ಚಾಮರ

**ಜ**

ಜಗಜೇಟಿ = ಜಗಜಟ್ಟಿ, ಜಗತ್ತನ್ನು ಗೆದ್ದವ
ಜತನ = ಜೋಪಾನ, ಎಚ್ಚರಿಕೆ
ಜಡಿದು = ಗದರಿಸು
ಜಂತ್ರ = ಯಂತ್ರ
ಜಾಗಿಸು = ಎಚ್ಚರಿಸು
ಜಾಡು = ದಾರಿ
ಜಾಲ = ಬಲೆ
ಜೀಕಳಿ = ಪಿಚಕಾರಿ, ಜೀರ್ಕೊಳವಿ
ಜೋಹರ = ಜವಾಹಿರ ಮುತ್ತುರತ್ನಗಳ ವ್ಯಾಪಾರಿ

ಝ

ಝರಿ = ಶಿಲೆ
ಝಲ್ಲಿಸಿ = ಸೋಸಿ

ಟ

ಟೊಕಿ = ತೂಕ

ಠ

ಠವಿಸು = ಹೊಳೆಯಿಸು
ಠಾವು = ಸ್ಥಳ, ಗೊತ್ತು

ಡ

ಡಿಂಭ = ದೇಹ
ಡೊಂಕಿ = ವಕ್ರವಾದ

ಢ

ಢಾಳಿಸು = ಬೀಸು

ತ

ತರಣೋಪಾಯ =ಪರಿಹಾರಮಾರ್ಗ
ತಳಿಗೆ = ಹರಿವಾಣ, ತಟ್ಟೆ
ತಳ್ಳಿ = ತಳಿ, ವಂಶ
ತ್ಯರ = ತರ
ತಂತು = ಸೂತ್ರ, ನೂಲು ಎಳೆ, ದಾರ
ತಾಮಸ = ಜಡ
ತಾರಕ = ನಿವಾರಕ
ತಾಹರು = ತರುವರು
ತ್ರಾಹಿ = ರಕ್ಷಿಸು
ತಿಗಡತನ = ತಿಗುಳುತನ, ವಿಗಡತನ
ತಿರಹು = ತಿರುವು
ತುಚ್ಛ = ನೀಚ
ತುತ್ತಾಯಿತ್ತ = ತುತ್ತುಮಾಡಿ, ಅಂತಃಕರುಣದಿಂದ
ತುಟ್ಟಿಲೆ = ತುಟಿಯಿಂದ
ತುಡುಗ = ಕಳ್ಳ
ತುಡುಕು = ಹಿಡಿ
ತೆಕ್ಕಿಸು = ಅಪ್ಪಿಕೊಳ್ಳು
ತೆರವು = ಖಾಲಿಮಾಡು, ಬಿಟ್ಟುಕೊಡು
ತೆರ್ವು = ತೆರೆಯುವದು
ತೇಕಿ = ಆಯಾಸಪಡು, ಜೋರಾಗಿ. ಉಸಿರಾಡಿಸು
ತೊಡಕು = ಕಗ್ಗಂಟು

ದ

ದಕ್ಕು = ಲಭಿಸು
ದತ್ತ = ಲಭ್ಯ
ದಾಯ = ಪಾಲು
ದಾವನು = ಯಾವನು
ದ್ಯಾವರು = ದೇವರು
ದುಗುಡಿ = ದು:ಖ
ದುರಿತ = ಪಾಪ, ಕಷ್ಟ, ತೊಂದರೆ
ದೇಶಿಕ = ಆಚಾರ್ಯ
ದೋರುದು = ತೋರುವುದು

## ಧ

ಧ್ಯಾತ = ಧ್ಯಾನ
ಧ್ಯಾಸ = ಧ್ಯಾನ
ಧೂತ = ನಿವಾರಣೆ
ಧ್ಯೇಯ = ಗುರಿ
ಧೋಕಾ = ಆಘಾತ

## ನ

ನಕ್ರ = ಮೊಸಳೆ
ನರ್ಕ = ನರಕ
ನಗ = ಬೆಟ್ಟ
ನಾದಿ = ತಿಕ್ಕಿ
ನಾಟಿ = ನಟ್ಟು, ಅಚ್ಚೊತ್ತಿ
ನಿಗಮ = ವೇದ
ನಿತ್ಯಭಿನವ = ನಿತ್ಯನೂತನ
ನಿರ್ತ = ನಿತ್ಯ
ನಿದರುಶನ = ನಿದರ್ಶನ
ನಿಟಿಲ = ಹಣೆ
ನಿಬ್ಬಣ = ಮೆರವಣಿಗೆ
ನಿರ್ಭರ = ಅತಿಶಯ
ನಿಮಿತ್ಯ = ನಿಮಿತ್ತ, ಕಾರಣ
ನಿರ್ವಾಣ = ಮೋಕ್ಷ
ನಿವಾಂತ = ಶಾಂತ
ನಿರ್ವಾಣಿ = ಮುಕ್ತಿದಾಯಕ
ನಿಶ್ಯಾನಿ = ಧ್ವಜ, ಬಾವುಟ
ನೀಗಿ = ಕಳೆದು
ನೀಟ = ನೇರ
ನುತ = ಸ್ತುತಿಸಲ್ಪಡುವ
ನುಲ್ಕಿ = ದಾರ
ನೆಗಹು = ಎತ್ತು
ನೆಚ್ಚು = ನಂಬು
ನೆತ್ತಿ = ತಲೆ
ನೆರಿ = ನೆರೆ ಪಕ್ಕದ
ನೆಲೆ = ಮೂಲ
ನೆಲೆನಿಭ = ಆಧಾರ
ನೆವನ = ನೆಪ
ನೇತಿ–ನೇತಿ = ಇದಲ್ಲ, ಇದಲ್ಲ

## ಪ

ಪಟ = ಬಟ್ಟೆ
ಪಡಗ = ಪಾತ್ರೆ
ಪಡಿಹಾರ = ದ್ವಾರಪಾಲಕ
ಪಯಸ್ವಿನಿ = ಹಾಲು
ಪರಮಾನ್ನ = ಪಾಯಸ
ಪರಾಮರಿಸಿ = ವಿಚಾರಿಸಿ
ಪರಿಯಾಯ = ಬೇರೆಯಾಗು, ಬದಲಾಗು
ಪಸರಿಸ್ಯದ = ಪಸರಿಸಿದೆ
ಪಂಜ = ಪ್ರಾಣಿಗಳ ಉಗುರುಸಹಿತ ಅಂಗಾಲು ಅಂಗೈ
ಪ್ರಣಮ್ಯ = ಪ್ರಣವ
ಪ್ರಣವ = ಓಂಕಾರ ಮಂತ್ರ
ಪ್ರಸ್ತ = ಹಬ್ಬ
ಪಾಮರ = ಶ್ರೀಸಾಮಾನ್ಯ
ಪಾರ = ತೀರ
ಪಾರಣೆ = ಉಪವಾಸದ ಅನಂತರದ ಊಟ
ಪಾರಾವಾರ = ಮೇರೆ, ಸಮುದ್ರ

ಪಾವನ್ನ = ಪವಿತ್ರ
ಪ್ರಾಲಬ್ಧ = ಪ್ರಾರಬ್ಧ
ಪ್ರಾಂಜಲ = ನಿರ್ಮಲ ಸ್ವಚ್ಛ
ಪೂರಿಸು = ನೆರವೇರಿಸು
ಪೋಕು = ನೀಚ ದುಷ್ಟ

## ಫ

ಫಕ್ಕಸಾರಿ = ಸುಮ್ಮನೆ, ಬೆಲೆಯಿಲ್ಲದೆ, ಪುಗಸೆಟ್ಟೆ, ಫುಕ್ಕಸಾಟೆ
ಫಜ್ಜಿಗೆ = ಫಾಜೆಗೆ, ಗುರಿವಟ್ಟುವ ಸ್ಥಳ
ಫಣಿ = ಹೆಡೆ
ಫುಗುಡಿ = ಹೆಣ್ಣುಮಕ್ಕಳ ಒಂದು ಆಟ

## ಬ

ಬಡಿವಾರ = ಬಡಾಯಿ, ಡೌಲು
ಬಧಿರತ್ವ = ಕಿವುಡತನ
ಬರುದೆ = ಬರುವದೆ
ಬಲಿ = ಬಲೆ
ಬಲ್ಲಿದ = ಬಲಿಷ್ಠ, ಬಲ್ಲವನು
ಬವಣೆ = ತೊಂದರೆ
ಬಂಟ = ಸೇವಕ
ಬಲುವ = ಬಲಿಯುವ ಸ್ಥಿರವಾದ
ಬಾಯಾರ = ಬಾಯ್ತುಂಬ
ಬಾವ್ಹಾಂಗ = ಬರುತ್ತಿರುವಂತೆ
ಬಾಹ = ಬರುವವನು
ಬಾಹ್ಯಾಂತ್ರ = ಹೊರಒಳಗೆ
ಬ್ಯಾಗ = ಬೇಗ
ಬಿದ್ದಿಹ್ಯ = ಬಿದ್ದಿರುವ
ಬಿನುಗು = ಕ್ಷುದ್ರ (ಚಿಲ್ಲರೆ)
ಬೂಟಕ = ಡಂಭ, ಬೂಟಾಡಿಕೆ
ಬೆಚ್ಚ = ಪಕ್ಷಿಗಳ ಬೆದರಿಕೆಗೆ ಕಟ್ಟುವ ಸಾಧನ
ಬೆಜ್ಜರ = ಅಂಜಿಕೆ
ಬೆರ್ತು = ಬೆರೆತು
ಬೇಹಿನವರು = ಗುಪ್ತಚಾರರು
ಬೈಗು = ಸಂಜೆ
ಬೊಮ್ಮ = ಬ್ರಹ್ಮ

## ಭ

ಭಗತ = ಭಕ್ತ
ಭವ = ಜನ್ಮ
ಭವತಳಿ = ಜನ್ಮಾಂತರ ಸಂಬಂಧ
ಭವನಿದ್ರೆ = ಜನ್ಮವೆಂಬ ನಿದ್ದೆ
ಭವಾರ್ಣವ = ಜನ್ಮ ಸಮುದ್ರ
ಭಸಿಗೆ = ಫಪಿಗೆ, ಮೋಸ
ಭಾಸಿ = ಭಾಷೆ, ವಾಗ್ದಾನ, ಪ್ರತಿಜ್ಞೆ
ಭಾಸು = ಹೊಳೆ
ಭಿಡಿ–ಭಿಡೆ = ದಾಕ್ಷಿಣ್ಯ
ಭುಲ್ಲೈಸು = ಉಪಾಯದಿಂದ ಒಲಿಸು
ಭ್ರೂಮಧ್ಯ = ಹುಬ್ಬುಗಳ ನಡುವೆ
ಭೋಕ್ತ = ಸವಿದವನು, ಅನುಭವಿ

## ಮ

ಮಚ್ಚರ = ಮತ್ಸರ, ಅಸೂಯೆ
ಮಟಿಸು = ಮಥಿಸು
ಮದೂಣಿಗ = ಮದುವಣಿಗ
ಮಧುಪ = ದುಂಬಿ
ಮನ್ನೆವಾರ = ದಳಪತಿ
ಮರ್ಹವು = ಮರೆವು
ಮರೆಯುಗು = ಮೊರೆಹೊಗು, ಶರಣಾಗು
ಮಲ್ಕು/ಮಲಕು = ಗಂಟು, ತೊಡಕು
ಮರ್ವ = ಮರೆವು
ಮರ್ವು = ಮರೆವು
ಮಂಚಿಕೆ = ಅಟ್ಟಣಿ
ಮಾ = ಸತ್ಯಸೂಚಕ ಉದ್ಗಾರ
ಮಂತು = ಕಡೆಗೋಲು
ಮಾನ್ಮಣೆ = ಮಾನ, ಮನ್ನಣೆ
ಮ್ಯಾಳ = ಮೇಳ, ಸಮೂಹ
ಮೃಷ್ಟಾನ್ನ = ಸವಿಯಾದ ಊಟ
ಮುಕ್ಕು = ಭಂಗ
ಮುಣುಗು = ಮುಳುಗು
ಮುರುಹು = ಪಶುಗಳಿಗೆ ನೀಡುವ ನುಚ್ಚಿನ ಆಹಾರ
ಮುಂಬಿಗೆ = ಮುಂಚಿಗೆ, ಮೊದಲಿಗೆ
ಮೊಳೆ = ಮೊಳಕೆ
ಮೋನ = ಮೌನ

## ಯ

ಯುಗತಿ = ಯುಕ್ತಿ

## ರ

ರಗಡಿಸು = ರಗಳೆಮಾಡು
ರಚ್ಚಿಗೇಳು = ಸಿಕ್ಕಾಪಟ್ಟೆ ಸಿಟ್ಟಿಗೇಳು
ರಮ್ಮಿಸು = ರಮಿಸು, ಸಂತೋಷಪಡಿಸು
ರಂಜಕ = ಮನೋಹರ
ರಾವುತ = ಕುದುರೆ ಸವಾರ
ರಿದ್ಧಿ = ವೃದ್ಧಿ

## ಲ

ಲಬ್ಧಾಲಬ್ಧಿ = ಲಾಭಾಲಾಭ
ಲಂಪಟ = ವಿಷಯಾಸಕ್ತ
ಲುಬ್ಧಿಸು = ಅತ್ಯಾಸೆ
ಲೋಚಿ = ನಿಯಂತ್ರಣವಿಲ್ಲದ
ಲೋಲ್ಯಾಡು = ಓಲಾಡು, ಮೆರೆ

## ವ

ವರ್ಮ = ಮರ್ಮ, ರಹಸ್ಯ
ವಸ್ತ್ರಾಮೋಲಿಕಾ= ಅಮೌಲ್ಯವಸ್ತ್ರ
ವೃಷ = ಗೂಳಿ, ಎತ್ತು
ವ್ಯಚ್ಚ = ವೆಚ್ಚ, ಖರ್ಚು
ವಾಲ್ಯಾಡು = ಓಲಾಡು
ವಾಲ್ಗೈಸು = ಓಲೈಸು, ಸೇವಿಸು
ವಾಸನೆ = ಇಚ್ಛೆ
ವ್ಯಾಳ್ಯ = ವೇಳೆ, ಸಮಯ
ವಿಕಳಿತ = ಕಳೆಗುಂದು, ಕಳವಳ

ವಿತ್ತ = ಧನ ಸಂಪತ್ತು
ವಿದಾರಣ = ಸಂಹಾರ
ವಿಟ್ಟಿಹ್ಯ = ಇಟ್ಟಿಹ, ಇಟ್ಟಿದ್ದ
ವಿಡಿ = ಪಿಡಿ, ಹಿಡಿ
ವಿರುಕಿತಿ = ವಿರಕ್ತಿ
ವೈವ = ವೈಯುವ, ತೆಗೆದುಕೊಂಡು ಹೋಗುವ

## ಷ

ಷಂಢ = ನಪುಂಸಕ

## ಸ

ಸರ್ಕನೆ = ಸರಕ್ಕನೆ, ಬೇಗನೆ
ಸಖರಿ = ಸಕ್ಕರೆ
ಸಥೆ = ಸಲುಗೆ
ಸದ್ಗೈಸು = ಒಳಿತನ್ನು ಮಾಡುವದು
ಸದೋದಿತ = ಸದಾ ಉದಯಿಸಿದ
ಸನ್ಮತ = ಒಪ್ಪಿಗೆ
ಸಬಕಾರ = ಸೋಪು
ಸಂಕಾರ = ಝುಂಕಾರ
ಸಂಚಿತ = ಸಂಗ್ರಹಿತ, ಗಳಿಸಿದ
ಸಂದಣಿ = ಸಮೂಹ
ಸಂದಲಿ = ಸಂಧಿಯಲಿ
ಸಂದುಕ = ಪೆಟ್ಟಿಗೆ
ಸಂಧ್ಯಾನ = ಸಂಧ್ಯಾವಂದನೆ
ಸಂದಹರಿವ = ಗಂಟನ್ನು ಬಿಡಿಸುವ
ಸಂತ್ರಾಧಾರಿ = ಸಂತತಧಾರೆ
ಸಂಭ್ರಮ = ಆನಂದ
ಸ್ವಕೀಲ = ತನ್ನಗುಟ್ಟು, ಆತ್ಮದ ಅರಿವು
ಸ್ವಸ್ತ = ನೆಮ್ಮದಿ, ಶಾಂತಿ
ಸಾಜ = ಸಹಜ
ಸಾರ್ಥ = ಸಫಲ
ಸಾಭ್ಯಸ್ತ = ಉಚಿತ ರೀತಿ, ಹೊಂದಿಕೆ
ಸಾಮಜ = ಆನೆ
ಸಾರಾಯ = ಸಾರವತ್ತ, ರಸವತ್ತ
ಸಾಯಾಸ = ಆಯಾಸ
ಸಾರಣಿ = ಶುದ್ಧಮಾಡು
ಸಾಹ್ಯ = ಸಹಾಯ
ಸಾಂದ್ರ = ದಟ್ಟ
ಸ್ವಾದ = ರುಚಿ
ಸಾರ‍್ಯಲ್ಲ = ಸಮೀಪದ್ದಲ್ಲ
ಸಿರ = ತಲೆ
ಸುಆಗರ = ಒಳ್ಳೆಯ ಮನೆ
ಸಿಂಪು = ಚಿಪ್ಪು
ಸುಖಕಲ್ಲೋಳ = ಸುಖದ ಅಲೆಗಳ ಹೊಡೆತ
ಸುಗಡಿ = ಹೆಣ್ತನವಿಲ್ಲದ ಸ್ತ್ರೀ
ಸುತ್ತಾನೆ = ಸುತ್ತ+ಹಾನೆ =ಸುತ್ತಲೂ ಇದ್ದಾನೆ
ಸೂಟಿ = ಉಪಾಯ
ಸೂತ್ರಾಂತ = ಸೂತ್ರದಲಿ ಅಡಗಿಸಿದ
ಸುಪ್ರಸ್ತ = ಹಬ್ಬದ ಭೋಜನ
ಸುಳವು = ಸುಳಿವು, ಚಿಹ್ನ, ಗುರುತು

ಸುಂದ್ರ = ಸುಂದರ
ಸುರಕಿ = ಸುರಕೋ
ಸವಿಮಾಡಿಕೊ
ಸೂರ್‍ಯಾಡಿ = ಸೂರೆಮಾಡಿ
ಸೊಲಿಗೆ = ಧಾನ್ಯಅಳೆಯುವ
ಒಂದು ಮಾನ
ಸೆರಗು = ಅಂಚು
ಸೋಜಿಗ = ಆಶ್ಚರ್ಯ
ಸೋಗು = ಸೋಂಗು
ಬೂಟಾಟಿಕೆ
ಸೋಮಾರ್ಕ = ಚಂದ್ರ-ಸೂರ್ಯ
ಸೋಶಿಲೆ = ಶೋಧಿಸಿ
ಸೋಸ್ಥ = ಸ್ವಸ್ಥ
ಸೋಸು = ಶೋಧಿಸು
ಸೋಹ್ಯ = ಸೋಹಂ
ಸೋಂಕಿ = ತಟ್ಟಿ

## ಹ

ಹಗರಣ = ಪ್ರಕರಣ
ಹಚ್ಚಿ = ತೊಡಗಿ
ಹತ್ತಿಲೆ = ಹತ್ತಿರದ
ಹದನದಿ = ಚೆನ್ನಾಗಿ
ಹಮ್ಮು = ಅಹಂಕಾರ
ಹರಿ ಹರಿಸು = ನಿವಾರಿಸು
ಹರಿಗಡೆ = ನಿಲ್ಲು ಹರಿಕೆಡವು
ಹರುವ = ವಿಸ್ತಾರ ಹರಹ
ಹಡಕಿ = ಕೆಟ್ಟ, ಹೊಲಸು
ಹವಣಿಸು = ಪ್ರಯತ್ನಿಸು
ಹಸಕ = ಪಕ್ವವಲ್ಲದ
ಹಸಗೆಡು = ಹದಗೆಡು
ಹಳ = ಛೀ ತಿರಸ್ಕಾರವಾಚಕ
ಹಂಡೀಗತನ = ದುಂಡಾವರ್ತಿ
ಹಾಕ್ಯಾಡು = ವಾದಮಾಡು
ಹಾನೆ = ಇದ್ದಾನೆ
ಹ್ಯಾವ = ಅಹಂ
ಹುಯಿಲು = ರಚ್ಚು, ರಗಳೆ
ಹುಸಿ = ಸುಳ್ಳು
ಹೆಳವ = ಕುಂಟ
ಹೇತು = ಕಾರಣ ಉದ್ದೇಶ
ಹೇಳುದಲ್ಲ = ಹೇಳುವುದಲ್ಲ
ಹೇಸಿಕೆ = ಜುಗುಪ್ಸೆ
ಹೊತ್ತಿಗೆ = ಪುಸ್ತಕ
ಹೊಡಿ = ಹೊಡೆ
ಹೊಯಿಲು = ಕೂಗು, ಮೊರೆ
ಹೊಲಬು = ದಾರಿ
ಹೊರಸು = ಮಂಚ
ಹೊರಿ = ಹೊರೆ, ರಕ್ಷಿಸು
ಹೊರಿಯ = ಸುಮ್ಮನೆ
ಹೊರೆವ = ರಕ್ಷಿಸುವ
ಹೊಳಪು = ಕಾಂತಿ
ಹೊಂಡಹುಳ್ಳಿ = ಹೊಡಮರಳಿ,
ಹಿಂತಿರುಗಿ
ಹೋಕು = ಮೋಸ
ಹೋಗುದೇನ = ಹೋಗುವದೇನು ?
(ಏನೂ
ಹೋಗುವುದಿಲ್ಲ)
ಹೋತು = ಹೋಯಿತು,
ವ್ಯರ್ಥ

# ಅನುಬಂಧ-೨

## ಸಂಖ್ಯಾ ವಿಶಿಷ್ಟ ಪದಗಳು

| | | |
|---|---|---|
| ಏಕಾಕ್ಷರ | = | ಓಂ ಎಂಬ ಬ್ರಹ್ಮ. |
| ಏಕೋಮಯ | = | ಒಬ್ಬನೇ ದೇವರು. |
| ತಾಪತ್ರಯಗಳು | = | ಆದಿಭೌತಿಕ, ಆದಿದೈವಿಕ, ಆದಿಆತ್ಮಿಕ. |
| ತ್ರಿಕರಣ ಶುದ್ಧಿ | = | ಕಾಯಾ, ವಾಚಾ, ಮನಸಾ. |
| ತ್ರಿಕಾಲ | = | ಪೂರ್ವಾಹ್ನ, ಮಧ್ಯಾಹ್ನ, ಅಪರಾಹ್ನ. |
| ತ್ರಿಗುಣ | = | ಸತ್ವ, ರಜ, ತಮ. |
| ತ್ರಿನಾಡಿ | = | ಇಡಾ, ಪಿಂಗಳ, ಸುಷುಮ್ನಾ. |
| ತ್ರಿಪುರ | = | ತ್ರಿಕೂಟ, ಶ್ರೀಪಾಟ, ಗೋಲ್ಲಾಟ. |
| ತ್ರಿಮೂರ್ತಿ | = | ಹರಿ, ಹರ, ಬ್ರಹ್ಮ |
| ತ್ರಿವಿಧ ಬಲೆ | = | ಹೆಣ್ಣು, ಹೊನ್ನು, ಮಣ್ಣು |
| ತ್ರಿಲೋಕ ತ್ರಿಭುವನ | = | ಸ್ವರ್ಗ, ಮರ್ತ್ಯ, ಪಾತಾಳ. |
| ನಾಲ್ಕು ಅವಸ್ಥೆಗಳು | = | ೧) ಜಾಗೃತಿ, ಸ್ವಪ್ನ, ಸುಷುಪ್ತಿ,ತುರೀಯ (ಯೌಗಿಕ).<br>೨) ಬಾಲ್ಯ, ಕೌಮಾರ, ಯೌವನ, ವಾರ್ಧಕ್ಯ. |
| ನಾಲ್ಕು ಮುಕ್ತಿಗಳು | = | ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ, ಸಾಯುಜ್ಯ. |
| ನಾಲ್ಕು ವೇದಗಳು | = | ಋಗ್, ಯಜುರ್, ಸಾಮ, ಅಥರ್ವಣ. |
| ಪಂಚ ಅಗ್ನಿಗಳು | = | ದಕ್ಷಿಣ, ಗಾರ್ಹಪತ್ಯ, ಆಹವನೀಯ, ಸಭ್ಯ, ಅವಸಥ್ಯ. |

| | | |
|---|---|---|
| ಪಂಚ ಆತ್ಮಗಳು | = | ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅವ್ಯಕ್ತ. |
| ಪಂಚ ಇಂದ್ರಿಯಗಳು | = | ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ. |
| ಪಂಚಪ್ರಾಣಗಳು, ಪಂಚವಾಯುಗಳು | = | ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ. |
| ಪಂಚ ಉಪವಾಯುಗಳು | = | ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜನಯ. |
| ಪಂಚ ಭಕ್ಷ್ಯಗಳು | = | ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯ, ಪರಮಾನ್ನ. |
| ಪಂಚ ಭೂತಗಳು | = | ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ. |
| ಪಂಚ ಭೇದಗಳು | = | ಈಶ-ಜೀವ-ಜಡ, ಈಶ-ಜೀವ, ಜೀವ-ಜಡ, ಜೀವ-ಜೀವ, ಜಡ-ಜಡ. |
| ಪಂಚ ಮುದ್ರೆಗಳು | = | ೧)ಆವಾಹನಿ, ಸ್ಥಾಪನೀ, ಸನ್ನಿಧಾಪನೀ, ಸಂಬೋಧನೀ, ಸಮ್ಮುಖೀಕರಣೀ.<br>೨) ಶಂಖ, ಚಕ್ರ, ಗದಾ, ಪದ್ಮ, ನಾರಾಯಣ (ದ್ವೈತ). |
| ಪಂಚಾರತಿಗಳು | = | ದೀಪ, ಕಮಲ, ವಸ್ತ್ರ, ಪೂಗೀಫಲ, ಆಮ್ರ ಫಲ ಇವುಗಳು ಸಮಾಯೋಗ ಸಾಂಕೇತಿಕ ಐದು ದೀಪಗಳ ಆರತಿ. |
| ಎಂಟು ಅಂಗಗಳು (ಸಾಷ್ಟಾಂಗ) | = | ೧) ಉರಸ್ಸು, ಶಿರಸ್ಸು, ದೃಷ್ಟಿ, ಮನಸ್ಸು, ಶ್ರದ್ಧೆ, ಪಾದಗಳು, ಕೈಗಳು, ಕರಣಗಳು.(ಯೋಗ)<br>೨)ಯಮ, ನಿಯಮ, ಆಸನ ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ,ಧಾರಣ ಸಮಾಧಿ. |
| ಆರು ಚಕ್ರಗಳು | = | ಮೂಲಾಧಾರ, ಸ್ವಾದಿಷ್ಠಾನ, ಮಣಿಪೂರ, ಅನಾಹತ. ವಿಶುದ್ಧ, ಆಜ್ಞಾ(ಯೌಗಿಕ). |

| | | |
|---|---|---|
| ಆರು ದರ್ಶನಗಳು | = | ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸೆ, ಉತ್ತರಮೀಮಾಂಸೆ. |
| ಆರು ರಿಪುಗಳು | = | ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ. |
| ಏಳುಧಾತುಗಳು | = | ಚರ್ಮ, ರುಧಿರ, ಮಾಂಸ, ಮೇದಸ್ಸು, ಮಜ್ಜೆ, ಅಸ್ಥಿ, ಶುಕ್ಲ. |
| ಏಳು ವ್ಯಸನಗಳು | = | ಜೂಜು, ಬೇಟೆ, ಕಳ್ಳು, ಮಾಂಸ ಕುತ್ಸಿತ, ವೇಶ್ಯೆ, ಪರದಾರ. |
| ಏಳುಸಾಗರಗಳು | = | ಲವಣ, ಪಯಸ್ಸು, ಸರ್ಪಿಸ್ಸು, ಗುಡ, ದಧಿ, ಶರ್ಕರಾ, ತೀರ್ಥವಾರಿ. |
| ಎಂಟು ಮದಗಳು | = | ಅನ್ನ, ಅರ್ಥ, ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ, ಯೌವನ. |
| ಎಂಟು ಸಿದ್ಧಿಗಳು | = | ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ. |
| ಒಂಭತ್ತು ನಿಧಿಗಳು | = | ಪದ್ಮ, ಮಹಾಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ಖರ್ವ. |
| ಒಂಭತ್ತುವಿಧಭಕ್ತಿ | = | ಶ್ರವಣ, ಕೀರ್ತನ, ಸ್ಮರಣ, ಪಾದಸೇವನ ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ |
| ಹತ್ತು ಅವತಾರಗಳು | = | ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ. |
| ಹತ್ತುನಾಡಿಗಳು | = | ಇಡಾ, ಪಿಂಗಳಾ, ಸುಷಮ್ನಾ, ಗಾಂಧಾರೀ, ಗಜಜಿಹ್ವಾ, ಪೂಷಾ, ಯಶಸ್ವಿನೀ, ಆಲಂಬುಷಾ, ಕುಹೂ, ಶಂಖಿನೀ |
| ಹತ್ತುಇಂದ್ರಿಯಗಳು | = | ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ, ಪಾಣಿ, ಪಾದ, ವಾಯು, ಉಪಸ್ಥ. |
| ಚತುರ್ದಶ ಭುವನಗಳು (ಲೋಕಗಳು) | = | ಭೂಲೋಕ, ಭುವಲೋಕ, ಸ್ವಲೋಕ, ಮಹಲೋಕ, ಜನೋಲೋಕ, |

| | | |
|---|---|---|
| | | ತಪೋಲೋಕ, ಸತ್ಯಲೋಕ, ಸುತಲ,ಅತಳ, ವಿತಳ, ರಸಾತಲ, ತಲಾತಲ, ಮಹಾತಲ, ಪಾತಾಲ. |
| ಷೋಡಶಉಪಚಾರಗಳು | = | ಸ್ವಾಗತ, ಆಸನ, ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ಸ್ನಾನ, ವಸ್ತ್ರಾಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ,ನೀರಾಜನ, ಪ್ರದಕ್ಷಿಣೆ, ನಮಸ್ಕಾರ. |
| ಅಷ್ಟಾದಶ ಪುರಾಣಗಳು | = | ಮತ್ಸ್ಯ, ಮಾರ್ಕಂಡೇಯ, ಭವಿಷ್ಯ, ಭಾಗವತ, ಬ್ರಹ್ಮ, ಬ್ರಹ್ಮಾಂಡ, ಬ್ರಹ್ಮವೈವರ್ತ, ವಾಮನ, ವಾಯು, ವಿಷ್ಣು, ವರಾಹ, ಅಗ್ನಿ, ನಾರದ, ಪದ್ಮ,ಲಿಂಗ, ಗರುಡ, ಕೂರ್ಮ, ಸ್ಕಂದ. |
| ೨೧೬೦೦ ಜಪಗಳು | = | ಒಂದು ದಿನದಲ್ಲಿ ಮನುಷ್ಯ ಉಸಿರಾಡುವ ಸಂಖ್ಯೆ. |

# ಅನುಬಂಧ-೩

## ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದಮ ಹೆಸರುಗಳು
## ಸಾಂದರ್ಭಿಕ ಪೌರಣಿಕ ವ್ಯಕ್ತಿಗಳು

| | | |
|---|---|---|
| ಕರಿವರ । ಕರಿಯ ಸೆರೆಯ ಬಿಡಿಸಿದಾತ | = | ಗಜೇಂದ್ರನೆಂಬ ಆನೆಗೆ ಮೋಕ್ಷ ಕೊಟ್ಟದ್ದು |
| ಕಂಜಲೋಚನ | = | ತಾವರೆಯಂಥ ಕಣ್ಣುಳ್ಳ |
| ಕಾಮನ್ಮೆಯ್ಯ | = | ಮನ್ಮಥನ ತಂದೆ |
| ಗಿರಿಯ ಬೆರಳೆತ್ತಿ | = | ಗೋವರ್ಧನ ಗಿರಿಯನೆತ್ತಿದ |
| ದಾಮೋದರ | = | ಉದರಕ್ಕೆ ಹಗ್ಗಿ ಬಿಗಿಸಿಕೊಂಡ |
| ನವನೀತಚೋರ | = | ಬೆಣ್ಣೆ ಕಳ್ಳ |
| ನಾಮತೇಲಿಸಿತು | = | ನೀರೊಳು |
| ಪರ್ವತ | = | ಕಪಿಗಳು ರಾಮನ ಹೆಸರಿನಿಂದ ಒಗೆದ ಕಲ್ಲುಗಳು ತೇಲಿ ಕಟ್ಟಿದ ಸೇತುಬಂಧ ಸಂದರ್ಭ |
| ಪಿತಾಮಹನ ಪಿತ | = | ಬ್ರಹ್ಮನ ತಂದೆ |
| ಬಲಿಯ ಬಾಗಿಲ ಕಾಯ್ದ | = | ತ್ರಿವಿಕ್ರಮನಾಗಿ ಬಲಿಯನ್ನು ಪಾತಾಳಕ್ಕೆ ಮೆಟ್ಟಿ ಅವನ ಭಕ್ತಿಗಾಗಿ ಅವನ ಮನೆಯ ಬಾಗಿಲ ಕಾಯ್ದ |
| ಬೊಮ್ಮನ ಪಡೆದಾತ | = | ಬ್ರಹ್ಮನನ್ನು ಪಡೆದವನು |
| ಮಾವನ ಮರ್ದನ | = | ಕಂಸನನ್ನು ಸಂಹರಿಸಿದ |
| ಮಾನವ ಮಾವನೊಳು ಮಾವನಿತ್ತ ಮಣಿಯ ತಂದವನು | = | (ಮಾವ) ಸತ್ರಾಜಿತನ ಶ್ಯಮಂತಕ ಮಣಿಯನ್ನು (ಮಾವ) ಜಾಂಬವಂತನೊಂದಿಗೆ ಕಾದಿ ತಂದ ಕೃಷ್ಣ |

| | | |
|---|---|---|
| ಮುರಹರ | = | ಮುರನೆಂಬ ಅಸುರನನ್ನು ಕೊಂದ |
| ಮೈದುನ ಬೋವ | = | ಅರ್ಜುನನ ಸಾರಥಿ |
| ಶಿಲೆಗೆ ಉದ್ಧರಗತಿಯ ನಿತ್ತಾತ | = | ಗೌತಮ ಋಷಿಯ ಶಾಪದಿಂದ ಶಿಲೆಯಾದ ಅಹಲ್ಯೆಯನ್ನು ಉದ್ಧರಿಸಿದ |
| ಶೇಷಶಯನ | = | ಆದಿಶೇಷನ ಮೇಲೆ ಮಲಗಿದವ |
| ಸಾಮಗಾಯನ ಪ್ರಿಯ | = | ಸಾಮವೇದವನ್ನು ಮೆಚ್ಚಿದವ |
| ಸೋಮಶೇಖರ ಧ್ಯೇಯ | = | ಈಶ್ವರನ ಉಪಾಸ್ಯ |

## ಇತರ

| | | |
|---|---|---|
| ಅಕ್ರೂರ | = | ಕಂಸನ ಅಷ್ಟಮಂತ್ರಿಗಳಲ್ಲಿ ಒಬ್ಬ. ಗೋಕುಲಕ್ಕೆ ಹೋಗಿ ಬಲರಾಮ, ಕೃಷ್ಣರನ್ನು ಕರೆತರುವಾಗ ದಾರಿಯಲ್ಲಿ ಕೃಷ್ಣನ ದಿವ್ಯದರ್ಶನ ಪಡೆದವ |
| ಅಜಮಿಳ | = | ಪರಮ ಪಾಪಿಯಾದ ಈತ ಅಂತ್ಯದಲ್ಲಿ ತನ್ನ ಮಗ ನಾರಾಯಣನನ್ನು 'ನಾರಗ' ಎಂದು ಕರೆದು ಮುಕ್ತಿಗಳಿಸಿದ (ನಾಮಮಹಿಮೆ) |
| ಅಂಗದ | = | ಕಪಿಶ್ರೇಷ್ಠ ವಾಲಿಯ ಮಗ, ವಾಲಿಯ ಸಂಹಾರದ ಅನಂತರ ರಾಮನು ಅಂಗದನಿಗೆ ರಾಜ್ಯಾಭಿಷೇಕ ಮಾಡಿದನು |
| ಅಂಬರೀಷ | = | ವಿಷ್ಣು ಭಕ್ತ, ದ್ವಾದಶಿ ಪಾರಣೆಯಂದು ಪರೀಕ್ಷಿಸಲು ಬಂದ ದೂರ್ವಾಸ ಮುನಿಗಳ ಶಾಪಕ್ಕೆ ಗುರಿಯಾದಾಗ, ದೂರ್ವಾಸರನ್ನು ಬೆನ್ನಟ್ಟಿ ಬಂದ ವಿಷ್ಣುವಿನ ಚಕ್ರಾಯುಧದಿಂದ ಪಾರಾಗಲು ಅವರು ಅಂಬರೀಷನನ್ನೆ ಮೊರೆಹೊಕ್ಕರು (ಭಕ್ತವತ್ಸಲನ ಮಹಿಮೆ) |
| ಉದ್ಧವ | = | ವಿಷ್ಣು ಭಕ್ತ, ಕೃಷ್ಣನ ಗೋಕುಲ ನಿರ್ಗಮನ ದಿಂದಾಗಿ ಪರಿತಪಿಸುತ್ತಿದ್ದ ಗೋಪಿಯರಿಗೆ ಸ್ವಾಂತನ ಹೇಳಲು ಕೃಷ್ಣನ ಪರವಾಗಿ ಹೋದ ವ್ಯಕ್ತಿ |

| | | |
|---|---|---|
| ಉಪಮನ್ಯು | = | ಶಿವಭಕ್ತ |
| ಕುಬ್ಜೆ | = | ಕಂಸನ ಸ್ತ್ರೀ ಪರಿವಾರದಲ್ಲಿದ್ದ ಗೂನ ಸ್ತ್ರೀ |
| ಪುಂಡಲೀಕ | = | ವಿಷ್ಣುಭಕ್ತ, ತಂದೆಯ ಸೇವೆಗಾಗಿ ದೇವರನ್ನೂ ಕಾಯಿಸಿದ. ಪಿತೃಭಕ್ತ ಪರಮಾತ್ಮನ ಕೃಪೆಗೆ ಪಾತ್ರನಾದವನು. |
| ಬಲಿಚಕ್ರವರ್ತಿ | = | ಇಂದ್ರನನ್ನು ಗೆದ್ದು ಬಲಿಷ್ಠನಾಗಿದ್ದ ಬಲಿ ದಾನಶೂರ, ವಿಷ್ಣುವು ವಾಮನ ರೂಪದಿಂದ ಬಂದು ಮೂರು ಅಡಿ ಭೂಮಿಯನ್ನು ಕೇಳಿ ತ್ರಿವಿಕ್ರಮವಾಗಿ ಎರಡು ಅಡಿಗಳಲ್ಲಿ ಭೂಮಿ ಆಕಾಶಗಳನ್ನು ಪಡೆದು ಮೂರನೆಯ ಅಡಿಯಲ್ಲಿ ಬಲಿಯನ್ನು ಪಾತಾಳಕ್ಕೆ ಮೆಟ್ಟಿದ. |
| ಬಾಣಾಸುರ | = | ಶಿವಭಕ್ತ. ಈತನ ಮಗಳು ಉಷೆ, ಕೃಷ್ಣನ ಮೊಮ್ಮಗ ಅನಿರುದ್ಧ ಪರಸ್ಪರ ಅನುರಕ್ತರಾದಾಗ, ಬಾಣಾಸುರ, ಕೃಷ್ಣರಲ್ಲಿ ಯುದ್ಧ, ಬಾಣಾಸುರ ಹತನಾಗಿ ಕೃಷ್ಣನಿಗೆ ಶರಣು. |
| ಭಸ್ಮಾಸುರ | = | ಈಶ್ವರನಿಂದ ವರ ಪಡೆದವ, ಯಾರ ತಲೆ ಮೇಲೆ ಕೈ ಇಟ್ಟರೂ ಅವರು ಭಸ್ಮವಾಗುವ ವರದಿಂದ ಬೀಗಿ ಈಶ್ವರನ ಮೇಲೆಯೇ ಕೈ ಇಡಲು ಬಂದಾಗ ವಿಷ್ಣು ಮೋಹಿನಿ ರೂಪವನ್ನು ಧರಿಸಿ ಭಸ್ಮಾಸುರನು ತನ್ನ ಕೈಯನ್ನು ತನ್ನ ತಲೆಯ ಮೇಲೆಯೇ ಇಡುವಂತೆ ಮಾಡಿ ಸಂಹರಿಸಿದ. |
| ಭೃಗು | = | ಒಬ್ಬ ಋಷಿ, ಹರಿಹರ ಬ್ರಹ್ಮರಲ್ಲಿ ಯಾರು ಶ್ರೇಷ್ಠರೆಂದು ಪರೀಕ್ಷಿಸಲು ಹೋದಾಗ ಹರ–ಬ್ರಹ್ಮರು ಅವನನ್ನು ಗಮನಿಸದಿದ್ದಾಗ ಅವರ ಬಗೆ ಸಿಟ್ಟು ಲಕ್ಷ್ಮೀಸಮೇತನಾದ ಹರಿಯು ಸತ್ಕರಿಸಲು ಹರಿ ಸರ್ವೋತ್ತಮನೆಂದು ಸಾರಿದವ. |

| | | |
|---|---|---|
| ರುಕ್ಮಾಂಗದ | = | ವಿಷ್ಣುಭಕ್ತ, ಏಕಾದಶಿ ವ್ರತನಿಷ್ಠ, ಅವನ ನಿಷ್ಠೆಯನ್ನು ಭಂಗ ಪಡಿಸಲು ಬ್ರಹ್ಮ ಮೋಹಿನಿಯನ್ನು ಕಳಿಸಿದನು. ಆಕೆಗೆ ಮರುಳಾಗದ ರುಕ್ಮಾಂಗದ ತನ್ನ ಮಗನನ್ನೆ ಬಲಿ ಕೊಡಲು ಸಿದ್ಧನಾಗಿ ಪರಮಾತ್ಮನಿಗೆ ಪ್ರಿಯನಾದನು. |
| ವಾಲಿ | = | ಕಪಿ ಶ್ರೇಷ್ಠರಲ್ಲಿಯ ಒಬ್ಬ. ಸುಗ್ರೀವನ ಅಣ್ಣ ರಾಮನಿಂದ ಹತನಾದ. |
| ಶುಕದೇವ | = | ವೇದವ್ಯಾಸರ ಪುತ್ರ. ಶುಕಮುನಿಗಳೆಂದೂ ಹೆಸರು |
| ಸರಸಿಜೋದ್ಭವ | = | ವಿಷ್ಣುವಿನ ನಾಭಿಯಲ್ಲಿ ಅರಳಿದ ಕಮಲದಲ್ಲಿ ಉದಯಿಸಿದ ಬ್ರಹ್ಮ |
| ಸಾಸಾರ್ಜುನ | = | ಸಹಸ್ರ ಬಾಹುಗಳುಳ್ಳ ಕಾರ್ತ್ಯವೀರ್ಯಾರ್ಜುನ ಜಮದಗ್ನಿ ಪುತ್ರ ಪರಶುರಾಮನಿಂದ ಹತ |
| ಸುದಾಮ | = | ಕೃಷ್ಣನ ಬಾಲ್ಯ ಸ್ನೇಹಿತ ಬಡವ, ಸ್ನೇಹಿತನ ಹಿಡಿ ಅವಲಕ್ಕಿಯನ್ನು ತಿಂದು ಕೃಷ್ಣ ಅಖಂಡ ಸಂಪತ್ತನ್ನು ಅನುಗ್ರಹಿಸಿದ. |

# ಅನುಬಂಧ–೪

## ಕೀರ್ತನೆಗಳ ಅಕಾರಾದಿ

| ಕ್ರಮ. ಸಂಖ್ಯೆ. | ಕೀರ್ತನೆಯ ಪ್ರಾರಂಭದ ಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೯೯. | ಸಿಕ್ಕಿದೆಲ್ಲೊ ಕೃಷ್ಣ ನೀನು | ೧೬೦ |
| ೩೦೦. | ಸಿದ್ಧ ನೋಡಿರೋ ಸಾಕ್ಷಾತ್ಕಾರವ | ೩೪೩ |
| ೩೦೧. | ಸಿದ್ಧಾಂತವಿದು ನೋಡಿ ಸದ್ಗುರುವಿನ ಕೃಪೆಯು | ೩೩೨ |
| ೩೦೨. | ಸುಗ್ಗಿ ಮಾಡುವ ಬನ್ನಿ ಸುಜ್ಞಾನದ | ೩೦೭ |
| ೩೦೩. | ಸುಮ್ಮನಹುದು ನೋಡಿ ಸ್ವಾತ್ಮ ಸುಖದನುಭವ | ೩೦೮ |
| ೩೦೪. | ಸುಮ್ಮನಹುದೆ ಬ್ರಹ್ಮಾನಂದದ ಸುಖವು | ೩೦೯ |
| ೩೦೫. | ಸಮ್ಮ ನಿರಬ್ಯಾಡಿ ನಿಮ್ಮೊಳು ನೀಟ ನೋಡಿ | ೩೧೦ |
| ೩೦೬. | ಸುಮ್ಮನಿರಬೇಕು ಸುಜ್ಞಾನಿ ಜಗದೊಳಗೆ | ೩೧೧ |
| ೩೦೭. | ಸುಮ್ಮನೆ ದೊರಕೊಂಬುದೆ | ೩೧೨ |
| ೩೦೮. | ಸುಮ್ಮನೆ ಸುರಿವದೆ ಬ್ರಹ್ಮಾನಂದದ ಸುಖ | ೩೧೩ |
| ೩೦೯. | ಸುಲಭ ಸುಸೇವೆ ನೋಡಿ ಶ್ರೀ ಹರಿಯ | ೧೬೧ |
| ೩೧೦. | ಸುವ್ವ ಶ್ರೀ ಗುರುನಾಥ ಸುವ್ವಿ | ೩೩೩ |
| ೩೧೧. | ಸೃಷ್ಟಿಯೊಳಗೆಲ್ಲ ದುಷ್ಟರ ಪ್ರಭೆಯಾಗಿ | ೩೩೪ |
| ೩೧೨. | ಸೇವೆ ಮಾಡಿ ಹರಿಯ ನವವಿಧ ಪರಿಯ | ೧೬೨ |
| ೩೧೩. | ಸೇವೆ ಸುಖವೊ ಶ್ರೀ ಹರಿಸೇವೆ ಸುಖವೊ | ೧೬೩ |
| ೩೧೪. | ಸಂಸಾರ ಚಿಂತೆ ನಮ್ಮ ಸ್ವಾಮಿ ಶ್ರೀ ಹರಿಗುಂಟು | ೧೬೪ |
| ೩೧೫. | ಹಣ್ಣು ಕೊಳ್ಳಿರೋ ಪುಣ್ಯವಂತರು | ೧೬೫ |
| ೩೧೬. | ಹರಿನಂಬಿದವರಿಗೆ ಸರಿಯೆ ಜಗದೊಳು | ೧೬೬ |
| ೩೧೭. | ಹರಿನಾಮ ಘೋಷ | ೧೬೭ |
| ೩೧೮. | ಹರಿನಿನ್ನ ಭಕುತಿಗುನ್ಮತ ಬಿಡಬೇಕು | ೧೬೮ |
| ೩೧೯. | ಹರಿಭಕಾತರ ದರುಶನವು ಅತಿ ಹರುಷವು | ೧೬೯ |
| ೩೨೦. | ಹರಿಯನರಿಯದ ಜನುಮ | ೧೭೦ |
| ೩೨೧. | ಹರಿಯನರಿಯದಿಹ್ಯ ನರಜನ್ಮವ್ಯಾತಕೆ | ೧೭೧ |
| ೩೨೨. | ಹರಿಯೆಂದು ಮನವೆ ನೀ ಸ್ಮರಿಸೋ | ೧೭೨ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ ಜೆ.ಸಿ. ರಸ್ತೆ
ಬೆಂಗಳೂರು